ಸಂಚಿಕೆ 1 / ಅಕ್ಟೋಬರ್ 2021
ಚಾತುರ್ಮಾಸಿಕ / ಕನ್ನಡ ಆವೃತ್ತಿ / ಬೆಂಗಳೂರು

Azim Premji University

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

# ಲರ್ನಿಂಗ್ ಕರ್ವ್

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಒಂದು ಪ್ರಕಟಣೆ



## ಪೌರತ್ವಕ್ಕಾಗಿ ಶಿಕ್ಷಣ

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ‘ಲರ್ನಿಂಗ್ ಕರ್ವ್’, ಶಿಕ್ಷಣವನ್ನು ಕುರಿತ ಪ್ರಕಟಣೆಯಾಗಿದ್ದು ಸಾರ್ವಕಾಲಿಕ ಮಹತ್ವವುಳ್ಳ ಮತ್ತು ಮೌಲ್ಯವುಳ್ಳ ಸಾಂದರ್ಭಿಕ ಹಾಗು ನಿರ್ದಿಷ್ಟ ವಿಷಯಾಧಾರಿತ ಚರ್ಚಾ ವಿಷಯಗಳನ್ನು ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶಾಲಾ ಮುಖ್ಯಸ್ಥರು, ಶಿಕ್ಷಣಾಧಿಕಾರಿಗಳು, ಶಿಕ್ಷಣ ಕಾರ್ಯಕರ್ತರು, ಪೋಷಕರು ಹಾಗು ಸರ್ಕಾರೇತರ ಸಂಸ್ಥೆಗಳಿಗೆ ತಲುಪಿಸುವ ಮಹತ್ತರ ಆಶಯವನ್ನು ಹೊಂದಿದೆ. ಇದು ವಿಭಿನ್ನ ಅಭಿಪ್ರಾಯಗಳನ್ನು ಮತ್ತು ದೃಷ್ಟಿಕೋನಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಒದಗಿಸುವುದೇ ಅಲ್ಲದೆ ಹೊಸ ಹೊಸ ಮತ್ತು ತಜ್ಞ ವಿಚಾರಧಾರೆಗಳನ್ನು, ಆಲೋಚನೆಯನ್ನು ಪ್ರಚೋದಿಸುವ ದೃಷ್ಟಿಕೋನಗಳನ್ನು ಹಾಗು ನವೀನ ಬೋಧನಾ ವಿಧಾನಗಳ ಕಥನಗಳನ್ನು ಹಂಚಿಕೊಳ್ಳಲು ಉತ್ತೇಜಿಸುತ್ತದೆ. ಶೈಕ್ಷಣಿಕ ರಂಗದ ಈ ವಿಚಾರ ಮಂಥನದಲ್ಲಿ ಶೈಕ್ಷಣಿಕ ಜ್ಞಾನ ಮತ್ತು ಪ್ರಾಯೋಗಿಕ ಅನುಭವಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಯತ್ನ ನಮ್ಮದಾಗಿದೆ.

# ಸಂಪಾದಕರ ಮಾತು



ಪುರಾತನ ನಾಗರೀಕತೆಗೆ ಹೆಸರಾದ, ಏಳು ದಶಕಗಳಗಿಂದ ಸ್ವಲ್ಪ ಹೆಚ್ಚಿನ ಕಾಲದ ಹಿಂದೆಯಷ್ಟೇ ವಸಾಹತುಶಾಹಿ ಆಳ್ವಿಕೆಯ ಬೂದಿಯಿಂದ ಫೀನಿಕ್ಸ್‌ನಂತೆ ಎದ್ದು ಬಂದ ದೇಶವೊಂದರಲ್ಲಿ ಉತ್ತಮ ನಾಗರಿಕನ ಸ್ವರೂಪ ಏನಾಗಿರುತ್ತದೆ.

ಸಾಮಾನ್ಯವಾಗಿ ದೇಶಗಳು ಬಾವುಟ ಮತ್ತು ಅದು ಸಂಕೇತಿಸುವ ಎಲ್ಲಾ ಅಂಶಗಳಿಗೆ ನಿಷ್ಠೆ ತೋರುವುದು, ದೇಶದ ಕಾರ್ಯವ್ಯವಸ್ಥೆಗೆ ವಿಧೇಯನಾಗಿರುವುದು, ಶತ್ರುವಿನ ದಾಳಿಯ ವಿರುದ್ಧ ದೇಶವನ್ನು ರಕ್ಷಿಸಲು ಸದಾ ಸಿದ್ಧನಾಗಿರುವುದು ಮತ್ತು ಮಾನವೀಯ ಗುಣವನ್ನು ಹೊಂದಿರುವುದನ್ನೇ ಉತ್ತಮ ಪೌರತ್ವ ಎಚಿದು ವ್ಯಾಖ್ಯಾನಿಸಿವೆ. ಉತ್ತಮ ಭಾರತೀಯ ನಾಗರಿಕನೂ ಸಹ ಈ ಮೇಲಿನ ಎಲ್ಲಾ ಅಗತ್ಯತೆಗಳನ್ನು ಪೂರೈಸಬೇಕು. ನಿಷ್ಠೆ ಮತ್ತು ದೇಶಪ್ರೇಮದ ಬದ್ಧತೆಗೆ ಪ್ರತಿಯಾಗಿ ನಾಗರಿಕರಲ್ಲಿ ಸಮಾನತೆ, ನ್ಯಾಯ, ಭ್ರಾತೃತ್ವ ಮತ್ತು ಸ್ವಾತಂತ್ರ್ಯ ಮುಂತಾದ ಹಕ್ಕುಗಳು ನೆಲಸುತ್ತವೆ.

ಆದರೆ ಭಾರತದಲ್ಲಿ ನಾವು ನ್ಯಾಯ, ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವಕ್ಕೆ ಮೊದಲ ಆದ್ಯತೆ ನೀಡದೆ ಇದ್ದರೆ ಜಾತಿ, ವರ್ಗ, ಲಿಂಗ ಮತ್ತು ಧರ್ಮ ಮುಂತಾದ ಅನೇಕ ಅಂತರ್ನಿರ್ಮಿತ ವಿಭಜನೆಗಳು ಮತ್ತೆ ನಮ್ಮನ್ನು ಬೇರ್ಪಡಿಸಬಹುದು. ಆಧುನಿಕ ಪೌರತ್ವದ ಚಿಂತನೆಗಳಿಗೆ 1949ರ ನವೆಂಬರ್ 6ರಷ್ಟು ಹಿಂದೆಯೇ ಅಡಿಪಾಯ ಹಾಕಿದ್ದನ್ನು ಗುರುತಿಸಬಹುದು. ದೂರದೃಷ್ಟಿಯನ್ನು ಹೊಂದಿದ್ದ ಬಿ.ಆರ್ ಅಂಬೇಡ್ಕರ್ ಅವರ ನೇತೃತ್ವದ ಭಾರತೀಯರ ತಂಡವೊಂದು ಹೊಸ ದೇಶದ ಸಂವಿಧಾನವನ್ನು ನಮಗೆ ನೀಡಿತು ಹಾಗು ನಮಗೆಲ್ಲರಿಗೆ ನ್ಯಾಯ, ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವ – ಈ ನಾಲ್ಕು ಅತ್ಯಂತ ಉನ್ನತ ಆದರ್ಶಗಳನ್ನು ದಯಪಾಲಿಸಿತು. ಈ ಆದರ್ಶಗಳಿಗೆ, ಕಾಲಕ್ಕೆ ತಕ್ಕಂತೆ ಬದಲಾಗುವ, ಆದರೆ ಸದಾ ಒಳಿತನ್ನೇ ತರುವ ಚಲನಶೀಲ ಸಮಾಜವನ್ನು ರೂಪಿಸುವ ಶಕ್ತಿ ಇದೆ.

ಭಾರತೀಯ ಸ್ವಾತಂತ್ರ್ಯದ ಈ ಘೋಷಣೆಯು, ಸರಿಸುಮಾರು ಮೊದಲ ಬಾರಿಗೆ, ನಾಗರಿಕ ಸಮಾಜವು ಹೇಗಿರಬೇಕು ಮತ್ತು ಹೇಗಿರಬಹುದು ಎಂಬುದಾಗಿ ನಾವು ಒಂದು ಜನ ಸಮೂಹವಾಗಿ ವಾಸ್ತವವನ್ನು ಅಭಿವ್ಯಕ್ತಿಗೊಳಿಸುವಂತೆ ಮಾಡಿತು. ಇದು ವಿದೇಶಿ ಆಳ್ವಿಕೆಯಿಂದ ನಮ್ಮ ಸ್ವಾತಂತ್ರ್ಯದ ದೃಢೀಕರಣ ಮತ್ತು ಈ ನಾಲ್ಕು ಆದರ್ಶಗಳು, ಒಂದು ರಾಷ್ಟ್ರವಾಗಿ ನಮ್ಮ ಪ್ರಗತಿಗೆ ಹೇಗೆ ಸಹಕಾರಿಯಾಗಲಿವೆ ಎಂಬ ಸತ್ಯವನ್ನು ನಾವು ಗುರುತಿಸುವಂತಾಯಿತು. ಪೌರತ್ವದ ತತ್ವವು ಇನ್ನಷ್ಟು ಒಳಿತಿಗಾಗಿ ಜನರನ್ನು ಒಗ್ಗೂಡಿಸುವ ಶಕ್ತಿಯನ್ನು ಹೊಂದಿದೆ.

ಇನ್ನೂ ಎಳೆತಾದ ದೇಶವು ಅಭಿವೃದ್ಧಿ ಸಾಧಿಸುವಂತಾಗಲು ಮತ್ತು ಭಾರತೀಯರು ಏನು ಕನಸು ಕಂಡಿದ್ದರೋ ಆ ಕನಸು ನನಸಾಗಲು, ಬೇರ್ಪಡಿಸಲಾಗದ ವೈಯಕ್ತಿಕ ಹಕ್ಕುಗಳನ್ನು (ಧರ್ಮದ ಆಯ್ಕೆ, ವಾಸ ಸ್ಥಳ ಇತ್ಯಾದಿ) ರಕ್ಷಿಸುವ ಜೊತೆಗೆ ಭವಿಷ್ಯದ ಜನಾಂಗದಲ್ಲಿ ಈ ಉದಾತ್ತ ಆದರ್ಶಗಳನ್ನು ಹೇಗೆ ಬೆಳಸಬೇಕು ಎನ್ನುವುದೇ ಪೌರತ್ವ ಶಿಕ್ಷಣದ ಮೂಲಾಧಾರವಾಗಿದೆ. ಇತರರನ್ನು ಗೌರವಿಸುವುದು, ಅವರ ಆಯ್ಕೆಗಳು ಮತ್ತು ಜೀವನ ವಿಧಾನಗಳನ್ನು ಮನ್ನಿಸುವುದು, ಇತರ ನಾಗರಿಕರ ಕುರಿತು ಸಹ ಯೋಚಿಸುವುದು, ಒಟ್ಟಿಗೆ ಕೆಲಸ ಮಾಡುವುದು, ಪ್ರತಿ ವ್ಯಕ್ತಿಯನ್ನು ಘನತೆಯಿಂದ ಕಾಣುವುದು ಮುಂತಾದವುಗಳನ್ನು ಪ್ರಾಯೋಗಿಕವಾಗಿ ಪಾಲಿಸುವುದು ಕಷ್ಟಕರವಾದ ಕೆಲಸ. ಹೀಗಾಗಿಯೇ ನಮಗೆ ಮತ್ತು ಇತರರಿಗೆ ಒಂದು ವಿಷಯವನ್ನು ಕಲಿಸಬೇಕಾದ ಮತ್ತು ಜ್ಞಾಪಿಸಬೇಕಾದ ಅಗತ್ಯತೆ ಎದ್ದು ಕಾಣುತ್ತದೆ. ಅದೇನೆಂದರೆ, ಶಿಕ್ಷಣದ ಮೂಲಸಾರವನ್ನು ಒಂದೇ ತತ್ವದ ಅಡಿಯಲ್ಲಿ ಸಂಕ್ಷಿಪ್ತಗೊಳಿಸ–ಬಹುದು: ನಮ್ಮನ್ನು ಇತರರು ಹೇಗೆ ನೋಡಿಕೊಳ್ಳಬೇಕು ಎಂದು ನಾವು ನಿರೀಕ್ಷಿಸುತ್ತೇವೋ, ಅದೇ ರೀತಿ ನಾವೂ ಇತರರನ್ನು ನೋಡಿಕೊಳ್ಳುವುದು.

ಪೌರತ್ವದಂತಹ ಎಲ್ಲವನ್ನೂ ಒಳಗೊಂಡಿರುವ ಪರಿಕಲ್ಪನೆಯನ್ನು ಸಮಷ್ಟಿ ಮಟ್ಟದಲ್ಲಿ ಕಲಿಸಲು ಸಾಧ್ಯವಿಲ್ಲ ಎನ್ನುವುದು ಸ್ಪಷ್ಟ. ಇದನ್ನು ಸಮಾಜದ ಅತ್ಯಂತ ಸಣ್ಣ (ಆದರೂ ಅತ್ಯಂತ ಪ್ರಮುಖ) ಘಟಕವೆನಿಸಿರುವ ಕುಟುಂಬದಿಂದಲೇ ಪ್ರಾರಂಭಿಸಬೇಕು ಹಾಗು ಒಂದೊಂದೇ ಹಂತಕ್ಕೆ ವಿಸ್ತೃತಗೊಳಿಸಿದಲ್ಲಿ ಮಿತ್ರರು, ಅಪರಿಚಿತರು ಮತ್ತು ಅಂತಿಮವಾಗಿ ಸಮಾಜ ಮತ್ತು ದೇಶದ ಮಟ್ಟಕ್ಕೆ ಹರಡಬೇಕು. ಹೀಗಾಗಿಯೇ, ಹುಟ್ಟಿನಿಂದಲೇ ನಾಗರಿಕರಾಗಿರುವ ಮಕ್ಕಳಲ್ಲಿ, – ಅವರು ನೋಡಲು ಇಚ್ಛಿಸುವ ಬದಲಾವಣೆಯ ಹರಿಕಾರರಾಗಲು ಅವರ ಮನೋಭಾವ ಹೇಗಿರಬೇಕು ಎಂಬುದನ್ನು ಅವರಲ್ಲಿ ಬೆಳಸಲು, ಶಾಲೆಯು (ಮುಖ್ಯವಾಗಿ ಪ್ರಾಥಮಿಕ ಶಾಲಾ ವರ್ಷಗಳು) ಸೂಕ್ತ ತಾಣ ಎಂದು ಪರಿಗಣಿಸಲಾಗಿದೆ. ತಮ್ಮನ್ನು ತಾವು ನಾಗರಿಕರು ಎಂಬುದಾಗಿ ಕರೆದುಕೊಳ್ಳುವುದು ಎಂದರೆ, ಪಾಸ್‌ಪೋರ್ಟ್ ಅನ್ನು ಹೊಂದಿರುವುದು ಅಥವಾ ಮತದಾನದ ಹಕ್ಕನ್ನು ಬೇಡುವುದಕ್ಕಿಂತಲೂ ಮಿಗಿಲಾದುದು.

ಈ ಸಂಚಿಕೆಗಾಗಿ ನಾವು – ಪೌರತ್ವಕ್ಕಾಗಿ ಶಿಕ್ಷಣ – (Education for Citizenship) ಎಂಬ ವಿಷಯವನ್ನು ಆರಿಸಿದಾಗ, ನಮ್ಮ ಮಕ್ಕಳ ಮನಸ್ಸಿನಲ್ಲಿ ಈ ತತ್ವಗಳನ್ನು ಅಚ್ಚೊತ್ತಲು ದೇಶದಾದ್ಯಂತ ವ್ಯಕ್ತಿಗಳು, ಶಿಕ್ಷಕರು ಮತ್ತು ಸಂಸ್ಥೆಗಳು ಕೈಗೊಂಡಿರುವ ಚಿಂತನೆಯ

ವಿಸ್ತಾರ ಮತ್ತು ಆಳವನ್ನು ಕುರಿತು ನಮಗೇನೂ ತಿಳಿದಿರಲಿಲ್ಲ. ಈ ಸಂಚಿಕೆಯ ಎಲ್ಲಾ ಲೇಖನಗಳು, ಭಾರತೀಯ ಸಂವಿಧಾನದ ಪ್ರಸ್ತಾವನೆಯಲ್ಲಿ ಪ್ರತಿಷ್ಠಾಪಿಸಲಾಗಿರುವ ಕಲ್ಪನೆಗಳನ್ನು ನೆಲೆಗೊಳಿಸಲು ಮತ್ತು ಪೋಷಿಸಲು ತರಗತಿಯಲ್ಲಿ ಎಷ್ಟು ಸಮರ್ಪಿತ ರೀತಿಯಲ್ಲಿ ಪ್ರಯತ್ನಗಳು ನಡೆಯುತ್ತಿವೆ ಎಂಬುದನ್ನು ತೋರಿಸುತ್ತವೆ. ಈ ಲೇಖನಗಳು ಅನೇಕ ದೃಷ್ಟಿಕೋನಗಳನ್ನು ಬೆಳಕಿಗೆ ತಂದಿವೆ. ಪ್ರಧಾನ (Focus) ಲೇಖನಗಳು ಪೌರತ್ವದ ಪರಿಕಲ್ಪನೆಯನ್ನು ನಿರೂಪಿಸಿವೆ ಹಾಗು ಈ ಪರಿಕಲ್ಪನೆಯನ್ನು ಇನ್ನಷ್ಟು ಮುಂದಕ್ಕೆ ಕೊಂಡೊಯ್ಯುವ ವಾಹಕವೆನಿಸಿರುವ ಪಠ್ಯಪುಸ್ತಕಗಳನ್ನು ಪರಿಶೀಲಿಸುವ ಯತ್ನವನ್ನು ಮಾಡಿವೆ. 'ಧ್ವನಿಗಳು' (Voices) ವಿಭಾಗದಲ್ಲಿ, ಸಮಾನತೆ, ಭ್ರಾತೃತ್ವ, ಸ್ವಾತಂತ್ರ್ಯ ಮತ್ತು ಸಮಾನತೆಯ ಆದರ್ಶಗಳನ್ನು ವಾಸ್ತವ ರೂಪದಲ್ಲಿ ಪ್ರದರ್ಶಿಸಿದ ಘಟನೆಗಳನ್ನು ಶಿಕ್ಷಕರು ವಿವರಿಸಿದ್ದಾರೆ. ನಡೆಸಲಾದ ಅನೇಕ ಪ್ರಯೋಗಗಳ ಕಾರಣ ಮಕ್ಕಳಿಗೆ ತಮ್ಮದೇ ನೆಲೆಗಳಲ್ಲಿ ತಮ್ಮ ಧ್ವನಿಯನ್ನು ಕಂಡುಕೊಳ್ಳುವ ಅವಕಾಶ ದೊರೆತಿದೆ ಹಾಗು ಇದು ಅಂತಿಮವಾಗಿ ತಿಳುವಳಿಕೆಯುಳ್ಳ ವಯಸ್ಕ ನಾಗರಿಕರನ್ನು ರೂಪಿಸಲಿದೆ. ಎಲ್ಲರಿಗೂ ಒಳಿತನ್ನು ತರುವ ವಿಚಾರಪೂರ್ಣ ಮತ್ತು ಜವಾಬ್ದಾರಿಯುತ ವರ್ತನೆಯನ್ನು ರೂಪಿಸುವ ಅಭ್ಯಾಸಗಳು ಮತ್ತು ಚಿಂತನಾ ವಿಧಾನಗಳನ್ನು ಬೆಳೆಸುವ ಅವಕಾಶಗಳನ್ನು ಸೃಷ್ಟಿಸುವುದಕ್ಕಾಗಿ ತಮ್ಮ ಸಂಸ್ಥೆಗಳು ರಂಗಭೂಮಿ, ಕಾರ್ಯಾಗಾರ, ಕಥೆ ಹೇಳುವುದು ಮುಂತಾದ ಬೇರೆಬೇರೆ ವಿಧಾನಗಳ ಮೂಲಕ ಮಕ್ಕಳು ಮತ್ತು ಶಿಕ್ಷಕರ ಜೊತೆಗೆ ಹೇಗೆ ಕೆಲಸ ಮಾಡಿವೆ ಎಂಬುದನ್ನು ಲೇಖಕರು ಇಲ್ಲಿ ವಿವರಿಸಿದ್ದಾರೆ.

ಈ ಸಂಚಿಕೆಯ ವಿಚಾರಗಳು ನಿಮ್ಮೆಲ್ಲರಿಗೂ ತುಂಬಾ ಉಪಯುಕ್ತ ಎನಿಸಲಿವೆ ಹಾಗು ದೇಶದಾದ್ಯಂತ ತರಗತಿ ಕೊಠಡಿಗಳಲ್ಲಿ ಇವು ಬಳಕೆಗೆ ಬರಲಿವೆ ಎಂದು ನಾವು ಆಶಿಸುತ್ತೇವೆ.

ದಯವಿಟ್ಟು ನಿಮ್ಮ ಪ್ರತಿಕ್ರಿಯೆಗಳನ್ನು ಈ ಕೆಳಗೆ ನೀಡಿದ ಇಮೇಲ್ ವಿಳಾಸಕ್ಕೆ ಕಳುಹಿಸಿರಿ.

**ಪ್ರೇಮಾ ರಘುನಾಥ್**
ಮುಖ್ಯ ಸಂಪಾದಕಿ
prema.raghunath@azimpremjifoundation.org

# ಪರಿವಿಡಿ

# ಪರಿವಿಡಿ

# ಪೌರತ್ವದ ವಿವಿಧ ಸಂಸ್ಕೃತಿಗಳು । ಬೋಧಿಸಬೇಕಾಗಿರುವುದು ಯಾವುದನ್ನು?

ಅಮ್ಮನ್ ಮದನ್

ಪೌರತ್ವಕ್ಕೆ ಸಂಬಂಧಿಸಿದ ಶಿಕ್ಷಣದ ವಿಷಯವಸ್ತು ಹಾಗು ಗೊತ್ತುಗುರಿಗಳು ಏನಿರಬೇಕು? ಇದು ಸರಳವಾದ ಪ್ರಶ್ನೆಯಲ್ಲ. ಇದನ್ನು ಹಲವಾರು ರೀತಿಯಲ್ಲಿ ಉತ್ತರಿಸಬಹುದು. ಸಾಧ್ಯವಿರುವ ಅನೇಕ ನಿಲುವು, ಧೋರಣೆಗಳಲ್ಲಿ ಒಮ್ಮತವಿಲ್ಲದಿರಬಹುದು. ಇದೊಂದು ಅಪಾಯಕಾರಿ ಪ್ರಶ್ನೆಯೂ ಹೌದು. ಆದರೆ ಶಾಲೆಗಳು ಹಾಗು ಶಿಕ್ಷಕರು ನಮ್ಮ ಇಂದಿನ ಕಾಲಕ್ಕೆ ಪ್ರಸ್ತುತವಾಗಿರಬೇಕು, ತಮ್ಮ ವಿದ್ಯಾರ್ಥಿಗಳಿಗೆ ಅರ್ಥಪೂರ್ಣವಾದುದನ್ನೇನಾದರೂ ಕಲಿಸಬೇಕು ಎಂದು ಬಯಸಿದಲ್ಲಿ ಅವರು ಈ ಪ್ರಶ್ನೆಯನ್ನು ಎತ್ತದೇ ವಿಧಿಯಿಲ್ಲ.

ಮೊದಲಿಗೆ, ಪೌರತ್ವವನ್ನು ಹೇಗೆ ನೋಡಬೇಕೆಂಬ ಸಮಸ್ಯೆ ಉದ್ಭವಿಸುತ್ತದೆ. ನಾವು ರಾಜ್ಯವ್ಯವಸ್ಥೆಯ (State) ಜೊತೆಗೆ ಹೇಗೆ ನಡೆದುಕೊಳ್ಳುತ್ತೇವೆ, ಉದಾಹರಣೆಗೆ ಸರ್ಕಾರವು ಹೇಳುವುದನ್ನು ಅನುಸರಿಸಲು ಮಕ್ಕಳು ಹೇಗೆ ಕಲಿಯಬೇಕು ಎಂದಿದ್ದಾಗ ಅದು ಹೇಗಿರುತ್ತದೆ ಎನ್ನುವಂತಹ ಪೌರತ್ವದ ಸಂಕುಚಿತ ನೋಟದ ಮೇಲಷ್ಟೇ ಗಮನವನ್ನು ಕೇಂದ್ರೀಕರಿಸಬೇಕೇ ಅಥವಾ ಕೇವಲ ಸರ್ಕಾರದ ವಿಷಯದಲ್ಲೊಂದೇ ಅಲ್ಲ, ಒಟ್ಟಾರೆ ಸಾರ್ವಜನಿಕ ಬದುಕಿನ ಸಂದರ್ಭದಲ್ಲಿ ನಾವು ಹೇಗೆ ನಡೆದುಕೊಳ್ಳಬೇಕು ಎನ್ನುವ ವಿಶಾಲ ನೋಟ ನಮ್ಮದಾಗಬೇಕೇ? ಅಂದರೆ ಉದಾಹರಣೆಗೆ, ಸ್ಥಳೀಯ ನಿವಾಸಿಗಳ ಕ್ಷೇಮಾಭಿವೃದ್ಧಿ ಸಂಘದಲ್ಲಿ, ರಸ್ತೆಗಳಲ್ಲಿ, ಜಾಗತಿಕ ತಾಪಮಾನ ಏರಿಕೆ, ಕೋಮುಸೌಹಾರ್ದ ಮುಂತಾದ ಸಾರ್ವಜನಿಕ ವಿಷಯಗಳನ್ನು ಕುರಿತಂತೆ ನಮ್ಮ ನಡೆ ಹೇಗಿರಬೇಕು? ಪೌರತ್ವ ಕುರಿತಾದ ಈ ದೃಷ್ಟಿಕೋನವು ಕೇವಲ ಸರ್ಕಾರದೊಂದಿಗೆ ವ್ಯವಹರಿಸುವುದ-ಕ್ಕಿಂತಲೂ ಸಾಕಷ್ಟು ವಿಶಾಲವಾದದ್ದು. ಇಂದು ಶಿಕ್ಷಣ ಕ್ಷೇತ್ರದಲ್ಲಿ ಇರುವ ಹೆಚ್ಚಿನ ಜನರನ್ನು ಒತ್ತಾಯಿಸಿ ಕೇಳಿದರೆ, ಬಹುಶಃ ಪೌರತ್ವವನ್ನು ಕುರಿತಂತೆ ಹಿರಿದಾದ ಹಾಗು ವಿಶಾಲವಾದ ಅರ್ಥವನ್ನೊಳಗೊಂಡ ಆವೃತ್ತಿಯನ್ನೇ ಬಯಸುತ್ತಾರೇನೋ. ಏನೇ ಆದರೂ ಮಕ್ಕಳು ಸಕ್ರಿಯರಾಗಿರಲು ಹಾಗು ಸ್ಥಳೀಯ ಸಮುದಾಯದ ಜವಾಬ್ದಾರಿಯುತ ಸದಸ್ಯರಾಗಿರಲು ಕಲಿಯಲೇಬೇಕು. ಅಂದ ಹಾಗೆ ಆ ಸಮುದಾಯವು ಕೇವಲ ಪಂಚಾಯತಿ ಅಥವಾ ನಗರ ಸಭೆಯಾಗಿರುವುದಿಲ್ಲ. ಇದೊಂದು ಸರಳ ಆಯ್ಕೆಯಾದರೂ ಇರುವ ಇನ್ನಿತರ ಆಯ್ಕೆಗಳು ಹೆಚ್ಚು ಕ್ಲಿಷ್ಟಕರವಾದವುಗಳು. ಈ ಲೇಖನವು ಎರಡು ದಶಕಗಳ ಹಿಂದೆ ಮಧ್ಯಭಾರತದ ತಾಲ್ಲೂಕೊಂದರಲ್ಲಿ ನಾನು ನೋಡಿದ, ಸಾರ್ವಜನಿಕ ಕ್ಷೇತ್ರಗಳಲ್ಲಿ ಹೇಗೆ ವರ್ತಿಸಬೇಕು, ಯಾವ ನಡವಳಿಕೆಗಳು ಇಂದಿಗೂ ನಮಗೆ, ಕಿರಿಕಿರಿಯನ್ನುಂಟು ಮಾಡುತ್ತವೆ ಎಂಬ ಕೆಲವು ಪರಸ್ಪರ ವಿರೋಧಾಭಾಸದ ಸಂಗತಿಗಳನ್ನು ಕುರಿತಾಗಿದೆ (ಮದನ್ 2003, 2005). ಆಗ ನಾನು ಏಕಲವ್ಯ ಸಂಸ್ಥೆಯೊಡನೆ ಕೆಲಸ ಮಾಡುತ್ತಿದ್ದೆ. ಹೋಶಂಗಾಬಾದ್ ಎಂಬ ಚಿಕ್ಕಪಟ್ಟಣದಲ್ಲಿ ಮೂರು ವರ್ಷ ನೆಲೆಸಿದ್ದೆ. ಇದು ಪಟ್ಟಣ ಹಾಗು ಅದರ ಸುತ್ತಮುತ್ತಲಿನ ಮೂರು ಹಳ್ಳಿಗಳಲ್ಲಿ ಪೌರಸಂಸ್ಕೃತಿಯನ್ನು ಕುರಿತಂತೆ ಜನಾಂಗೀಯ ಅಧ್ಯಯನವನ್ನು ಕೈಗೊಳ್ಳಲು ಮತ್ತು ಅಲ್ಲೆಲ್ಲ ಒಂದೊಂದು ಗ್ರಂಥಾಲಯವನ್ನು ನಡೆಸಲು ನೆಲೆಯೂ ಆಯಿತು. ಇದರಿಂದ ಸಾರ್ವಜನಿಕ ಬದುಕನ್ನು ಕುರಿತಂತೆ ಬಳಸಬಹುದಾದ ವಿವಿಧ ಸಂಭಾವ್ಯ ಹಾದಿಗಳ ನಡುವೆ ಸಾಕಷ್ಟು ಭಿನ್ನತೆ, ಅಂತರವಿದೆ ಎನ್ನುವುದು ಕಂಡುಬಂದಿತು. ಅದೇ ರೀತಿ, ಯಾವ ತರಹದ ಪೌರತ್ವವನ್ನು ಶಾಲೆಗಳಲ್ಲಿ ಕಲಿಸಬೇಕು ಎನ್ನುವುದರಲ್ಲಿಯೂ ಅನುಸರಿಸಬಹುದಾದ ವಿವಿಧ ಮಾರ್ಗಗಳಿವೆ. ಅವುಗಳಲ್ಲಿ ನಾವು ಅನುಸರಿಸುವ ಮಾರ್ಗವೊಂದನ್ನು ಆಯ್ದುಕೊಳ್ಳಬೇಕು.

**ವೈಚಾರಿಕ ಹಾಗು ಸಮಾನತಾವಾದಿ ಸಂವಿಧಾನ**

ಪೌರತ್ವಕ್ಕೆ ಸಂಬಂಧಿಸಿದಂತೆ ವಿಭಜನೆಯ ಒಂದು ಕಡೆ, ಬಿ.ಆರ್.ಅಂಬೇಡ್ಕರ್ ಅವರ ನೇತೃತ್ವದ ಸಮಿತಿಯಿಂದ ರಚಿಸಲ್ಪಟ್ಟ ಭಾರತೀಯ ಸಂವಿಧಾನವಿದೆ. ಇದು ಕೇವಲ ವಸಾಹತೋತ್ತರ ಭಾರತೀಯ ರಾಜ್ಯವ್ಯವಸ್ಥೆಯು ಅನುಸರಿಸುತ್ತಿರುವ ಚೌಕಟ್ಟನ್ನು ಮಾತ್ರ ನೀಡುವುದಿಲ್ಲ. ಇದು ನಮ್ಮ ಸ್ವಾತಂತ್ರ್ಯ ಸಂಗ್ರಾಮವು ತರಲು ಬಯಸಿದ್ದ ಸಾರ್ವಜನಿಕ ಕ್ಷೇತ್ರದಲ್ಲಿನ ಸಂಸ್ಕೃತಿ ಮತ್ತು ವರ್ತನೆಗೆ ಸಂಬಂಧಿಸಿದ ಸಂಹಿತೆಯ ಅತ್ಯುನ್ನತ ಮಾದರಿಯೂ ಆಗಿದೆ. ಸಂವಿಧಾನದ ಅಡಿಗಲ್ಲಾಗಿರುವ ಸಂಸ್ಕೃತಿ ಹಾಗು ಮೌಲ್ಯಗಳು ಹಲವಾರು ವ್ಯಕ್ತಿಗಳ, ಸರ್ಕಾರೇತರ ಸಂಘ-ಸಂಸ್ಥೆಗಳ, ಸರ್ಕಾರದ ಹಾಗು ಖಾಸಗಿ ಸಂಸ್ಥೆಗಳ ಚಟುವಟಿಕೆಗಳನ್ನು ಪ್ರಭಾವಿಸಿವೆ. ಇದರ ಮೂಲದಲ್ಲಿ ಎಲ್ಲ ಮಾನವರೂ ಸಮಾನರು ಹಾಗು ಆಳದಲ್ಲಿ ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡಬೇಕು ಎಂಬ ಆಲೋಚನೆಯಿದೆ. ಸಮಾನತೆಯ ಈ ಚಿಂತನೆಯು ಪಾಶ್ಚಿಮಾತ್ಯ ಪ್ರಜಾತಂತ್ರ ವ್ಯವಸ್ಥೆಗಳ ಬೆಳವಣಿಗೆಯಿಂದ ಹೇಗೋ, ಹಾಗೇ ಉಪನಿಷತ್ತಿನ ಭಾಗಗಳಿಂದ, ಇಸ್ಲಾಂ, ಸಿಖ್, ಬೌದ್ಧಪಂಥಗಳಿಂದ ಮತ್ತು ಇನ್ನಿತರ ಪ್ರಬಲ ಸಾಂಸ್ಕೃತಿಕ ಪ್ರಭಾವಗಳಿಂದಲೂ ರೂಪುಗೊಂಡಿದೆ. ಅಂತಿಮವಾಗಿ ಈ ದೇಶದ ಜನರೆಲ್ಲರೂ ಒಂದೇ, ಧರ್ಮ-ಜಾತಿ-ಲಿಂಗ ಮುಂತಾದ ಸಾಮಾಜಿಕವಾಗಿ ನಿಗದಿತವಾದ ಅವರ ಗುರುತುಗಳೆಲ್ಲವೂ ನಿಜಕ್ಕೂ ಮುಖ್ಯವಾಗುವುದಿಲ್ಲ ಎಂದು ಈ ಸಂಸ್ಕೃತಿಯು ಸಾರುತ್ತದೆ.

ಸರ್ಕಾರವು ಹಳ್ಳಿಯೊಂದರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ-ವೊಂದನ್ನು ನಿರ್ಮಿಸಿದಾಗ ಅದು ಎಲ್ಲರಿಗೂ ಎಂದಾಗಿರುತ್ತದೆ ಹಾಗು ಅಲ್ಲಿಗೆ ಬರುವ ವ್ಯಕ್ತಿಯ ಸಾಮಾಜಿಕ ಗುರುತಿನ ಆಧಾರದ ಮೇಲೆ ಯಾವ ರೀತಿಯ ತಾರತಮ್ಯವೂ ಇರುವುದಿಲ್ಲ. ಆರೋಗ್ಯ ಕೇಂದ್ರಕ್ಕೆ, ಅಲ್ಲಿಗೆ ಚಿಕಿತ್ಸೆಗಾಗಿ ಬರುವ ಜನರ ಜಾತಿ-ಧರ್ಮ-ಲಿಂಗಗಳು ಮುಖ್ಯವಾಗಬಾರದು ಎಂದು ತಿಳಿಯಲಾಗಿದೆ. ದುರ್ಬಲರಿಗೆ ಅನುಕೂಲಕರವಾಗುವ ನಿಟ್ಟಿನಲ್ಲಿ ತೆಗೆದುಕೊಳ್ಳುವ ಸಕಾರಾತ್ಮಕ ತಾರತಮ್ಯದ ಕ್ರಮಗಳನ್ನು ಮಾತ್ರ ಒಪ್ಪಬಹುದಾಗಿದೆ. ಹಾಗಾಗಿ, ಉದಾಹರಣೆಗೆ ಹೇಳಬೇಕೆಂದರೆ, ಸರ್ಕಾರವು ಕೈಪಂಪುಗಳನ್ನು ಹಾಕುವಾಗ, ಈ ಮೊದಲೇ ಎಲ್ಲೆಲ್ಲಿ ಕೈಪಂಪುಗಳಿಲ್ಲವೋ ಆ ಮೊಹಲ್ಲಾಗಳಲ್ಲಿ (ಬೀದಿ) ಅಳವಡಿಸಬೇಕೆಂದು ಆದೇಶಿಸ-ಬಹುದು. ಆ ಆದೇಶಗಳು ಮುಂದುವರೆದು, ಪರಿಶಿಷ್ಟ ಜಾತಿ (SC) ಮತ್ತು ಪರಿಶಿಷ್ಟ

ಮಾರುಕಟ್ಟೆಯ ಬೆಳವಣಿಗೆ ಹಾಗು ದೂರದ ಒಳನಾಡುಗಳಲ್ಲಿಯೂ ಭಾರತೀಯ ರಾಜ್ಯವ್ಯವಸ್ಥೆಯು ಪಡೆದ ಪ್ರವೇಶದಿಂದಾಗಿ ಹೋಶಂಗಾಬಾದ್ ಸೇರಿದಂತೆ ಹಲವೆಡೆಗಳಲ್ಲಿ ವೈಚಾರಿಕತೆ ಹಾಗು ಸಮಾನತೆಯ ಸಂಸ್ಕೃತಿಯು ದೊಡ್ಡ ಪ್ರಮಾಣದಲ್ಲಿ ಹೆಚ್ಚಿದೆ. ಎಲ್ಲರೂ ಒಂದೇ ಎಂಬುದನ್ನು ಒಪ್ಪಿಕೊಳ್ಳುತ್ತಲೇ ಹಲವೆಡೆ ಆಚರಣೆಯಲ್ಲಿ ಅಸಮಾನತೆಯು ಬೆಳೆಯಲು ಇವು ಕಾರಣವಾಗಿವೆ ಎಂಬುದನ್ನೂ ನೋಡಬಹುದು. ಆದರೆ ನಾನೀಗ ಸದ್ಯಕ್ಕೆ ಆ ಪ್ರಶ್ನೆಯನ್ನು ಬದಿಗಿಡುತ್ತಿದ್ದೇನೆ. ಜಾತಿ ಮತ್ತು ಲಿಂಗ ಅಸಮಾನತೆಗಳು ಆಳವಾಗಿ ಬೇರೂರಿರುವ ಇಂತಹ ಪ್ರದೇಶದಲ್ಲಿ, ಮಾರುಕಟ್ಟೆ ಮತ್ತು ರಾಜ್ಯವ್ಯವಸ್ಥೆಗಳು ಒಂದಕ್ಕೊಂದು ಸಂಬಂಧವಿರುವ ಸಂಸ್ಕೃತಿ ಮತ್ತು ಆಲೋಚನಾ ವಿಧಾನವನ್ನು ಹೆಚ್ಚುಹೆಚ್ಚು ಉತ್ತೇಜಿಸುವಲ್ಲಿ ಬಹುಮುಖ್ಯವಾದ ಸಂಸ್ಥೆಗಳಾಗಿರುತ್ತವೆ ಎನ್ನುವುದು ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ. ಅವು ಬೆಳೆದಂತೆ, ಅಸ್ತಿತ್ವದಲ್ಲಿರುವ ಅಸಮಾನತೆಯಿಂದಾಗಿ ಆಗಾಗ ರಾಜಿ ಮಾಡಿಕೊಳ್ಳುವ ಸಂದರ್ಭವಿದ್ದರೂ ತರ್ಕ ಮತ್ತು ಸಾರ್ವತ್ರಿಕತೆಯ ಮನೋ-ಭಾವಗಳು ವಿಸ್ತಾರಗೊಂಡಿವೆ. ನಮ್ಮ ನೆಲದಲ್ಲಿ ಇಂತಹ ವ್ಯಾಪಕ ಸ್ವರೂಪದ ಸಾಮಾಜಿಕ ಬದಲಾವಣೆಗಳಾಗುತ್ತಿರುವುದನ್ನು ನೋಡಿದಾಗ ಪೌರತ್ವವನ್ನು ಕಲಿಸುವುದರ ಅರ್ಥ, ನಮ್ಮ ಸಂವಿಧಾನದಲ್ಲಿ ಪಡಿಮೂಡಿಸಲಾದ ಸಮಾನತೆ, ತರ್ಕಬದ್ಧತೆ, ಸಾರ್ವತ್ರಿಕತೆ, ಸ್ವಾತಂತ್ರ್ಯ ಮುಂತಾದ ಸಂಸ್ಕೃತಿಯನ್ನು ಕಲಿಸುವುದು ಎಂದೇ ತೋರುತ್ತದೆ.

**ಸಮಾನತೆಯಲ್ಲ, ಪ್ರಾಬಲ್ಯ**

ಸಂವಿಧಾನ ಮತ್ತು ಮಾನವರೆಲ್ಲರ ಸಮಾನತೆಯನ್ನು ಸಾರಿದ ಧಾರ್ಮಿಕ ಅಂಗೀಕರಿಸಿದ ಹಾಗು ಸಮಾನತೆಯನ್ನು ನಿರಾಕರಿಸುವ, ತಿರಸ್ಕರಿಸುವ ಒಂದು ಸಾಮಾಜಿಕ ವಾಸ್ತವದ ನಡುವೆ ಸಂಘರ್ಷವಿದೆ ಎನ್ನುವುದನ್ನು ಗಮನಿಸಬೇಕು. ನಾನು ಹೋಶಂಗಾಬಾದ್-ನಲ್ಲಿದ್ದಾಗ ಅಲ್ಲಿ ಜಾತಿ ವ್ಯವಸ್ಥೆಯು ಪ್ರಬಲವಾಗಿತ್ತು ಮತ್ತು ಅಂತರ್ಜಾತೀಯ ವಿವಾಹಗಳು ವಿರಳವಾಗಿದ್ದವು. ಜಾತಿಪದ್ಧತಿಯು ಅಸಮಾನತೆಯ ಮೂಲತತ್ವದ ಮೇಲೆ ನಿಂತಿದೆಯೇ ಹೊರತು ಸಮಾನತೆಯ ಮೇಲಲ್ಲ. ವಿವಿಧ ಸಾಮಾಜಿಕ ಗುಂಪುಗಳಿಗೆ ಪ್ರತ್ಯೇಕವಾದ ನೀತಿ ನಿಯಮಗಳಿರಬೇಕು, ಅದು ಎಲ್ಲರಿಗೂ ಒಂದೇ ಅಲ್ಲ ಎಂಬುದು ಅದರ ನಂಬಿಕೆ. ಜಾತಿ ವ್ಯವಸ್ಥೆಯಲ್ಲಿ ಕೆಲವು ಜನರು ಇತರರಿಗಿಂತ ಹೆಚ್ಚು ಗೌರವ ಹಾಗು ಸಂಪನ್ಮೂಲಗಳಿಗೆ ಅರ್ಹರು ಎಂದು ಭಾವಿಸಲಾಗಿದೆ. ಎಲ್ಲ ವರದಿಗಳ ಪ್ರಕಾರ ಈ ಪರಿಸ್ಥಿತಿಯಲ್ಲಿ ಹೆಚ್ಚಿನ ಬದಲಾವಣೆಯೇನೂ ಆಗಿಲ್ಲ.

ಮೇಲಿನ ಶ್ರೇಣಿಯಲ್ಲಿರುವ ಜಾತಿಗಳು ತಮ್ಮದು ಶ್ರೇಷ್ಠ ಜಾತಿಯೆಂದು ಪ್ರಬಲವಾಗಿ ನಂಬುತ್ತವೆ. ಕೃಷಿಪ್ರಧಾನವಾಗಿರುವ ಈ ಪ್ರದೇಶದಲ್ಲಿ ಅವರು ದೊಡ್ಡ ಜಮೀನ್ದಾರರೂ ಆಗಿರುವುದು ಅವರ ನಂಬಿಕೆಯನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ. ಶಿಕ್ಷಣ ಪಡೆದವರಲ್ಲಿ ಮೊದಲಿಗರಾದ್ದರಿಂದ ಸರ್ಕಾರಿ ಉದ್ಯೋಗಗಳಲ್ಲಿಯೂ ಅವರ ಸಂಖ್ಯೆ ಅತ್ಯಂತ ದೊಡ್ಡದು. ದೊಡ್ಡದೊಡ್ಡ ವ್ಯಾಪಾರ ವಹಿವಾಟುಗಳ ನಿಯಂತ್ರಣ ಹಾಗು ಹೆಚ್ಚಿನ ರಾಜಕೀಯ ಹುದ್ದೆಗಳೂ ಅವರ ಕೈಯಲ್ಲಿದ್ದವು. ಒಂದು ನಿರ್ದಿಷ್ಟ ಬ್ರಾಹ್ಮಣ ಕುಟುಂಬದಲ್ಲಿ ಒಬ್ಬರು ಸ್ಥಳೀಯ ಸಂಸದರಾಗಿದ್ದರು, ಮತ್ತೊಬ್ಬರು ಮಾಜಿ ಶಾಸಕರಾಗಿದ್ದರು, ಮೂರನೆಯವರು ಜಿಲ್ಲಾ ಪರಿಷತ್‌ನ ಮುಖ್ಯಸ್ಥರಾಗಿದ್ದರು ಹಾಗು ನಾಲ್ಕನೆಯವರು ಮಧ್ಯಪ್ರದೇಶ ಸರ್ಕಾರದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಸಾವಿರಾರು ಎಕರೆಗೂ ಹೆಚ್ಚಿನ ಭೂಮಿಯು ಈ ಕುಟುಂಬದ ಮಾಲೀಕತ್ವದಲ್ಲಿತ್ತು. ಸಾರ್ವಜನಿಕ ಅಧಿಕಾರವು ಮುಖ್ಯವಾಗಿ ಪುರುಷಪ್ರಧಾನವಾಗಿದ್ದು ಅಧಿಕಾರಿ ಹುದ್ದೆಗಳಲ್ಲಿ ಕಾಣಿಸಿಕೊಳ್ಳತೊಡಗಿದ್ದ ಕೆಲವೇ ಮಹಿಳೆಯರನ್ನು ರೂಢಿಯಂತೆ ಮೂದಲಿಸಲಾಗುತ್ತಿತ್ತು. ಕೆಳಹಂತದಲ್ಲಿದ್ದ ಇತರ ಹಿಂದುಳಿದ ವರ್ಗಗಳು (OBCs) ನಿಧಾನವಾಗಿ ಮೇಲೇರಲು ಮತ್ತು ತಮ್ಮ ಸಂಖ್ಯೆಯ ಆಧಾರದ ಮೇಲೆ ರಾಜಕೀಯ ಬಲವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸ-ತೊಡಗಿದವು. ಆದರೆ ಬಲವಾಗಿ ಬೇರೂರಿದ್ದ ಮೇಲ್ಜಾತಿಗಳನ್ನು ಅವರು ಎದುರಿಸಬೇಕಿತ್ತು.

ಜಾತಿ ಸಂಸ್ಕೃತಿಯು ಸಾಮಾಜಿಕ ಬದುಕಿನ ಹಲವಾರು ಆಯಾಮಗಳನ್ನು ತಲುಪಿಯಾಗಿದೆ. ಮಾಂಸಾಹಾರ ಸೇವನೆಯನ್ನು ಸಾರ್ವಜನಿಕವಾಗಿ ತುಚ್ಛೀಕರಿಸಲಾಗುತ್ತಿತ್ತು. ಅಪರಿಚಿತರನ್ನು ಭೇಟಿಯಾದಾಗ ಮೊದಲು ಅವರ ಜಾತಿ ಯಾವುದೆಂದು (ಅವರ ಉಪನಾಮ, ಸೂಚಿಸದೇ ಇದ್ದಲ್ಲಿ) ವಿಚಾರಿಸಲಾಗುತ್ತಿತ್ತು. ಪಟ್ಟಣದಲ್ಲಿ 'ಮೇಲ್ಜಾತಿ'ಯ ಜನರು ವಾಸಿಸುವ ಪ್ರದೇಶಗಳಲ್ಲಿ ಆ ಜಾತಿಗೆ ಸೇರಿರದವರು ಮತ್ತು ಮುಸ್ಲಿಮರಿಗೆ ಮನೆಯು ಬಾಡಿಗೆಗೆ ಸಿಗುವುದು ತುಂಬಾ ಕಷ್ಟವಾಗಿತ್ತು. ಇಲ್ಲಿ ಜಾತಿಪದ್ಧತಿ ಮತ್ತು ವರ್ಗವ್ಯವಸ್ಥೆಯ ಬಲಗಳು ಸಂವಿಧಾನದ ಸತ್ವವನ್ನೇ ಹೊಸಕಿಹಾಕಿದ್ದವು. ತನ್ನ ಮೇಲಧಿ-ಕಾರಿಗಳಿಗೆ ತಲೆಬಾಗುವುದು ಹಾಗು ಕೆಳಗಿನ ಅಧಿಕಾರಿಗಳ ಮೇಲೆ ದರ್ಪತೋರಿಸುವುದು, ಸ್ವಸಮರ್ಥನೆಯಲ್ಲಿ ಬೀಗುವುದು ಇತ್ಯಾದಿಗಳೇ ಸಾರ್ವಜನಿಕ ಬದುಕಿನ ಸಂಸ್ಕೃತಿಯಾಗಿತ್ತು.

ಜಾತಿ, ಸಂಪತ್ತು, ವೃತ್ತಿ ಅಥವಾ ಉದ್ಯೋಗಗಳು ನಿರ್ಮಿಸಿದ ರಚನೆಯ ಮೇಲೆ ಅಧಿಕಾರ ಮತ್ತು ರಾಜಕಾರಣಗಳು ನಿಂತಿದ್ದವು. ಸರ್ಕಾರಿ ಉದ್ಯೋಗಿಗಳನ್ನು ಅದರಲ್ಲಿಯೂ ವಿಶೇಷವಾಗಿ ಜಿಲ್ಲಾಧಿಕಾರಿಗಳ ಕಚೇರಿಯ ಅಧಿಕಾರಿಗಳಿಗೆ ಎಲ್ಲರೂ ತಲೆಬಾಗುತ್ತಿದ್ದರು. ರಾಜಕಾರಣಿಗಳು ಹಾಗು ಗುತ್ತಿಗೆದಾರರ ಗುಂಪೊಂದು ತನಗೆ ಅನುಕೂಲವಾಗುವ ಹಾಗೆ ಸೂಕ್ತವಾದ ರೀತಿಯಲ್ಲಿ ಕೆಲಸ ಮಾಡಲು ಸ್ಥಳೀಯ ರಾಜ್ಯ ಸರ್ಕಾರದ ಉದ್ಯೋಗಿಗಳು ಅವರೊಂದಿಗೆ ನಿಕಟವಾಗಿ ಕೆಲಸ ಮಾಡುತ್ತಿತ್ತು. ಇಲ್ಲಿ ಸಂವಿಧಾನದ ಆದರ್ಶಗಳು ಪ್ರಸ್ತುತವೇ ಇರದಂತೆ ಮಸುಕಾಗಿ ಹೋಗಿದ್ದವು. ಅಧಿಕಾರವನ್ನು ಕೈವಶಮಾಡಿಕೊಳ್ಳುವ ದಿಸೆಯಲ್ಲಿ ಇದೊಂದು ಹೆಜ್ಜೆಯಾಗಬಲ್ಲದು ಎಂಬುದಕ್ಕೆ ಮಾತ್ರ ಜನರು ರಾಜ್ಯವ್ಯವಸ್ಥೆಯೊಳಗೆ ಸೇರಿಸಿಕೊಳ್ಳುತ್ತಿದ್ದರು ಅಥವಾ ಅದರೊಂದಿಗೆ ಕೆಲಸ ಮಾಡಲು ಬಯಸುತ್ತಿದ್ದರು. ಎಲ್ಲರಿಗೂ ಸಮಾನತೆ, ನ್ಯಾಯ ಅಥವಾ ನಿಷ್ಪಕ್ಷಪಾತ ಸೇವೆಯನ್ನು ನೀಡಲು ಎಂದಲ್ಲ ಬದಲಿಗೆ, ಒಮ್ಮೆ ಸರ್ಕಾರಿ ಉದ್ಯೋಗವನ್ನು ಪಡೆದುಕೊಂಡಾದ ಮೇಲೆ ಅದನ್ನು 'ಲಘುವಾಗಿ ತೆಗೆದುಕೊಳ್ಳಬಹುದು' ಎನ್ನುವುದಕ್ಕಾಗಿ ಜನ ಅಪೇಕ್ಷೆಪಡುತ್ತಾರಲ್ಲದೆ, ಸಮಾನತೆಯನ್ನು ತರಲು ಮತ್ತು ಎಲ್ಲರಿಗೂ ನ್ಯಾಯವನ್ನು ಒದಗಿಸಲು ಇರುವ ಮಾರ್ಗ ಎಂಬ ಕಾರಣಕ್ಕೆ ಅದನ್ನು ಇಷ್ಟಪಡುವುದಲ್ಲ.

ಹೆಚ್ಚಿನ ಸಾರ್ವಜನಿಕ ಚಟುವಟಿಕೆಗಳಿಗೆ ಲಿಂಗ, ಜಾತಿ ಮತ್ತು ಸಾಮಾಜಿಕ ಸಂಪರ್ಕ ಜಾಲಗಳೇ ಆಧಾರವಾಗಿದ್ದವು. ಯಾರಿಗಾದರೂ ಕೆಲಸವಾಗಬೇಕಿದ್ದಲ್ಲಿ ಸಾಮಾಜಿಕ ಸಂಪರ್ಕ ಜಾಲವನ್ನು ರೂಪಿಸಿಕೊಳ್ಳುವುದು ಅಗತ್ಯವಾಗಿತ್ತು. ಅವುಗಳ ಮೂಲಕ ಹಣ ಮತ್ತು ಅಧಿಕಾರವನ್ನು ಬಳಸಿಕೊಂಡು ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳುವುದಕ್ಕಾಗಿ ಮನವೊಲಿಸಲು, ಲಂಚ ನೀಡಲು ಅಥವಾ ಬೆದರಿಕೆ ಹಾಕಲು, ಸಾಧ್ಯವಿತ್ತು. ಇದು ಮುಖ್ಯವಾಗಿ ನಡೆಯುತ್ತಿದ್ದುದು ಪುರುಷರ ಸಂಪರ್ಕ ಜಾಲದ ಮೂಲಕ. ಮಹಿಳೆಯರನ್ನು ಇವುಗಳಿಂದ ದೂರವೇ ಇಟ್ಟಿರುವುದು ಎದ್ದು ತೋರುತ್ತಿತ್ತು. ಅಧಿಕಾರದಲ್ಲಿನ ವ್ಯತ್ಯಾಸ ಹಾಗು

ಗೌರವದಲ್ಲಿನ ಶ್ರೇಣೀಕರಣ ಎಲ್ಲರಿಗೂ ಸ್ಪಷ್ಟವಾಗಿ ಕಾಣುತ್ತಿತ್ತು. ಸಾಮಾಜಿಕ ಜೀವನವು ವಿಭಜಿಸಲ್ಪಟ್ಟಿದ್ದು, ಪ್ರತಿಯೊಬ್ಬರೂ ತಮ್ಮತಮ್ಮ ಗುಂಪಿಗೋಸ್ಕರ ಮಾತ್ರ ಕೆಲಸ ಮಾಡುತ್ತಿದ್ದರೇ ಹೊರತು ಸಂವಿಧಾನದಲ್ಲಿ ಹೇಳಿದಂತೆ ಸಾರ್ವತ್ರಿಕ ಒಳಿತಿಗಾಗಿ ಅಲ್ಲ. ಯಾವುದೇ ಪಂಚಾಯತಿಗೆ ಅಲ್ಲಿನ ಹಳ್ಳಿಗಳ ರಸ್ತೆ ಮಾರ್ಗಗಳಲ್ಲಿ ಸುಧಾರಣೆ ತರುವುದಕ್ಕಾಗಿ ಕೆಲ ಮೊತ್ತದ ಹಣವು ಬಂದರೆ, ಪಂಚಾಯತಿ ಅಧ್ಯಕ್ಷರ (ಸರಪಂಚ್) ಮನೆಯ ಮುಂದಿರುವ ರಸ್ತೆ ಅಥವಾ ಅವರ ಜಾತಿಯ ಜನರು ವಾಸಿಸುವ ಪ್ರದೇಶದಲ್ಲಿನ (ಮೊಹಲ್ಲಾ) ರಸ್ತೆಗಳು ಮೊದಲಿಗೆ ದುರಸ್ತಿಯಾಗುತ್ತಿದ್ದವು.

ಈ ಸಾಮಾಜಿಕ ರೀತಿನೀತಿಗಳ ಕುರಿತು ವ್ಯಾಪಕವಾದ ವಿರೋಧ ಹಾಗು ಅಸಮಾಧಾನಗಳೂ ಇದ್ದವು. ಸರ್ಕಾರದ ಕುರಿತಾಗಿ ನಂಬಿಕೆಯ ಕೊರತೆ ಮತ್ತು ಸಿನಿಕತೆ (ನಿರಾಶೆ, ಸಂದೇಹ) ವ್ಯಾಪಕವಾಗಿತ್ತು. ಸಾಮಾಜಿಕ ಶ್ರೇಣೀಕರದಲ್ಲಿ ಕೆಳಹಂತದಲ್ಲಿದ್ದವರೆಲ್ಲರೂ, ಅಂದರೆ ಯುವಜನರು, ಮಹಿಳೆಯರು, ದಲಿತರು, ಆದಿವಾಸಿಗಳು ಹಾಗು ಇತರ ಹಿಂದುಳಿದ ವರ್ಗಗಳಲ್ಲಿ (OBCs) ಕೆಳಹಂತದಲ್ಲಿದ್ದವರೇ ನನ್ನ ಬಳಿ ಅತ್ಯಂತ ಉತ್ಕಟವಾಗಿ ಸ್ವಾತಂತ್ರ್ಯ ಮತ್ತು ಸಮಾನತೆಯ ಬಗ್ಗೆ ಮಾತನಾಡಿದವರಾಗಿದ್ದರು. ಆದರೂ ನಾವೇನು ಮಾಡಬಹುದಿತ್ತು? ಸಾರ್ವಜನಿಕ ಜೀವನದ ಕುರಿತಾಗಿ, ನಿಷ್ಪಕ್ಷಪಾತತ್ವ ಮತ್ತು ನ್ಯಾಯವನ್ನು ಆಧರಿಸಿದ ಪರ್ಯಾಯ ದೃಷ್ಟಿಕೋನವೊಂದು ಇಲ್ಲದಿದ್ದಾಗ ನಿರಾಸಕ್ತಿ ತಳೆದು ಈ ವ್ಯವಸ್ಥೆಗನುಗುಣವಾಗಿ ಕೆಲಸ ಮಾಡುವುದೇ ಸುಲಭವಾಗಿತ್ತು.

ಬೆದರಿಕೆ, ನಿರಾಸಕ್ತಿ ಹಾಗು ಸಾಂಸ್ಕೃತಿಕ ಪ್ರತೀಕಗಳ ಮಿಶ್ರಣದಿಂದ ಸ್ಥಳೀಯ ಶ್ರೇಣಿ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ನಡೆಸಿಕೊಂಡು ಬರಲಾಗುತ್ತಿತ್ತು. ಗುತ್ತಿಗೆದಾರರು, ರಾಜಕಾರಣಿಗಳು ಮತ್ತು ಸರ್ಕಾರಿ ಅಧಿಕಾರಿಗಳ ಅಕ್ರಮ ಸಹಯೋಗವನ್ನು ಬಯಲಿ-ಗೆಳೆಯಲು ಪ್ರಯತ್ನಿಸಿದ ಪತ್ರಕರ್ತರನ್ನು ಥಳಿಸಲಾಗುತ್ತಿತ್ತು. ಭಿನ್ನಾಭಿಪ್ರಾಯಗಳನ್ನು ಸಹಿಸುತ್ತಿರಲಿಲ್ಲ. ಸಹಮತವಿಲ್ಲದ ಯಾವುದೇ ಅಭಿಪ್ರಾಯವೂ ರಾಜಕೀಯ ವಿರೋಧದ ಸಂಕೇತ ಹಾಗು ಇದು ಸಾರ್ವಜನಿಕವಾಗಿ ಭಂಗ ಉಂಟು ಮಾಡಬಲ್ಲದು ಎಂದು ಪ್ರಬಲವಾಗಿ ನಂಬಲಾಗುತ್ತಿತ್ತು. ಭಿನ್ನಾಭಿಪ್ರಾಯ ಹೊಂದಿದವರನ್ನು ಒಂದು ಪೀಡೆಯೆಂಬಂತೆ ನೋಡಲಾಗುತ್ತಿತ್ತು. ಅವರನ್ನು ಒಂದಲ್ಲ ಒಂದು ರೀತಿಯಲ್ಲಿ ಸುಮ್ಮನಾಗಿಸಬೇಕೆಂದು ಆಲೋಚಿಸಲಾಗುತ್ತಿತ್ತು. ಸ್ಥಳೀಯ ನಗರ ವಾರ್ಡ್‌ನ ಸದಸ್ಯರೊಬ್ಬರನ್ನು ಸಾರ್ವಜನಿಕವಾಗಿ ಪ್ರಶ್ನಿಸುವುದೆಂದರೆ, ಇನ್ನು ಅವರು ಅಧಿಕಾರದಲ್ಲಿ ಇರುವ ತನಕ ಸರ್ಕಾರಕ್ಕೆ ಸಂಬಂಧಿಸಿದ ಯಾವುದೇ ಕೆಲಸವೂ ಆಗುತ್ತದೆ ಎನ್ನುವುದನ್ನು ಮರೆತು-ಬಿಡಬೇಕಿತ್ತು ಎಂದೇ ಅರ್ಥ. ಹಾಗೆ ಮಾಡಿದ್ದಲ್ಲಿ ಚುನಾಯಿತ-ಗೊಂಡವರು (ಅಪರೂಪಕ್ಕೊಮ್ಮೆ ಅವರು ಮಹಿಳೆಯೂ ಆಗಿರಬಹುದು) ಇನ್ನು ಪ್ರಶ್ನಿಸಿದವರ ಯಾವುದೇ ಪ್ರಸ್ತಾವವನ್ನು ಅವು ಎಷ್ಟೇ ಯೋಗ್ಯವಾಗಿದ್ದರೂ ಖಡಾಖಂಡಿತವಾಗಿ ವಿರೋಧಿಸುತ್ತಿದ್ದರು. ಎಲ್ಲಾ ಧಾರ್ಮಿಕ ಮತ್ತು ಸಾಂಸ್ಕೃತಿಕ ಉತ್ಸವಗಳ ಕಾಲದಲ್ಲಿಯೂ ಪ್ರಬಲ ವ್ಯಕ್ತಿಗಳಿಗೆ ಮುಖ್ಯವಾಗಿ ಗೌರವ ತೋರಿ ತಲೆಬಾಗಲೇಬೇಕಿತ್ತು. ವಿವಿಧ ಸಾರ್ವಜನಿಕ ಕಾರ್ಯ-ಕ್ರಮಗಳಲ್ಲಿ ಅವರನ್ನು ಗೌರವಿಸದೇ ಇರುವುದೆಂದರೆ, ಹಾಗೆ ಮಾಡುವವರು ದುರಹಂಕಾರಿಯಾಗಿದ್ದು, ಅವರನ್ನು ಹದ್ದು-ಬಸ್ತಿನಲ್ಲಿಡಬೇಕು ಎಂದು ತಿಳಿಯಲಾಗುತ್ತಿತ್ತು. ಏಕಲವ್ಯ ತಂಡವು ಅಂತಹ ಬೆಲೆಯನ್ನು ತೆತ್ತಿದೆ. ಪ್ರಬಲ ವ್ಯಕ್ತಿಗಳ ಪರವಾಗಿಯೇ ಇರುವುದು ಸದಾ ಅತ್ಯಂತ ಮುಖ್ಯವಾಗಿತ್ತು.

'ನೀವು ಮತ್ತು ಇನ್ನಿತರರು ಏತಕ್ಕಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಕೆಲಸ ಮಾಡುತ್ತೀರಿ?' ಎಂದು ನಾನು ಬಹಳಷ್ಟು ಜನರನ್ನು ಪ್ರಶ್ನಿಸಿದ್ದೆ. ಅವರು ನೀರಿನ ತೊಟ್ಟಿಗಳನ್ನು ನಿರ್ಮಿಸಲು ಅಥವಾ ಧಾರ್ಮಿಕ ಉತ್ಸವಾಚರಣೆಗಳನ್ನು ಆಯೋಜಿಸಲು ಅಥವಾ ಇನ್ನಾವುದೇ ಇಂತಹ ಸಾಮುದಾಯಿಕ ಉದ್ದೇಶಕ್ಕೆ ಏಕೆ ಆರ್ಥಿಕವಾಗಿ ನೆರವಾಗುತ್ತಾರೆ? ಬಹುತೇಕ ಎಲ್ಲಾ ಸಂದರ್ಭ-ದಲ್ಲಿಯೂ ಆ ಕಾರ್ಯದ ನೇತೃತ್ವ ವಹಿಸಿದವರನ್ನು ತಾವು ಅನುಸರಿಸುವುದು ಅಗತ್ಯವಾಗಿತ್ತು, ಅಂತಹವರ ಕೃಪಾಕಟಾಕ್ಷ-ದಲ್ಲಿರುವುದು ಮುಖ್ಯವಾಗಿದ್ದು ಅವರ ಅವಕೃಪೆಗೆ ಒಳಗಾಗುವುದು ತಮಗೆ ಬೇಕಿರಲಿಲ್ಲ ಎಂಬುದು ಅವರ ಉತ್ತರವಾಗಿತ್ತು. ಯಾವುದೇ ಕೆಲಸಗಳಾದರೂ ಅವು ಒಳ್ಳೆಯದಾಗಿದ್ದ ಕಾರಣ ಅವುಗಳನ್ನು ಕೈಗೆತ್ತಿಕೊಳ್ಳುವುದು ವಿರಳವಾಗಿತ್ತು. ಈ ಕುರಿತು ಹೆಚ್ಚಿನದನ್ನು ಮುಂದೆ ನೋಡೋಣ.

ಈ ಸಂಸ್ಕೃತಿಗೂ, ಸಂವಿಧಾನದ ಹಿನ್ನೆಲೆಯಲ್ಲಿರುವ ಸಂಸ್ಕೃತಿಗೂ ಇರುವ ವೈರುಧ್ಯ ಎದ್ದು ಕಾಣುವಂತಹುದು. ಸಂವಿಧಾನದ ಸಂಸ್ಕೃತಿಯು ಸರ್ಕಾರದ ಚಟುವಟಿಕೆಗಳು ಸಮಾನತೆ, ನ್ಯಾಯ ಮುಂತಾದ ಸಾರ್ವತ್ರಿಕ ಮೌಲ್ಯಗಳನ್ನು ಎತ್ತಿ ಹಿಡಿಯುವಂತಹು-ದಾಗಿರಬೇಕು ಎಂದು ಹೇಳುತ್ತದೆ. ಅದಕ್ಕಾಗಿ ರಾಜ್ಯ ವ್ಯವಸ್ಥೆಯು ದಲಿತರು ವಾಸಿಸುವ ಬೀದಿಯಲ್ಲಿ ಕೈಪಂಪನ್ನು ಕೂರಿಸಲು ಹಣಕಾಸಿನ ಹಂಚಿಕೆ ಮಾಡಬೇಕು ಎಂಬುದಾಗಿ ನೀತಿ ನಿಯಮಗಳನ್ನು ರೂಪಿಸಬಹುದು. ಆದರೆ ಇದರಲ್ಲಿ ತೊಡಗಿ-ಕೊಂಡಿರುವ ವಿಭಿನ್ನ ಪಾತ್ರಧಾರಿಗಳು, ಆ ಹಂಚಿಕೆಯಲ್ಲಿ ತಮ್ಮ ಪಾಲನ್ನು ಕಬಳಿಸುವುದು ಅತ್ಯಂತ ಸಾಮಾನ್ಯ ಸಂಗತಿ, ಇದು ಪ್ರಪಂಚದಲ್ಲಿ ಎಲ್ಲೆಡೆ ನಡೆಯುವಂತಹದ್ದೇ ಎಂದು ಪರಿಗಣಿಸುತ್ತಾರೆ. ಉದಾಹರಣೆಗೆ, ಅಂತಹ ಸಂದರ್ಭದಲ್ಲಿ ಅವರು ಕೆಲಸಕ್ಕೆ ಏನಾದರೊಂದು ತಡೆಯೊಡ್ಡಿ ಅಥವಾ ಕೆಲಸವು ವಿಳಂಬವಾಗುವಂತೆ ಮಾಡಿ, ತಮ್ಮ ಜಾತಿಯ ಅಥವಾ ಇನ್ನಿತರ ಗುಂಪಿನಲ್ಲಿ ತಮಗೆ ಸಂಪರ್ಕವಿರುವ ವ್ಯಕ್ತಿಗಳ ಜಾಲದ ಮುಖಾಂತರ ತಮ್ಮನ್ನು ತಲುಪುವಂತೆ ನೋಡಿಕೊಳ್ಳಬಹುದು. ಒಂದು ಕೈಪಂಪನ್ನು ಕೂರಿಸಿ ಮುಗಿಸುವ ಮೊದಲು ಶೇ.20-30ರಷ್ಟು ಹಣವನ್ನು ವಿವಿಧ ಹಂತಗಳಲ್ಲಿ ಮುರಿದುಕೊಳ್ಳುವುದು ಸಾಧಾರಣ ಸಂಗತಿಯಾಗಿ-ಬಿಟ್ಟಿತ್ತು.

ಈ ಎರಡು ತರಹದ ಸಂಸ್ಕೃತಿಗಳ ನಡುವಿನ ತಿಕ್ಕಾಟವನ್ನು ಹಲವಾರು ಹಂತಗಳಲ್ಲಿ ಕಾಣಬಹುದಿತ್ತು. 'ಏಕಲವ್ಯ'ದ ಸಮಾಜಶಾಸ್ತ್ರ ಕಾರ್ಯಕ್ರಮಗಳು ಅನುಸರಿಸುತ್ತಿದ್ದ ಪಠ್ಯ-ಪುಸ್ತಕಗಳಲ್ಲಿ, ಸಂವಿಧಾನದಲ್ಲಿ ಖಾತ್ರಿಪಡಿಸಿದಂತೆ ಸರ್ವರಿಗೂ ಕೊಡ ಮಾಡಿದ ಹಕ್ಕುಗಳ ಬಗ್ಗೆ ಹಾಗು ನಾವು ಆಮ್ಮ ಹಕ್ಕುಗಳನ್ನು ಕಾಪಾಡಿಕೊಳ್ಳಲು ಏನು ಮಾಡಬೇಕು ಎನ್ನುವುದರ ಕುರಿತು ಅತ್ಯುತ್ಸಾಹದಿಂದ ಕಲಿಸಲಾಗುತ್ತಿತ್ತು. ಈ ಕಾರ್ಯಕ್ರಮವು ಸರ್ಕಾರಿ ಶಾಲೆಯ ಶಿಕ್ಷಕರನ್ನು ಒಳಗೊಂಡಿದ್ದು ಅವರು ಈ ಪಠ್ಯ-ಪುಸ್ತಕಗಳಿಂದ ಗಾಢವಾಗಿ ಪ್ರಭಾವಿತರಾದರು. ಹಾಗಿದ್ದರೂ ಅವರಲ್ಲಿ ಕೆಲವರು, 'ಈ ಪಠ್ಯಪುಸ್ತಕಗಳನ್ನು ಅವು ಇರುವ ಹಾಗೆಯೇ ನಾವು ಕಲಿಸಿದರೆ, ಮರುದಿನವೇ ಪಂಚಾಯತ್ ಅಧ್ಯಕ್ಷರ (ಸರಪಂಚ್) ಹಿಂಬಾಲಕರು ದೊಣ್ಣೆ ಹಿಡಿದು ಶಾಲೆಗೆ ಬರುತ್ತಾರೆ,' ಎಂದು ಹೇಳುತ್ತಿದ್ದರು. ಪಠ್ಯಪುಸ್ತಕದ ಯಾವಯಾವ ಭಾಗಗಳಲ್ಲಿ ಪರಿಣಾಮವನ್ನು ಎದುರಿಸಬೇಕಾಗಿಬರಬಹುದೆಂಬ ನಿರೀಕ್ಷೆಯಿತ್ತೋ ಆ ಭಾಗಗಳ ಕಡೆಗೆ ಹೆಚ್ಚಿನ ಗಮನ ನೀಡುತ್ತಿದ್ದರು.

**ಸಮುದಾಯ ಪ್ರೀತಿ**

ಸಂವಿಧಾನವು ಕೊಡ ಮಾಡುವ ವೈಚಾರಿಕತೆಯ ಸಮಾನತೆ ಮತ್ತು ನ್ಯಾಯಗಳಂತಹ ವಿಚಾರಗಳು ಹಾಗುಸಾರ್ವಜನಿಕ ಬದುಕಿಗೆ ಸಂಬಂಧಿಸಿದಂತೆ ಸ್ಥಳೀಯ ರೀತಿ–ನೀತಿಗಳ ನಡುವೆ ಅಗಾಧವಾದ ಕಂದಕವಿತ್ತು. ಆದರೆ ಸಾರ್ವಜನಿಕ ಬದುಕಿಗೆ ಸಂಬಂಧಿಸಿದಂತೆ ಸ್ಥಳೀಯ ರೀತಿ–ನೀತಿಗಳಲ್ಲಿ ಬೇರೆ ಧ್ವನಿಗಳೂ ಇದ್ದವು. ಜನರು ಏಕೆ ಸಾರ್ವಜನಿಕ ಸ್ಥಳಗಳಲ್ಲಿ ಹೀಗೆ ನಡೆದುಕೊಳ್ಳುತ್ತಿದ್ದರು. ಅವರು ಯಾರನ್ನು ತೃಪ್ತಿಪಡಿಸಲು ಪ್ರಯತ್ನಿಸುತ್ತಿದ್ದರು ಎಂದು ಸುತ್ತಲಿನ ಜನರನ್ನು ಪ್ರಶ್ನಿಸಿದಾಗ ನನಗೆ (ಸಾಮಾನ್ಯಕ್ಕಿಂತ ಭಿನ್ನವಾದ) ಹಲವಾರು ಅಪವಾದಗಳು ದೊರೆತವು. ಅವರಲ್ಲೊಬ್ಬ ಇತರ ಹಿಂದುಳಿದ ವರ್ಗಕ್ಕೆ (OBC) ಸೇರಿದವನಾಗಿದ್ದ. ಆತ ನರ್ಮದಾ ನದಿಯುದ್ದಕ್ಕೂ ಮೆಟ್ಟಿಲುಗಳನ್ನು ಕಟ್ಟುವ (ಘಾಟ್) ಕೆಲಸದ ಮುಂದಾಳತ್ವ ವಹಿಸಿದ್ದ. ಇಲ್ಲಿ ವಾಸಿಸುವ ಎಲ್ಲಾ ಧರ್ಮದ ಜನರ ಸಾಂಸ್ಕೃತಿಕ ಬದುಕಿನಲ್ಲಿಯೂ ಈ ನದಿಗೆ ವಿಶೇಷ ಸ್ಥಾನವಿದೆ. ನರ್ಮದೆ ಎಷ್ಟು ಪವಿತ್ರ ಹಾಗು ಪರಿಶುದ್ಧ ಎಂದರೆ ಒಮ್ಮೆ ಅದನ್ನು ನೋಡಿದರೆ ಸಾಕು  ಮನುಷ್ಯನ ಪಾಪಗಳು ಪರಿಹಾರವಾಗುತ್ತವೆ ಎಂಬ ಸ್ಥಳೀಯ ನಂಬಿಕೆಯನ್ನು ಅವರು ಎಷ್ಟು ಬಾರಿ ಬೇಕಾದರೂ ಆನಂದದಿಂದ ಪುನರಾವರ್ತಿಸುತ್ತಾರೆ. ನಿಜ ಹೇಳಬೇಕೆಂದರೆ ಇದನ್ನು ಸಾಧಿಸಲು ನೀವು ಹೋಗಿ ಗಂಗೆಯಲ್ಲಿ ಒಮ್ಮೆಯಾದರೂ ಮುಳುಗಬೇಕು ಎಂದು ಅವರು  ಹೇಳಲು ಮರೆಯುವುದಿಲ್ಲ.

ನದಿ ದಂಡೆಯುದ್ದಕ್ಕೂ ಅಲ್ಲಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದ್ದು, ಇದನ್ನು ಒಂದೋ ಶ್ರೀಮಂತರ ಕೊಡುಗೆಯ ಹಣದಿಂದ ನಿರ್ಮಿಸಲಾಗಿದೆ ಅಥವಾ ನಿರ್ಮಾಣ ಸಾಮಗ್ರಿಗಳ ವೆಚ್ಚದಲ್ಲಿ ಶೇ.20ರಷ್ಟನ್ನು ಪಡೆದುಕೊಳ್ಳುತ್ತಲೇ ತಾವು ಎಷ್ಟು ಉದಾತ್ತರು ಎಂಬುದನ್ನು ತೋರಿಸಿಕೊಳ್ಳಲು ಪ್ರಯತ್ನಿಸುವ ರಾಜಕಾರಣಿಗಳ ಪ್ರಭಾವದಿಂದ ಕಟ್ಟಲಾಗಿದೆ. ಆದರೆ ನಾನು ಯಾವ ಘಾಟ್‌ನ ಕುರಿತು ಬರೆಯಲು ಬಯಸುವೆನೋ ಅದು ಹಿಂದೊಮ್ಮೆ ಮಾದಕವ್ಯಸನಿಯಾಗಿದ್ದ ಹಾಗು ಯಾವ ಕೆಲಸಕ್ಕೂ ಬಾರದಿದ್ದ ವ್ಯಕ್ತಿಯೊಬ್ಬನ ಮುಂದಾಳತ್ವದಲ್ಲಿ ನಿರ್ಮಿಸಲ್ಪಟ್ಟಿದೆ. ಅವನು ನನಗೆ ಹೇಳಿದ ಕತೆ ಹೀಗಿದೆ: ನದಿಯ ದಡದ ಮೇಲೆ ಸೀಳೊಂದರ ಪಕ್ಕದಲ್ಲಿ ಅವನು ಮತ್ತು ಅವನ ಸ್ನೇಹಿತರು ಕುಳಿತು ಮಾದಕವಸ್ತುಗಳನ್ನು ಸೇವಿಸುತ್ತಿದ್ದರು. ಅಲ್ಲಿ ನದಿ ದಡದ ಉದ್ದಕ್ಕೂ ದೊಡ್ಡದೊಡ್ಡ ಬಂಡೆಗಳು ರಾಶಿ ಬಿದ್ದಿದ್ದವು. ಒಂದು ದಿನ ಅಲ್ಲಿಗೆ ಸ್ನಾನಕ್ಕೆಂದು ಬಂದಿದ್ದ ಮೇಲ್ಜಾತಿಯ ಹೆಂಗಸೊಬ್ಬಳ, ದಾರಿಯಲ್ಲಿ ಎದುರಾದ ತಪ್ಪಿಗಾಗಿ ದಲಿತ ಮಹಿಳೆಯೊಬ್ಬಳು ಬಯ್ಗುಳ ಆ ಅವರು ನೋಡಿದರು. ಬಂಡೆಗಳ ಮೇಲೆ ಕಾಲಿಟ್ಟು ನಡೆದು ಬೇರೊಂದು ಜಾಗವನ್ನು ಹುಡುಕಿಕೊಳ್ಳಲು ಆ ದಲಿತ ಮಹಿಳೆ ಕಷ್ಟಪಡುತ್ತಿದ್ದಳು. ಅದನ್ನು ನೋಡಿ ಒಂದು ದಿನ ಈ ಮಾದಕವ್ಯಸನಿಗಳು ಬಂಡೆಗಳನ್ನು ಸ್ವಲ್ಪ ಓರಣಗೊಳಿಸಲು ನಿರ್ಧರಿಸಿದರು. ಹೀಗೆ ಪ್ರತೀ ದಿನವೂ ಅವುಗಳಲ್ಲಿ ಒಂದಷ್ಟನ್ನು ಆಚೀಚೆ ಸರಿಸಿ ಅಚ್ಚುಕಟ್ಟಾಗಿ ಇಡುತ್ತ ಹೋದರು. ನಿಧಾನವಾಗಿ ಅವರ ಕೆಲಸದ ಬಗ್ಗೆ ಗೊತ್ತಾಗುತ್ತ ಹೋದಂತೆ ಜನರು ನೆರವಿಗೆ ಬರತೊಡಗಿದರು. ಯಾರೋ ಸಿಮೆಂಟಿನ ಚೀಲವೊಂದನ್ನು ಕೊಟ್ಟರು, ಇನ್ಯಾರೋ ಬಂದು ಅದನ್ನು ಕಲೆಸಿ ಗಾರೆ ಹಾಕಿದರು. ಕೆಲವು ಮುಸ್ಲಿಮರೂ ಜೊತೆಗೂಡಿದರು. ಇವರಿಗೆ ಸಹಾಯ ಮಾಡುವುದರಿಂದ ಯಾರಿಗೆ ಯಾವ ಲಾಭವೂ ಸಿಗುತ್ತಿರಲಿಲ್ಲ. ಅವರು ಯಾರಿಗೂ ನಷ್ಟವನ್ನು ಉಂಟುಮಾಡುತ್ತಿರಲಿಲ್ಲ. ಹಾಗಿದ್ದರೂ ಘಾಟ್ ನಿರ್ಮಾಣವಾಯಿತು ಮತ್ತು ಅದರ ಕೆಲಸದಲ್ಲಿ ತೊಡಗಿಕೊಂಡ ಅವರು ಮಾದಕ–ವಸ್ತುಗಳನ್ನು ತ್ಯಜಿಸಿದ್ದರು.

ಸಮುದಾಯದ ಒಳಿತಿನ ಪ್ರಜ್ಞೆ ಇಲ್ಲಿ ಕೆಲಸ ಮಾಡಿತ್ತು. ನಿಸ್ವಾರ್ಥ ಕಾರ್ಯವೊಂದರಿಂದ ಜನ ಪ್ರೇರಿತರಾದರು ಹಾಗು ಮತ್ತದೇ ಸ್ವಾರ್ಥರಹಿತ ಉದ್ದೇಶದಿಂದ ಅದನ್ನು ಮುಂದುವರೆಸಲು ಕೈಜೋಡಿಸಿದರು. ಅದೊಂದು ಚಿಕ್ಕ ಸಮುದಾಯವಾಗಿದ್ದ ಕಾರಣ ಈ ಕೆಲಸ ಸಾಧ್ಯವಾಯಿತು, ಮತ್ತು ವಿಷಯವು ಒಬ್ಬರಿಂದ ಮತ್ತೊಬ್ಬರಿಗೆ ಬೇಗ ಹರಡಿತು.  ಹಾಗಾಗಿ ಪ್ರತಿಯೊಬ್ಬರೂ ಬಂದು ಏನು ನಡೆಯುತ್ತಿದೆಯೆಂದು ನೋಡಿ ತಿಳಿಯುವಂತಾಗಿತ್ತು.  ಈ ಸಾರ್ವಜನಿಕ ಕಾರ್ಯದ ಅಂತರಾಳದಲ್ಲಿರುವುದು ಅವರು ಹೇಳುವ ಹಾಗೆ ಪ್ರೇಮ. ನದಿಯ ಕುರಿತಾದ ಪ್ರೀತಿ, ಘಾಟ್ ನಿರ್ಮಾಣದ ಬಗ್ಗೆ ಒಲವು ಹಾಗು ಆ ಪ್ರದೇಶದಲ್ಲಿ ನೆಲೆಸಿದ ಭಕ್ತಿಭಾವದಿಂದಾಗಿ ತಾವು ಈ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡೆವೆಂದು ಅಲ್ಲಿನ ಕೆಲಸಗಾರರು ಮತ್ತು ದಾನಿಗಳು ಹೇಳಿದರು. ಇದು ಸಂವಿಧಾನವು ಹೇಳುವ ವೈಚಾರಿಕ ಸಮಾನತೆಯಲ್ಲ (rational equality), ಜಾತಿ ಮತ್ತು ವರ್ಗಪದ್ಧತಿಯಲ್ಲಿನ ಶ್ರೇಣೀಕೃತ ಬಲದ ವ್ಯವಸ್ಥೆಯೂ ಅಲ್ಲ. ಸಮುದಾಯ ಪ್ರೀತಿಯ ಸಂಸ್ಕೃತಿಯು ವಿಭಜನೆಗಳ ಇನ್ನೊಂದು ಮಗ್ಗುಲಾಗಿದ್ದು, ನಾವು ಮಕ್ಕಳಿಗೆ ಕಲಿಸಲು ಬಯಸುವ ಪೌರತ್ವದ ಇನ್ನೊಂದೇ ಬಗೆ ಇದೇ ಆಗಿದೆ.

**ಉಪಸಂಹಾರ**

ನಮ್ಮ ಮಕ್ಕಳಿಗೆ ನಾವು ಕಲಿಸಲು ಬಯಸುವ ಪೌರತ್ವದ ರೀತಿಯು ನಿರ್ವಾತದೊಂದಿಗೆ ಮಾತನಾಡುವಂತಹದಲ್ಲ. ಮಕ್ಕಳು ಶಾಲೆಗೆ ಖಾಲಿ ಸ್ಲೇಟಿನ ಹಾಗೆ ಬರುವುದಿಲ್ಲ. ಅವರು ಅನೇಕ ಎಳೆಗಳೊಂದಿಗೆ ಹೆಣೆಯಲ್ಪಟ್ಟ ಸಂಕೀರ್ಣ ಸಂಸ್ಕೃತಿಯೊಂದರ ಭಾಗವಾಗಿರುತ್ತಾರೆ. ಪೌರ ವ್ಯವಹಾರಗಳನ್ನು ಕುರಿತಂತೆ ಮಕ್ಕಳು ಹೊಂದಿರುವ ಜ್ಞಾನದ ಬಗ್ಗೆ ಅಲೆಕ್ಸ್ ಎಮ್. ಜಾರ್ಜ್ ಅವರು ಕೈಗೊಂಡ ಅಧ್ಯಯನವು (2004) ಪ್ರಾಥಮಿಕ ಶಾಲೆಯ ಮಕ್ಕಳು ಮುಂಬರುವ ಚುನಾವಣೆಯಲ್ಲಿ ಹಣಬಲವನ್ನು ಎಷ್ಟರಮಟ್ಟಿಗೆ ಉಪಯೋಗಿಸ–ಲಾಗುತ್ತಿದೆ ಮತ್ತು ಪಂಚಾಯತ್‌ನಲ್ಲಿ ಯಾರು ಎಷ್ಟು  ಹಣವನ್ನು ಲಂಚವಾಗಿ ತೆಗೆದುಕೊಳ್ಳುತ್ತಿದ್ದಾರೆ ಎನ್ನುವುದನ್ನು ಚೆನ್ನಾಗಿ ತಿಳಿದಿದ್ದರು ಎಂಬುದನ್ನು ಹೇಳುತ್ತದೆ. ಹಾಗಾಗಿ, ಅವರ ಸಂಸ್ಕೃತಿಯಲ್ಲಿನ ಈ ಮೂರು ಎಳೆಗಳಲ್ಲಿ – ಸಾರ್ವತ್ರಿಕವಾದ ಸಮಾನತೆ, ಪಿತೃಪ್ರಧಾನವಾದ ವರ್ಗ ಮತ್ತು ಜಾತಿವ್ಯವಸ್ಥೆಯಲ್ಲಿ ಉಳಿವಿನ ತಂತ್ರಗಳು, ಅಥವಾ ಸಮುದಾಯದಲ್ಲಿನ ಒಳ್ಳೆಯತನದ ಪ್ರೀತಿ – ಯಾವುದನ್ನು ನಾವು ಪೌರತ್ವದ ಮಾದರಿಯೆಂದು ಉತ್ತೇಜಿಸಲು ಬಯಸುತ್ತೇವೆ? ಬೇರೆಯವರು ಬೇರೆ ಆಯ್ಕೆಗಳನ್ನು ಮಾಡಿಕೊಳ್ಳಬಹುದು. ಆದರೆ ನಾನು ಸಂವಿಧಾನದ ಸಂಸ್ಕೃತಿಯನ್ನು ಉತ್ತೇಜಿಸಲು ಹಾಗು ಅದಕ್ಕೆ ನಮ್ಮ ಸುತ್ತಮುತ್ತಲೂ ಇರುವ ಸ್ವಾರ್ಥರಹಿತ ಒಳ್ಳೆಯತನವನ್ನು ಗುರುತಿಸುವ ಮತ್ತು ಅದರೊಂದಿಗೆ ಸಂಬಂಧವನ್ನು ಬೆಳೆಸಿಕೊಳ್ಳುವ ಸಾಮರ್ಥ್ಯವನ್ನು ಬೆಳೆಸಲು ಇಷ್ಟಪಡುತ್ತೇನೆ.

ಇದನ್ನು ಹೇಗೆ ಕಲಿಸಬೇಕು ಎನ್ನುವುದು ಬೇರೆಯದೇ ಆದ ಮತ್ತು ಒಂದು ದೀರ್ಘಕತೆ. ನಾನಿಲ್ಲಿ, ವಿದ್ಯಾರ್ಥಿಗಳ ಬದುಕಿನ ಅನುಭವದ ವಾಸ್ತವಗಳನ್ನು ಕಡೆಗಣಿಸಿ ಇದನ್ನು ಕಲಿಸಲು ಸಾಧ್ಯವಿಲ್ಲ ಎಂದಷ್ಟೇ ಹೇಳಿ ನಿಲ್ಲಿಸುತ್ತೇನೆ. ನಾವು ಇವುಗಳನ್ನು ಕಡೆಗಣಿಸಿದರೆ, ತರಗತಿ ಕೊಠಡಿಯಲ್ಲಿ ಮಾಡುವುದು ಒಂದು, ಅದರಿಂದಾಚೆ ಮಾಡುವುದು ಇನ್ನೊಂದು ಎಂದು ವಿದ್ಯಾರ್ಥಿಗಳು ಹೇಳಿಬಿಡುತ್ತಾರೆ. ಬದಲಿಗೆ, ಹೊರಪ್ರಪಂಚದಲ್ಲಿ ನಿಜಕ್ಕೂ ನಡೆಯುತ್ತಿರುವುದು ಏನು ಮತ್ತು ನಾವು ಅವುಗಳ ಕುರಿತು ಏಕೆ ಕಾಳಜಿ ತೋರಿಸಬೇಕು ಎನ್ನುವುದರ ಬಗ್ಗೆ ಶಾಲೆಗಳಲ್ಲಿ ಮಾತನಾಡಲು ಆರಂಭಿಸಬೇಕು. ಬಹುಪಾಲು

ಶಾಲೆಗಳು ಹಾಗು ಪಠ್ಯಪುಸ್ತಕಗಳು ಈ ಕುರಿತು ಮಾತನಾಡಲು ಮುಜುಗರಪಡುತ್ತವೆ ಮತ್ತು ಅದು ಅಪಾಯಕಾರಿ ಕೂಡ ಎಂದು ಭಾವಿಸುತ್ತವೆ. ಹಾಗಿದ್ದರೂ ನಾವು ಜಾತಿವಾದ, ವರ್ಗ ಅಸಮಾನತೆ, ಪಿತೃಪ್ರಾಧಾನ್ಯತೆ ಇತ್ಯಾದಿಗಳ ಬಗ್ಗೆ ನೇರವಾಗಿ ಮಾತನಾಡಲು ಆರಂಭಿಸಿದಾಗ ಸಂವಿಧಾನ ಸಂಸ್ಕೃತಿಯು ಇವೆಲ್ಲವುಗಳ ಜೊತೆ ವ್ಯವಹರಿಸುವ ಮಾರ್ಗವೊಂದನ್ನು ನಮಗೆ ಏಕೆ ಕೊಟ್ಟಿದೆ ಎನ್ನುವುದನ್ನು ವಿದ್ಯಾರ್ಥಿಗಳು, ಅರಿಯಲು ಆರಂಭಿಸುತ್ತಾರೆ. ಶೋಷಣೆ, ದಬ್ಬಾಳಿಕೆಗಳು ವಾಸ್ತವದಲ್ಲಿ ಹೇಗೆ ನಡೆಯುತ್ತವೆ ಎಂಬುದರ ಬಗ್ಗೆ ಶಾಲೆಗಳು ಚರ್ಚೆ ಆರಂಭಿಸಬೇಕಿದೆ. ಅದನ್ನು ಪರಿವರ್ತಿಸುವ ಪ್ರತಿ ಸಂಸ್ಕೃತಿಯನ್ನು ಸೃಷ್ಟಿಸುವ ನಿಟ್ಟಿನಲ್ಲಿ ಇದು ಪ್ರಥಮ ಹೆಜ್ಜೆ. ಸ್ವಾತಂತ್ರ್ಯ ಹೋರಾಟವು ಸ್ವಾತಂತ್ರ್ಯವನ್ನು ಸಾಮಾಜಿಕ ಪರಿವರ್ತನೆಯೊಂದರ ಆರಂಭ ಮಾತ್ರ ಎಂದು ಪರಿಗಣಿಸಿತ್ತು. ಆ ಸಾಮಾಜಿಕ ಪರಿವರ್ತನೆಯು ಆಗುವಂತೆ ನೋಡಿಕೊಳ್ಳುವುದು ಶಾಲೆಗಳ ಜವಾಬ್ದಾರಿಯಾಗಿದೆ.


**ಪರಾಮರ್ಶನ:**

George, Alex M. 2004. *Children's Perception of Sarkar: The Fallacies of Civics Teaching.* Contemporary Education Dialogue 1 (2): 228–57.

Madan, Amman. 2003. *Old and New Dilemmas in Indian Civic Education*, Economic and Political Weekly 38 (44): 4655–60.

Madan, Amman. 2005. *Between Love, Domination and Reason: Civic Education and Its 'Others' in Central India*, Contemporary Education Dialogue 2 (2): 170–92.





**ಅಮ್ಮನ್ ಮದನ್** ಅವರು ಚಂಡೀಗಢದ ಪಂಜಾಬ್ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರವನ್ನು ಹಾಗು ನವದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರವನ್ನು ಅಧ್ಯಯನ ಮಾಡಿದ್ದಾರೆ.  ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಾರೆ. ಶಿಕ್ಷಣ ಮತ್ತು ಸಾಮಾಜಿಕ ಅಸಮಾನತೆಯ ಮೇಲೆ ಅವರು ಪುಸ್ತಕವೊಂದನ್ನು ಬರೆಯುತ್ತಿದ್ದು, ಅವರ ಇತ್ತೀಚಿನ ಪುಸ್ತಕ, 'ಎಜುಕೇಶನ್ ಎಂಡ್ ಮಾಡರ್ನಿಟಿ'(ಶಿಕ್ಷಣ ಮತ್ತು ಆಧುನಿಕತೆ)ಯನ್ನು 'ಏಕಲವ್ಯ' ಸಂಸ್ಥೆಯು ಪ್ರಕಟಿಸಿದೆ. ಅವರನ್ನು amman.madan@apu.edu.in ಮೂಲಕ ಸಂಪರ್ಕಿಸಬಹುದು.


ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಲತಾ ಕೆ.ಸಿ.**

# ಪೌರತ್ವ ಶಿಕ್ಷಣ | ವಿಧಾನಗಳ ಕುರಿತು ಪರ್ಯಾಲೋಚನೆ

ಅರವಿಂದ ಸರ್ದಾನಾ

ನಾವು 1980ರ ಸುಮಾರಿಗೆ 'ಏಕಲವ್ಯ'ದಲ್ಲಿ ಮಾಧ್ಯಮಿಕ ಶಾಲೆಗಳಗಾಗಿ ಸಮಾಜ ವಿಜ್ಞಾನದ ಕುರಿತು ಮೊದಲ ಬಾರಿಗೆ ಕೆಲಸ ಪ್ರಾರಂಭಿಸಿದಾಗ, ಆ ಕಾಲದ ರಾಜ್ಯ ಪಠ್ಯಪುಸ್ತಕಗಳಲ್ಲಿ ಪೌರನೀತಿಯ ಕುರಿತು ಇದ್ದ ವಿಭಾಗವನ್ನು ಅರ್ಥ ಮಾಡಿ-ಕೊಳ್ಳುವುದು ಕಷ್ಟಕರವಾಗಿತ್ತು. ಆಗಿನ ಅಧ್ಯಾಯಗಳು ಒಂದಷ್ಟು ನಿಯಮಗಳು ಮತ್ತು ಕಾರ್ಯವಿಧಾನಗಳ ಕಂತೆಗಳಾಗಿದ್ದವು ಅಥವಾ 'ಅಜ್ಞಾನಿ ಮತ್ತು ಅಶಿಕ್ಷಿತ' ನಾಗರಿಕರಿಗೆ ಇರುವ ನೈತಿಕ ವಿಜ್ಞಾನದ ಪಾಠಗಳಾಗಿದ್ದವು. ಅಧ್ಯಾಯಗಳ ಅನುಕ್ರಮಗಳು ಸರಿಸುಮಾರು ಸಂವಿಧಾನದ ಶೀರ್ಷಿಕೆಯನ್ನು ಅನುಸರಿಸುತ್ತಿದ್ದವು ಹಾಗು ಅನೇಕ ಸಾಲುಗಳನ್ನು ಯಥಾವತ್ತಾಗಿ ಸಂವಿಧಾನದ ಕಡತದಿಂದ ಅಕ್ಷರಶಃ ತೆಗೆದುಕೊಳ್ಳಲಾಗಿತ್ತು. ಇವೆಲ್ಲವೂ ಸರಿಯಾಗಿಯೇ ಇತ್ತು. ಆದರೆ ವಿದ್ಯಾರ್ಥಿಗಳ ಪಾಲಿಗೆ ಪ್ರಯೋಜನಕ್ಕೆ ಬಾರದ ವಿಚಾರವಾಗಿತ್ತು. ಪ್ರಮುಖ ಪ್ರಶ್ನೆಗಳನ್ನು ಉರು ಹೊಡೆಯುವುದು ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಪಾಲಿಗೆ ತ್ವರಿತ ಮತ್ತು ಶೀಘ್ರ ಕಲಿಕಾ ವಿಧಾನವಾಗಿ ಮಾರ್ಪಟ್ಟಿತ್ತು.

ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬದುಕಿನ ಸಂಗತ ವಿಷಯ ವಸ್ತುಗಳನ್ನು ಒಳಗೊಳ್ಳುವ ಮೂಲಕ ಇದರ ವ್ಯಾಪ್ತಿಯನ್ನು ವೃದ್ಧಿಸುವ ಪರ್ಯಾಯ ಚೌಕಟ್ಟನ್ನು ಪೌರನೀತಿಗೆ ಪೂರಕವಾಗಿ ನಾವು ಅಳವಡಿಸಿದೆವು. ಸಮಕಾಲೀನ ರಾಜಕೀಯ ಬದುಕು ಮತ್ತು ಸಂಸ್ಥೆಗಳ ಕಾರ್ಯನಿರ್ವಹಣೆಯತ್ತ ಗಮನಹರಿಸಿ, ಕಾನೂನಿನ ಆದರ್ಶಗಳಿಗೆ ವ್ಯತಿರಿಕ್ತವಾಗಿ ಅವು ಹೇಗೆ ಕಾರ್ಯೋನ್ಮುಖವಾಗಿವೆ ಎನ್ನುವುದನ್ನು ಚರ್ಚಿಸಲು ನಿರ್ಧರಿಸಿದೆವು. ಇದೆಲ್ಲವೂ 1986ರಿಂದ 2002ರ ತನಕ ನಡೆದ 'ಏಕಲವ್ಯ'ದ ನವೀನ ಸಮಾಜ ವಿಜ್ಞಾನ ಕಾರ್ಯಕ್ರಮದ ಭಾಗವೆನಿಸಿತ್ತು. ನಾವು ಸಮಾಜ ವಿಜ್ಞಾನ ಪಠ್ಯಪುಸ್ತಕಗಳು, ಶಿಕ್ಷಕರ ತರಬೇತಿ ಮತ್ತು ಮೌಲ್ಯಮಾಪನದ ಹೊಸ ವಿಧಾನಗಳ ಕುರಿತು ಕೆಲಸ ಮಾಡಿದೆವು. ಆದರೆ, ನಮ್ಮ ಶೈಕ್ಷಣಿಕ ಸಂಸ್ಕೃತಿಯಲ್ಲಿ ಎರಡು ವಿರುದ್ಧ ದೃಷ್ಟಿಕೋನಗಳು ಉಳಿದುಬಿಟ್ಟಿವೆ. ಮೊದಲನೆಯದು, ಇತರರನ್ನು ಸುಶಿಕ್ಷಿತರ-ನ್ನಾಗಿಸಲು ಅಥವಾ ಅಜ್ಞಾನದ ಕೊರತೆಯನ್ನು ನೀಗಿಸಲು ಕರೆ ನೀಡುವ ನಿಷ್ಕ್ರಿಯ ಪೌರತ್ವ (passive citizenship). ಈ ದೃಷ್ಟಿಕೋನವನ್ನು ವಿಶಾಲ ಸಮುದಾಯವು ಒಪ್ಪಿಕೊಂಡಿದ್ದು, ಪೌರನೀತಿ ತರಗತಿಗಳಲ್ಲಿ ಇಂತಹ ವಾದಗಳನ್ನು ಮತ್ತೆಮತ್ತೆ ಪುನರಾವರ್ತಿಸಿ ಅನೇಕ ವರ್ಷಗಳಿಂದ ಇದನ್ನು ಬಲಪಡಿಸುತ್ತಲೇ ಬಂದಿದೆ. ಇವರಲ್ಲಿ, ಸರ್ಕಾರವನ್ನು ಮುಕ್ತವಾಗಿ ಟೀಕಿಸಲು ಆಗದ ಅಧಿಕಾರಿಗಳಂತೆ ವರ್ತಿಸುತ್ತಿದ್ದ ಅನೇಕ ಸರ್ಕಾರಿ ಶಾಲಾ ಶಿಕ್ಷಕರೂ ಸೇರಿದ್ದರು.

ಎರಡನೇ ಬಗೆಯ ದೃಷ್ಟಿಕೋನವನ್ನು ತಳೆದವರೆಂದರೆ ಸರ್ಕಾರಿ ಶಾಲೆಗಳ ಸಣ್ಣ ಪ್ರಮಾಣದ ಶಿಕ್ಷಕರ ಗುಂಪು. ಇವರು ನಮ್ಮ ಪ್ರಜಾತಾಂತ್ರಿಕ ವ್ಯವಸ್ಥೆಯ ವೈಫಲ್ಯಗಳನ್ನು ಮುಕ್ತವಾಗಿ ಚರ್ಚಿಸಲು ಸಿದ್ಧರಿರುವ, ತಿಳುವಳಿಕೆಯುಳ್ಳ ಮತ್ತು ವಿಮರ್ಶಾತ್ಮಕ ಪೌರತ್ವದಲ್ಲಿ ನಂಬಿಕೆ ಹೊಂದಿದವರಾಗಿದ್ದಾರೆ. ವಿಮರ್ಶಾತ್ಮಕ ಪೌರತ್ವದ ದೃಷ್ಟಿಕೋನವು (critical citizenship perspective) ಸೀಮಿತ ಪ್ರಮಾಣದಲ್ಲಿ ಸ್ವೀಕೃತಗೊಂಡಿದೆ. ಇದರಲ್ಲಿ, ಎಲ್ಲಾ ನಾಗರಿಕರನ್ನು ಸಮಾನರೆಂದು ಪರಿಗಣಿಸಲಾಗುತ್ತದೆ. ಹೀಗಾಗಿ ಬಡ ಮತ್ತು ಅನನುಕೂಲತೆಗೆ ಈಡಾದ ವರ್ಗಗಳನ್ನು ಕ್ಷುಲ್ಲಕವಾಗಿ ಕಾಣಲು ಸಾಧ್ಯವಿಲ್ಲ. ಅವರ ಬಡತನ ಅಥವಾ ಅವರಿಗೆ ಉಂಟಾದ ಅನ್ಯಾಯಕ್ಕೆ ಅವರನ್ನೇ ದೂರುವುದಿಲ್ಲ. ಅನ್ಯಾಯಕ್ಕೆ ಕಾರಣವಾದ ಸಾಮಾಜಿಕ ಮತ್ತು ಐತಿಹಾಸಿಕ ಕಾರಣಗಳು, ಸಮಕಾಲೀನ ಪ್ರಪಂಚದಲ್ಲಿ ಉಂಟಾಗುವ ಅಸಮಾನತೆ ಅಥವಾ ಭ್ರಾತೃತ್ವದ ಕೊರತೆಯನ್ನು ಅತ್ಯಂತ ಸೂಕ್ಷ್ಮ ರೀತಿಯಲ್ಲಿ ಚರ್ಚಿಸಲಾಗುತ್ತದೆ.

ಈ ವಿರೋಧಾಭಾಸದ ದೃಷ್ಟಿಕೋನಗಳು, ಶಿಕ್ಷಕರೊಂದಿಗೆ ಹಾಗು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಶೈಕ್ಷಣಿಕ ಆಡಳಿತಗಾರರೊಂದಿಗೆ ಚರ್ಚಿಸುವಾಗ ಬೆಳಕಿಗೆ ಬರುತ್ತವೆ. ಅಲ್ಲದೆ ಗಮನಾರ್ಹವಾದ ರೀತಿಗಳಲ್ಲಿ ಪಠ್ಯಕ್ರಮದ ವಿನ್ಯಾಸ ಮತ್ತು ಪ್ರಕ್ರಿಯೆಯನ್ನು ಬಾಧಿಸುತ್ತಿದ್ದು, ಪಠ್ಯಕ್ರಮ ಸುಧಾರಣಾ ಪ್ರಕ್ರಿಯೆಯಲ್ಲಿ ವಿಮರ್ಶಾತ್ಮಕ ಪೌರತ್ವಕ್ಕೆ ಪ್ರತಿರೋಧ ಒಡ್ಡಲಾಗುತ್ತದೆ. ಹೀಗಾಗಿ, ಒಬ್ಬರ ದೃಷ್ಟಿಕೋನವನ್ನು ಇನ್ನೊಬ್ಬರ ಮೇಲೆ ಹೇರದೆ ಇರುವಂತಾಗಲು ಆಳವಾಗಿ ತೊಡಗಿಸಿಕೊಳ್ಳುವ ಮತ್ತು ಸಂವಾದದ ವಾತಾವರಣ ಉಂಟುಮಾಡುವ ಅಗತ್ಯವಿದೆ. ಶಿಕ್ಷಕರ ಜೊತೆಗಿನ ಅಧಿವೇಶನಗಳಲ್ಲಿ ಹೊಮ್ಮಿದ ಚರ್ಚೆಯ ಕೆಲವು ಉದಾಹರಣೆಗಳನ್ನು ನೆನಪಿಸುವುದಾದರೆ:

ರಾಜಸ್ಥಾನದಲ್ಲಿ ನಡೆದ ಶಿಕ್ಷಕರ ತರಬೇತಿ ಕಾರ್ಯಕ್ರಮವೊಂದರಲ್ಲಿ, ಶಿಕ್ಷಕರ ಸಮೂಹವೊಂದು ಪ್ರತಿಭಟನೆ ವ್ಯಕ್ತಪಡಿಸಿತು. ಗ್ರಾಮಸಭೆಯಲ್ಲಿ ನೇರ ಪ್ರಜಾತಾಂತ್ರಿಕತೆಯ ಪರಿಕಲ್ಪನೆಗೆ ಸಂಬಂಧಿಸಿದ ಊಹನಾತ್ಮಕ ಪ್ರಶ್ನೆಗಳನ್ನು (hypothetical questions) ಚರ್ಚಿಸುವುದಿಲ್ಲ ಎಂದು ಇವರು ಪಟ್ಟು ಹಿಡಿದಿದ್ದರು. ರಾಜ್ಯದಲ್ಲಿ ಚಾಲ್ತಿಯಲ್ಲಿರುವ ನಿಯಮಗಳಿಗೆ ಸಂಬಂಧಿಸಿದಂತೆ ಚರ್ಚೆಯನ್ನು ಮಿತಿಗೊಳಿಸಬೇಕು ಎಂದು ಅವರು ಒತ್ತಾಯಿಸಿದರು. ಹಲವಾರು ವರ್ಷಗಳಿಂದ ಅವರು ಪಡೆದ ಪೌರನೀತಿಯ ಶಿಕ್ಷಣವು, ಆ ವಿಷಯವನ್ನು ಮುಂದಿನ ಜನಾಂಗಕ್ಕೆ ಹಸ್ತಾಂತರಿಸಬೇಕಾದ ಕಠಿಣ ನಿಯಮಗಳ ಸಂಗ್ರಹದಂತೆ ಕಾಣುವಂತೆ ಮಾಡಿತ್ತು.

ಛತ್ತೀಸ್‌ಗಢದಲ್ಲಿ, ಶಿಕ್ಷಕರ ಒಂದು ಸಮೂಹವು, ರಾಜ್ಯದಿಂದ ಆಗುವ ಕಾರ್ಮಿಕರ ಋತುಕಾಲಿಕ ವಲಸೆಯನ್ನು, ಪಲಾಯನ (ಬಲವಂತದ ವಲಸೆ) ಎಂಬ ಶಬ್ದವನ್ನು ಬಳಸದೆ ಉಲ್ಲೇಖಿಸಬೇಕು ಎಂದು ಪಟ್ಟು ಹಿಡಿಯಿತು. ಯಾವುದೇ ಪಲಾಯನ ನಡೆಯುತ್ತಿಲ್ಲ ಎಂದು ರಾಜ್ಯವು ಘೋಷಿಸಿತ್ತು, ಆದರೆ ರಾಯ್‌ಪುರ ಮತ್ತು ಬಿಲಾಸ್ಪುರದ ರೈಲು ನಿಲ್ದಾಣಗಳು, ಹತಾಶರಾಗಿ ದೆಹಲಿಯ ರೈಲು ಹತ್ತಲು ನಿಂತಿದ್ದ ಜನರಿಂದ ತುಂಬಿ ಹೋಗಿದ್ದವು.

ಜೀತಕಾರ್ಮಿಕ ಸಮಸ್ಯೆಗಳು, ಕೌಟುಂಬಿಕ ಹಿಂಸೆ ಅಥವಾ ಮಾನವ ಹಕ್ಕುಗಳಿಗೆ ಸಂಬಂಧಿಸಿದ ಯಾವುದೇ ವಿಚಾರಗಳನ್ನು ಪಠ್ಯಕ್ರಮದ

ವಿನ್ಯಾಸದ ಭಾಗವಾಗಿ ಸಮಾಲೋಚಿಸುವುದು ಕಷ್ಟದ ವಿಷಯವಾಗಿತ್ತು. ನಿಜಾಂಶವನ್ನು ತಳ್ಳಿಹಾಕಲು ಆಗದೆ ಇದ್ದಾಗ, ಅಥವಾ ನಾವು ಸರ್ಕಾರಿ ವರದಿಗಳನ್ನು ಬಳಸಿದಾಗ, ಇಂತಹ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ಈ ಮಕ್ಕಳು ಇನ್ನೂ ಎಳೆಯರು ಎನ್ನುವ ಸಬೂಬನ್ನು ಮುಂದಿಟ್ಟು ವಿಷಯವನ್ನು ಮುಚ್ಚಿಹಾಕಲಾಗುತ್ತಿತ್ತು. ಇವುಗಳನ್ನು ಬಿಟ್ಟುಬಿಡುವುದು ಒಳ್ಳೆಯದು ಏಕೆಂದರೆ, ಇವು ಈ ಸೂಕ್ಷ್ಮ ಮನಸ್ಸುಗಳಿಗೆ ಹಾನಿ ಮಾಡುತ್ತವೆ. ನಾವು ಆದರ್ಶಗಳನ್ನಷ್ಟೇ ಮಾತನಾಡುತ್ತೇವೆ, ಕಠೋರ ವಾಸ್ತವವನ್ನು ನಾವು ಎಂದಿಗೂ ಚರ್ಚಿಸುವುದಿಲ್ಲ ಎಂದು ಇತರರು ಹೇಳುತ್ತಿದ್ದರು. ಪಠ್ಯಕ್ರಮದ ಆ ಚೌಕಟ್ಟು, ಅಧ್ಯಾಯಗಳು ಮತ್ತು ಉದಾಹರಣೆಗಳನ್ನು ನಿರ್ಧರಿಸುವ ಮೊದಲು ದೀರ್ಘವಾದ ಚರ್ಚೆ ಮತ್ತು ಸಂಧಾನದ ಅಣತ್ಯವಿರುತ್ತಿತ್ತು.

ಭಿನ್ನ ನಂಬಿಕೆಯ ನೆಲೆಯನ್ನು ಹೊಂದಿರುವ ಎರಡು ಪಂಗಡಗಳ ಸಂಖ್ಯೆಯಲ್ಲಿ ಅಂತರವಿದ್ದರೂ ಭಿನ್ನತೆಯಿರುವುದಂತೂ ಸತ್ಯ. ಹೊಸ ಮತ್ತು ಮಾರ್ಪಡಿಸಿದ ಪಠ್ಯಪುಸ್ತಕಗಳಿಗೆ ಚಾಲನೆ ನೀಡಿದಾಗ, ಶಿಕ್ಷಕರೊಂದಿಗೆ ವಿಸ್ತೃತ ಪ್ರಮಾಣದ ಚರ್ಚೆಗಳು ನಡೆಯುವುದಿಲ್ಲ. ಇದು ಆಗದಿದ್ದರೆ, ಉತ್ತಮ ಪಠ್ಯಕ್ರಮ ಸಾಮಗ್ರಿಗಳು ದೊರೆತರೂ, ತರಗತಿ ಕೊಠಡಿಯ ಪ್ರಕ್ರಿಯೆಗಳಲ್ಲಿ ಯಾವುದೇ ಬದಲಾವಣೆ ಕಂಡುಬರುವುದಿಲ್ಲ.

**ನಿಷ್ಕ್ರಿಯ ಮತ್ತು ವಿಮರ್ಶಾತ್ಮಕ ಪೌರತ್ವ**

ನಿಷ್ಕ್ರಿಯ ಪೌರತ್ವದ ದೃಷ್ಟಿಕೋನ
ನಾಯಕತ್ವ ವಹಿಸಿಕೊಂಡವರು ತಾಳುವ ನಿಷ್ಕ್ರಿಯ ಪೌರತ್ವದ ದೃಷ್ಟಿಕೋನವು ಹೊಸ ಉಪಕ್ರಮಗಳನ್ನು ಹಳಿ ತಪ್ಪಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಎರಡು ದೃಷ್ಟಾಂತಗಳನ್ನು ಪರಿಗಣಿಸಿ:

ನಮ್ಮ ಕಾರ್ಯಕ್ರಮಗಳನ್ನು ವಿರೋಧಿಸುತ್ತಿದ್ದ, ನಮ್ಮ ಕಾರ್ಯ-ಕ್ಷೇತ್ರದಲ್ಲಿದ್ದ ಜೋರುಮಾತಿನ ರಾಜಕಾರಣಿಯೊಬ್ಬರು, ನಮ್ಮ ಅಧ್ಯಾಯಗಳು ಚುನಾಯಿತ ಪ್ರತಿನಿಧಿಗಳ ವಿರುದ್ಧ ಜನರು ದಂಗೆ ಏಳುವಂತೆ ಪ್ರಚೋದಿಸುತ್ತವೆ ಎಂದು ಹೇಳಿದರು. ಏಕೆಂದರೆ ಪಂಚಾಯತ್‌ಗೆ ಸಂಬಂಧಿಸಿದ ಅಧ್ಯಾಯದಲ್ಲಿ ಜನರು ಶಾಸಕರ ಮನೆಯ ಹೊರಗಡೆ ಪ್ರತಿಭಟಿಸುವುದನ್ನು, ಭ್ರಷ್ಟಾಚಾರದ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸುವುದನ್ನು ತೋರಿಸಲಾಗಿತ್ತು. ಇನ್ನೊಂದೆಡೆ, ಸರ್ಕಾರಿ ಶಾಲೆಗಳಿಗೆ ಪಠ್ಯಪುಸ್ತಕಗಳನ್ನು ಅಂಗೀಕರಿಸಬೇಕಿದ್ದ ಮಧ್ಯಪ್ರದೇಶದ ಉದಾರವಾದಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರು ನಮಗೆ ಒಮ್ಮೆ, 'ನೀವು ಸರ್ಕಾರದ ಗುಣ-ದೋಷಗಳನ್ನು ವಿಮರ್ಶಿಸಬಹುದು, ಆದರೆ ಲೇವಡಿ ಮಾಡಬೇಡಿ' ಎಂದು ಸಲಹೆ ನೀಡಿದ್ದರು. ಇಂತಹ ಉದಾರವಾದಿ ನಿಲುವುಗಳ ಕಾರಣದಿಂದ ಸರ್ಕಾರದ ಜೊತೆಗಿನ ಸಹಭಾಗಿತ್ವದ ಕಾರ್ಯಕ್ರಮಗಳು ಅಷ್ಟು ಕಾಲ ಮುಂದುವರಿದವು.

ಸುಮಾರು 2000ನೇ ಇಸವಿಯ ಹೊತ್ತಿಗೆ, ಏಕಲವ್ಯದ ಸಾಮಾಜಿಕ ವಿಜ್ಞಾನ ಪಠ್ಯಪುಸ್ತಕಗಳನ್ನು ಇಂದೋರ್‌ನ ಕೆಲವು ಉನ್ನತ ವರ್ಗದ ಶಾಲೆಗಳು ಅಳವಡಿಸಿಕೊಂಡವು. ಆರಂಭದಲ್ಲಿ ಶಿಕ್ಷಕರು ಒಂದಷ್ಟು ಹಿಂಜರಿಕೆ ತೋರಿದರು. ಆದರೆ ನಂತರ ತರಗತಿಗಳನ್ನು ಆನಂದಿಸಲು ಪ್ರಾರಂಭಿಸಿದರು. ಮುಂದಿನ ಶೈಕ್ಷಣಿಕ ಅವಧಿಯಲ್ಲಿ, ಈ ಶಾಲೆಯ ಪ್ರಾಂಶುಪಾಲರು ಬದಲಾದರು. ಹೊಸ ಮುಖ್ಯಸ್ಥರು, ಈ ಉಪಕ್ರಮದ ಕುರಿತು ಅಭಿಪ್ರಾಯ ಕೇಳಲು ಶಿಕ್ಷಕರನ್ನೆಲ್ಲ ಕರೆದರು. ಶಿಕ್ಷಕರು ಪ್ರಾಮಾಣಿಕರಾಗಿದ್ದರು ಹಾಗು ಈ ಕಾರ್ಯಕ್ರಮ ಮುಂದುವರಿಯಬೇಕೆಂದು ತಮ್ಮ ಬೆಂಬಲ ವ್ಯಕ್ತಪಡಿಸಿದರು. ಆದರೆ ಪ್ರಾಂಶುಪಾಲರು ಈ ಕಾರ್ಯಕ್ರಮವನ್ನು ನಿಲ್ಲಿಸಲು ಬೇಕಾಗುವ 'ಪುರಾವೆ' ಹುಡುಕುತ್ತಿದ್ದಾರೆ ಎಂದು ಉಪಪ್ರಾಂಶುಪಾಲರು ಮೆಲ್ಲನೆ ಶಿಕ್ಷಕರಿಗೆ ತಿಳಿಸಿದರು. ಆದರೆ ಮುಂದಿನ ಬಾರಿ ಇದೇ ಪ್ರಶ್ನೆಯನ್ನು ಕೇಳಿದಾಗ, ತಮ್ಮ ಕೆಲಸವನ್ನು ಉಳಿಸಿಕೊಳ್ಳುವುದಕ್ಕಾಗಿ, ಹಿಂದಿನ ಬದ್ಧತೆಯನ್ನು ತೋರುವುದಿಲ್ಲ ಎಂದು ಶಿಕ್ಷಕರು ನಮಗೆ ಹೇಳಿದರು. ಶಿಕ್ಷಕರಿಗೆ ತಮ್ಮ ಕೆಲಸದಲ್ಲಿ ಪ್ರಾಮಾಣಿಕತೆ ಬೇಕಿರುವುದರಿಂದ ಹಾಗು ವಿಮರ್ಶಾತ್ಮಕ ದೃಷ್ಟಿಕೋನದ ಇಂತಹ ಪಠ್ಯಪುಸ್ತಕಗಳು ಪಾಶ್ಚಾತ್ಯ ಮಾರ್ಗವನ್ನು ಹೊಂದಿದ್ದು ನಮ್ಮ ದೇಶಕ್ಕೆ ಅಪ್ರಸ್ತುತವಾಗಿವೆ ಎಂಬ ಅಭಿಪ್ರಾಯಕ್ಕೆ ನಾಯಕತ್ವವು ಜೋತುಬಿದ್ದ ಕಾರಣ ಈ ಕಾರ್ಯಕ್ರಮವನ್ನು ನಿಲ್ಲಿಸಲಾಯಿತು.

**ವಿಮರ್ಶಾತ್ಮಕ ಪೌರತ್ವ ವಿಧಾನ**

ವಿಮರ್ಶಾತ್ಮಕ ಪೌರತ್ವ ವಿಧಾನವು, ನಿಮ್ಮದೇ ಆದ ಪರಿಸರದಲ್ಲಿ ಸೂಕ್ಷ್ಮ ವಿಚಾರಗಳನ್ನು ಚರ್ಚಿಸಲು ಆತ್ಮವಿಶ್ವಾಸ ಮತ್ತು ದಾರಿಯನ್ನು ಹುಡುಕಿಕೊಳ್ಳುವುದನ್ನು ಸೂಚಿಸುತ್ತದೆ. ಕೆಲವು ಉದಾಹರಣೆಗಳನ್ನು ಗಮನಿಸಿ:

ಹೆಚ್ಚಿನ ಹೊಸ ಅಧ್ಯಾಯಗಳು, ವಿದ್ಯಾರ್ಥಿಗಳು ತಮ್ಮದೇ ಆದ ಸಾಮಾಜಿಕ ಪರಿಸ್ಥಿತಿಯಲ್ಲಿ ಗಳಿಸುವ ಅಭಿಪ್ರಾಯಗಳೊಡನೆ ತೊಡಗಿಸಿಕೊಳ್ಳುವುದಕ್ಕೆ ಮಾತ್ರವಲ್ಲದೆ ಅವುಗಳನ್ನು ಮುನ್ನೆಲೆಗೆ ತರುವುದಕ್ಕೆ ಪ್ರಶಸ್ತವಾಗಿದೆ. ಆದರೆ ವಿವಿಧ ದೃಷ್ಟಿಕೋನಗಳು ಮತ್ತು ಸಂಘರ್ಷಗಳ ಜೊತೆ ತೊಡಗಿಸಿಕೊಳ್ಳುವ ಸಾಮರ್ಥ್ಯವು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಇಂದೋರ್ ನಗರದ ಉನ್ನತ ವರ್ಗದ ಶಾಲೆಯೊಂದರ ಶಿಕ್ಷಕಿಯೊಬ್ಬರು ಜಾತಿ ಆಧಾರಿತ ಮೀಸಲಾತಿಯ ಕುರಿತು ಚರ್ಚಿಸಲು ಹಿಂಜರಿಯುತ್ತಿದ್ದರು. ಆದರೆ ಮಹಿಳೆಯರಿಗೆ ಮೀಸಲಾತಿ ನೀಡುವ ಕುರಿತು ಉತ್ಸಾಹದಿಂದ ಮಾತನಾಡುತ್ತಿದ್ದರು. ಅಧ್ಯಾಯವೊಂದರಲ್ಲಿ ಇದ್ದ ಪ್ರಶ್ನೆಯಿಂದ ಪ್ರೇರಣೆ ಪಡೆದು, ಅವರು ಅನುಭವಿಸಿದ್ದ ಕಥೆಗಳನ್ನು ಹೇಳಲು ಪ್ರಾರಂಭಿಸಿದರು ಹಾಗು ಅನೇಕ ಮಹಿಳೆಯರಿಗೆ ಮೀಸಲಾತಿಯು ಹೇಗೆ ಯಶಸ್ಸಿನ ಮೆಟ್ಟಿಲಾಯಿತು ಎಂಬುದನ್ನು ನಿರೂಪಿಸಿದರು. ಆದರೆ ನಿರೀಕ್ಷೆಯಂತೆಯೇ, ಅವರು ಮನೆಯ ಕೆಲಸ ಮತ್ತು ಕಚೇರಿ ಕೆಲಸ ಎರಡನ್ನೂ ಮಾಡಬೇಕಾಗಿತ್ತು. ಇದನ್ನು ಕೆಲವು ಬಾಲಕರು ಪ್ರಶ್ನಿಸಿದರು. ತಕ್ಷಣವೇ ತರಗತಿಯಲ್ಲಿದ್ದ ಬಾಲಕಿಯರ ಕಡೆಯಿಂದ ಸಾಕ್ಷ್ಯಾಧಾರಗಳ ಸುರಿಮಳೆಯೇ ಹರಿಯಿತು. ತಮ್ಮದೇ ಕುಟುಂಬಗಳ ಕಥೆಯನ್ನು ಇವರು ಹೇಳಲು ಪ್ರಾರಂಭಿಸಿದರು. ಈ ಸ್ವಯಂಪ್ರೇರಿತ ಚರ್ಚೆಯನ್ನು ಕೊನೆಯ ತನಕ ಶಿಕ್ಷಕಿ ನಿರ್ದೇಶಿಸಿದ ರೀತಿಯು ಅದ್ಭುತವಾಗಿತ್ತು.

ಒಚಿದು ದಿನ ನನಗೆ ಓರ್ವ ಯುವ ಸ್ನೇಹಿತೆಯಿಂದ ದೂರವಾಣಿ ಕರೆ ಬಂತು. ಶಿಕ್ಷಕರ ಸಭೆಯಲ್ಲಿ ಒಬ್ಬರು ಕೇಳಿದ ಪ್ರಶ್ನೆಯಿಂದ ಈ ಶಿಕ್ಷಕಿ ದಿಗಿಲುಗೊಂಡಿದ್ದರು. 'ಹಿಂದೂ ರಾಷ್ಟ್ರವಾದರೆ ನಮಗೆ ಒಳ್ಳೆಯದು ತಾನೆ? ಇದು ಪ್ರತಿನಿತ್ಯದ ಹೋರಾಟವನ್ನು ಕೊನೆಗೊಳಿಸುತ್ತದೆ' ಎಂದು ಅವರು ನೇರವಾಗಿ ಆಕೆಯನ್ನು ಕೇಳಿಬಿಟ್ಟಿದ್ದರು. ಆ ಶಿಕ್ಷಕಿಯ ಮೊದಲ ಪ್ರತಿಕ್ರಿಯೆಯು, 'ಅವರು ಇದನ್ನು ಹೇಗೆ ಕೇಳುತ್ತಾರೆ?' ಇದು ನಮ್ಮ ಸಂವಿಧಾನಕ್ಕೆ ವಿರುದ್ಧವಾಗಿದೆ.' ಆದರೆ ಆ ಪ್ರಶ್ನೆಯು ಸಂವಿಧಾನಕ್ಕಿಂತಲೂ ನಾವು ಯಾವ ರೀತಿಯ ಸಮಾಜವನ್ನು ರೂಪಿಸುತ್ತೇವೆ ಎಂಬುದಕ್ಕೆ ಸಂಬಂಧಿಸಿತ್ತು ಎಂಬ ವಿಚಾರವನ್ನು ಅರಿತುಕೊಳ್ಳಲು ಆಕೆಗೆ ಸಾಕಷ್ಟು ಸಮಯ ಬೇಕಾಯಿತು. ನಾವಿಂದು ಮತ ಧಾರ್ಮಿಕ ನಿಲುವನ್ನು ಏಕೆ ತಿರಸ್ಕರಿಸಬೇಕು? ನಮ್ಮ ಸಂವಿಧಾನವು ಜೀವಂತ ದಾಖಲೆಯಾಗಿದ್ದು, ಇದನ್ನು

ಎಚ್ಚರಿಕೆಯಿಂದ ಓದಿದರೆ ಇದರ ಮೌಲ್ಯಗಳಲ್ಲಿ ನಾವು ಹೊಂದಿರುವ ನಂಬಿಕೆಯನ್ನು ಮತ್ತೆ ದೃಢೀಕರಿಸಲು ನೆರವಾಗುತ್ತದೆ. ವಕೀಲರು ಮತ್ತು ನ್ಯಾಯಾಲಯಗಳು ಮಾತ್ರವಲ್ಲದೆ ಬೇರೆ ಎಲ್ಲಾ ರೀತಿಯ ಸಂವಾದಗಳಲ್ಲಿ ಇದನ್ನು ಕಾರ್ಯರೂಪಕ್ಕೆ ತರಬೇಕು.

ಇದೇ ರೀತಿ, ಓಂಪ್ರಕಾಶ್ ವಾಲ್ಮೀಕಿಯವರ 'ಝೂತನ್' ಆತ್ಮಚರಿತ್ರೆಯ ಸಾಲುಗಳನ್ನು ಚರ್ಚಿಸುತ್ತಿದ್ದಾಗ ಶಿಕ್ಷಕಿಯೊಬ್ಬರು, ತನ್ನ ತರಗತಿಯಲ್ಲಿ ಎದುರಿಸಿದ ಸೂಕ್ಷ್ಮ ಸಂದರ್ಭವೊಂದನ್ನು ವಿವರಿಸಿದರು. ಇದು ಆರನೇ ತರಗತಿಗೆ ಇದ್ದ ಎನ್.ಸಿ.ಇ.ಆರ್.ಟಿಯ ಸಾಮಾಜಿಕ ಮತ್ತು ರಾಜಕೀಯ ಜೀವನ ಪಠ್ಯಪುಸ್ತಕದ ಭಾಗವಾಗಿತ್ತು. ಕೆಲವು ವಿದ್ಯಾರ್ಥಿಗಳು ದಲಿತ ವಿದ್ಯಾರ್ಥಿಗಳನ್ನು ಗುರಿಯಾಗಿಸಿದರು. ವಾಲ್ಮೀಕಿಯವರು ತನ್ನ ಶಾಲೆಯಲ್ಲಿ ಎದುರಿಸಿದ್ದ ಅನುಭವವನ್ನು ನಕಲು ಮಾಡಿ, 'ಕಸ ಗುಡಿಸು' ಎಂದು ಅವರನ್ನು ಅಣಕಿಸಿದರು. ಶಿಕ್ಷಕಿಯು ದಿಗಿಲುಗೊಂಡರು ಹಾಗು ಅವರ ವರ್ತನೆಯಿಂದ ಇಡೀ ಸಂವಾದವೇ ಹಳಿ ತಪ್ಪಿತು. ನಂತರ ಅವರು, ತನ್ನ ಹಿನ್ನೆಲೆಯನ್ನೇ ಮುಂದಿಟ್ಟು, ಚಾಲ್ತಿಯಲ್ಲಿದ್ದ ಜಾತಿ ಪದ್ಧತಿಯನ್ನು ಚರ್ಚಿಸಲು ಸಾಕಷ್ಟು ಸಮಯವನ್ನು ಮೀಸಲಿಟ್ಟರು. ತನ್ನದೇ ಆದ ಅನುಭವಗಳ ಮೂಲಕ ಹಾಗು 'ಕೆಲವರಿಗೆ ಮನೆಯಲ್ಲಿ ಪ್ರತ್ಯೇಕ ಲೋಟಗಳನ್ನು ಇಡಲಾಗಿದೆಯೇ? ಕೆಲವರಿಗೆ ಅಂಗಳದ ತನಕ ಮಾತ್ರವೇ ಪ್ರವೇಶವಿದೆಯೇ?' ಮುಂತಾದ ಪ್ರಶ್ನೆಗಳನ್ನು ಕೇಳುವ ಮೂಲಕ ಚರ್ಚೆಯನ್ನು ಮುಂದುವರಿಸಿದರು. ಅವರು ಒಂದು ದೀರ್ಘ ಪಟ್ಟಿಯನ್ನು ತಯಾರು ಮಾಡಿದರು ಮತ್ತು ಎಲ್ಲರಿಗೂ ಸಮಾನ ಗೌರವ ಎನ್ನುವ ಪರಿಕಲ್ಪನೆಯನ್ನು ಅವು ಹೇಗೆ ಉಲ್ಲಂಘಿಸುತ್ತವೆ ಎಂಬುದನ್ನು ಚರ್ಚಿಸಿದರು. ವಿದ್ಯಾರ್ಥಿಗಳ ನಡುವೆ ಯಾವುದೇ ವೈಯಕ್ತಿಕ ದ್ವೇಷವನ್ನು ಹುಟ್ಟು ಹಾಕದೆ ಇದನ್ನೆಲ್ಲ ಮಾಡುವುದು ಆಕೆಗೆ ಸಾಧ್ಯವಾಯಿತು.

ನಮ್ಮ ನಂಬಿಕೆಯಾಗಿ ಪರಿಗಣಿಸುವ (ನಿಷ್ಕ್ರಿಯ ಅಥವಾ ಸಕ್ರಿಯ) ಪೌರತ್ವದ ಗುಣಸ್ವಭಾವವು ಸದ್ಯದ ಭವಿಷ್ಯದಲ್ಲಿ ಪ್ರಮುಖ ಪಾತ್ರವಹಿಸಲಿದೆ. ಸಮಕಾಲೀನ ಈ ಸಂದರ್ಭದಲ್ಲಿ, ಸಿ.ಎ.ಎ ಅಥವಾ 'ಲವ್–ಜಿಹಾದ್'ನಂತಹ ವಿಚಾರಗಳ ಮೂಲಕ ಪ್ರಸ್ತುತ ಶಾಸನಗಳು ಸಮಾಜದಲ್ಲಿ ಒಡಕನ್ನು ಹೆಚ್ಚಿಸುತ್ತಿರುವ ಸಂದರ್ಭದಲ್ಲಿ, ಸರ್ಕಾರವು ನಿಷ್ಕ್ರಿಯ ಪೌರತ್ವ ನಂಬಿಕೆಯತ್ತ ವಾಲುವುದನ್ನು ನಾವು ನೋಡಬಹುದು. ಕರ್ತವ್ಯಗಳು, ಶಿಸ್ತು, ಪ್ರಾಮಾಣಿಕತೆಯ ಮೇಲೆ ಹೆಚ್ಚು ಒತ್ತು ನೀಡಲಾಗುತ್ತದೆ. ಆದರೆ ಮಾನವ ಹಕ್ಕುಗಳು, ಸಾಮಾಜಿಕ ಕಲ್ಯಾಣ, ಸಮಾಜದಲ್ಲಿ ಉಂಟಾಗುವ ತುಳಿತ ಮತ್ತು ಶೋಷಣೆ ಮುಂತಾದವುಗಳನ್ನು ಸಂದೇಹದಿಂದ ನೋಡಲಾಗುತ್ತದೆ. ಒಟ್ಟಾರೆ, ಪಠ್ಯಕ್ರಮ ಸುಧಾರಣೆಗೆ ಮುಕ್ತ ಅವಕಾಶ ಸಿಗುವುದು ತೀರಾ ಕಡಿಮೆ.

ಆದರೂ, ಈ ನಿರಾಶಾದಾಯಕ ಸನ್ನಿವೇಶದಲ್ಲಿಯೂ, ಸ್ವಾಗತಾರ್ಹ ಪಠ್ಯಕ್ರಮ ಮಧ್ಯಪ್ರವೇಶಕ್ಕೆ ನಾವು ಅನಿರೀಕ್ಷಿತ ಅವಕಾಶಗಳನ್ನು ಪಡೆಯಲೂಬಹುದು. ಇದೆಲ್ಲದರ ನಡುವೆ ನಾವು ವಿಮರ್ಶಾತ್ಮಕ ಪೌರತ್ವದ ಬಗೆಗಿನ ನಮ್ಮ ನಂಬಿಕೆಯನ್ನು ಎತ್ತಿ ಹಿಡಿಯಬೇಕಾದರೆ, ಇನ್ನೂ ಹೆಚ್ಚಿನ ಸೃಜನಾತ್ಮಕ ಮತ್ತು ಹುರುಪಿನ ವಿಧಾನದಲ್ಲಿ ಪಠ್ಯೇತರ ಅವಕಾಶಗಳತ್ತ ಸಾಗಬೇಕಿದೆ. ಹೀಗಾಗಿ, ಶಿಕ್ಷಕರ ಕ್ರಮಗಳಿಂದ ನಾವೇನು ಕಲಿಯಬಹುದು ಎಂಬುದನ್ನು ಈ ಕೆಳಗೆ ಚರ್ಚಿಸಲಾಗಿದೆ.

**ಕ್ರಿಯೆಗಳು ಶಬ್ದಗಳಿಗಿಂತಲೂ ಜೋರಾಗಿ ಮಾತನಾಡುತ್ತವೆ**

ಇದು, ಈ ಹಿನ್ನೆಲೆಯಲ್ಲಿ ಅವರದೇ ಸನ್ನಿವೇಶದಲ್ಲಿ ಶಿಕ್ಷಕರ ಉಪಕ್ರಮಗಳನ್ನು ಗುರುತಿಸಿ ಮತ್ತು ಉತ್ತೇಜಿಸುವ ಅಗತ್ಯವಿದೆ. ಭಾರತದಲ್ಲಿ, ಜಾತಿ ಅಸಮಾನತೆ ಮತ್ತು ಸಾಮ್ರಾಜ್ಯಶಾಹಿ ಹಾಗು ಸರ್ವಾಧಿಕಾರಿ ಆಡಳಿತದ ನೆಲೆಗಟ್ಟಿನಲ್ಲಿ ರೂಪುಗೊಂಡ ಸಮಾಜದ ಮನೋಧರ್ಮದ ವಿರುದ್ಧವಾಗಿ ಪ್ರಜಾತಾಂತ್ರಿಕ ವ್ಯವಸ್ಥೆಯನ್ನೂ ಜಾರಿಗೆ ತರಲಾಯಿತು. ಸ್ವಾತಂತ್ರ್ಯಾ ನಂತರದ ಆರಂಭಿಕ ಪರಿಸ್ಥಿತಿಯು ಅಸಂಭವನೀಯವಾಗಿದ್ದಲ್ಲದೆ, ಸಾಂಪ್ರದಾಯಿಕ ರಾಜಕೀಯ ಸಿದ್ಧಾಂತಗಳು 'ಸಮಾನವಾಗಿ ಅನುಕೂಲಕರವಲ್ಲದ (ಬಡವರು, ಅನಕ್ಷರಸ್ಥರು ಮತ್ತು ಆಶ್ಚರ್ಯಕರವಾಗಿ ವೈವಿಧ್ಯಮಯ ಪೌರ ಸಮುದಾಯದ ನಡುವೆ) ಸ್ಥಿತಿ' ಎಂದು ಕರೆಯುವ ಸನ್ನಿವೇಶದಲ್ಲಿ ಪ್ರಜಾಸತ್ತೆಯು ಉಳಿದುಕೊಳ್ಳಬೇಕಿರುತ್ತದೆ. ಇದು ಉಳಿದುಕೊಂಡಿರುವುದು ಮಾತ್ರವಲ್ಲದೆ ಭಾರತೀಯ ಸಮಾಜವನ್ನು ಅನಿರೀಕ್ಷಿತ ರೀತಿಯಲ್ಲಿ ಪುನಶ್ಚೇತನಗೊಳಿಸುವಲ್ಲಿ ಇದು ಯಶಸ್ವಿಯಾಯಿತು. ಆರಂಭದಲ್ಲಿ, ಕಾನೂನುಬದ್ಧ ರಾಷ್ಟ್ರೀಯವಾದಿ ಗಣ್ಯರು (legalistic nationalist elite) ಸರ್ಕಾರದ ರೂಪದಲ್ಲಿ ನಾಜೂಕಾಗಿ ಪರಿಚಯಿಸಿದ ಪ್ರಜಾತಾಂತ್ರಿಕತೆಯು ಸಮಾಜದ ಸಿದ್ಧಾಂತವಾಗಿ ವಿಸ್ತರಣೆಗೊಂಡು ಗಾಢವಾಗಿ ಬೇರುಬಿಟ್ಟಿದ್ದು, ಭಾರತೀಯರಿಗೆ ಲಭ್ಯವಾಗುವ ಸಾಧ್ಯತೆಗಳನ್ನು ರೂಪಾಂತರಿಸಿದೆ. **'ಅವರು ಪಠ್ಯಪುಸ್ತಕಗಳಿಂದ ಕಲಿಯದೆಯೇ, ಸಮಗ್ರ ಅಭ್ಯಾಸದಿಂದ ಇದನ್ನು ಆಲಿಂಗಿಸಿ–ಕೊಂಡಿದ್ದಾರೆ. ಆದರೂ ಭಾರತೀಯ ಪ್ರಜಾತಾಂತ್ರಿಕತೆಯ ಅಭೂತಪೂರ್ವ ಯಶಸ್ಸು ಇದರ ಮುಂದುವರಿದ ಸಾಂಸ್ಥಿಕ ಉಳಿವಿಗೂ ಸವಾಲೊಡ್ಡುತ್ತಿದೆ.'** (ದಿ ಐಡಿಯಾ ಆಫ್ ಇಂಡಿಯಾ, ಸುನಿಲ್ ಖಿಲ್ನಾನಿ) 'ಪೌರತ್ವ ಶಿಕ್ಷಣವು ಒಂದು ಜೀವಂತ ಉದಾಹರಣೆ–ಯಾಗಬೇಕು ಮತ್ತು ತನ್ನದೇ ಆದ ಸನ್ನಿವೇಶದಲ್ಲಿ ಪ್ರಜಾ–ತಾಂತ್ರಿಕತೆಯ ಜೊತೆಗಿನ ತೊಡಗಿಸಿಕೊಳ್ಳುವಿಕೆ ಎನಿಸಿ–ಕೊಳ್ಳಬೇಕು.' ಸುನಿಲ್ ಖಿಲ್ನಾನಿ ಅವರು ತನ್ನ ಪುಸ್ತಕದಲ್ಲಿ ಹೇಳಿರುವುದನ್ನು ಇದು ಅನುಮೋದಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಇದರ ಉಳಿವಿನ ಕುರಿತು ಸವಾಲು ಎದುರಾಗಿದೆ. ಭವಿಷ್ಯಕ್ಕೆ ಯಾವುದು ಕಾರ್ಯಸಿಂಧು ಆಗಬಹುದು ಎಂದು ನಾನು ಚರ್ಚಿಸುವ ಮೊದಲು, ಶಿಕ್ಷಕರು ಹೇಗೆ ಅನೇಕ ಚಿಂತನಶೀಲ ಮತ್ತು ಸೃಜನಾತ್ಮಕ ವಿಧಾನಗಳಲ್ಲಿ ಪ್ರಜಾತಾಂತ್ರಿಕತೆಯನ್ನು ಮೈಗೂಡಿಸಿ–ಕೊಂಡಿದ್ದಾರೆ ಎಂಬುದನ್ನು ಈ ಕೆಳಗೆ ವಿವರಿಸುತ್ತೇನೆ. ನಮ್ಮ ಸಮಾಜದಲ್ಲಿ ಪ್ರಜಾತಾಂತ್ರಿಕತೆಯನ್ನು ಗಟ್ಟಿಗೊಳಿಸಲು ಇಂತಹ ಕ್ರಮಗಳ ಮೂಲಕ ಮಾಡಿದ ಕೊಡುಗೆಯು ಮುಖ್ಯವಾಗುತ್ತದೆ. ಶಿಕ್ಷಕರ ಜೀವಂತ ಅನುಭವಗಳನ್ನು ನಾವು ನೋಡಿದರೆ, ನಮ್ಮದೇ ಆದ ಪ್ರದೇಶಗಳಲ್ಲಿ ಇಂತಹ ಅನೇಕ ಅನುಭವಗಳನ್ನು ಕಾಣುವುದು ಖಂಡಿತ. ನಾವು ಇವುಗಳ ಪಾಲಿಗೆ ಜಾಣ ಕುರುಡು ಪ್ರದರ್ಶಿಸಿದ್ದೇವೆ ಹಾಗು ಅವುಗಳ ಮೌಲ್ಯ ಮತ್ತು ಸಾಮರ್ಥ್ಯವನ್ನು ಗುರುತಿಸಿಲ್ಲ ಅಷ್ಟೆ. ತನಗೆ ಕೆಲಸ ದೊರೆತ ಹಳ್ಳಿಯಲ್ಲೇ ಎರಡು ದಶಕಗಳ ಕಾಲ ಜೀವನ ನಡೆಸುತ್ತಿದ್ದ ಹಾಗು ಸಮಾಜ ವಿಜ್ಞಾನ ಗುಂಪಿನ ಭಾಗವೆನಿಸಿದ್ದ ಒಬ್ಬ ದಲಿತ ಶಿಕ್ಷಕರ ಪರಿಚಯ ನನಗಿದೆ. ಅವರಿಗೆ ದಲಿತ ವಿಚಾರಗಳ ಕುರಿತು ಗಾಢವಾದ ಆಸಕ್ತಿ ಇತ್ತು. ಆದರೆ ತರಗತಿ ಕೊಠಡಿಯಲ್ಲಾಗಲೀ ಅಥವಾ ನಮ್ಮೊಂದಿಗಾಗಲೀ ಅವರು ಈ ಕುರಿತು ಚರ್ಚಿಸುತ್ತಿರಲಿಲ್ಲ. ದಲಿತ ಮಕ್ಕಳ ಶಿಕ್ಷಣವನ್ನು ಬೆಂಬಲಿಸುವುದಕ್ಕಾಗಿ ಅವರು ಸಾಂಕೇತಿಕ ವಿಧಾನಗಳು ಮತ್ತು ನಾಜೂಕಿನ ದಾರಿಗಳನ್ನು ಬಳಸಿಕೊಳ್ಳುತ್ತಿದ್ದರು ಎಂಬುದು ನನಗೆ ಸಾಕಷ್ಟು ಸಮಯದ ನಂತರ ತಿಳಿದುಬಂದಿತು. ಒಂದು ಘಟನೆ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತುಬಿಟ್ಟಿದೆ. ಪೋಷಕರೊಬ್ಬರು ಅವರ ಮಗುವಿನ ವರ್ಗಾವಣೆ ಪತ್ರಕ್ಕಾಗಿ ಈ ಶಿಕ್ಷಕರನ್ನು ಸಂಪರ್ಕಿಸಿದರು.

ಆದರೆ ಅವರು ಶಾಲೆಯ ಕಟ್ಟಡದೊಳಗೆ ಪ್ರವೇಶಿಸಿರಲಿಲ್ಲ. ಬದಲಾಗಿ ಅಂಗಳದಿಂದಲೇ ಮಾತನಾಡಲು ಇಷ್ಟಪಟ್ಟರು. ಶಿಕ್ಷಕರು ಇದನ್ನು ಅರ್ಥಮಾಡಿಕೊಂಡರು ಹಾಗು ತರಗತಿ ಕೊಠಡಿಯಿಂದ ಅವರು ಹೊರಬಂದರು. ಅವರನ್ನು ಒಳಬರುವಂತೆ ಮಾಡಿ, ಆ ತಂದೆಗೆ ಇರಿಸುಮುರುಸು ಆದರೂ, ಅವರನ್ನು ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಮಾಡಿದರು. ವರ್ಗಾವಣೆ ಪತ್ರಕ್ಕಾಗಿ ಕಡತಗಳಲ್ಲಿ ಹುಡುಕುತ್ತಿರುವಾಗಲೇ ಅವರ ಜೊತೆ ಅನೌಪಚಾರಿಕ ಚರ್ಚೆಯನ್ನು ಮುಂದುವರಿಸಿದರು. ಇದೇ ವೇಳೆ, ಇಡೀ ತರಗತಿಯು ಈ ಘಟನೆಯನ್ನು ವೀಕ್ಷಿಸಿತು ಹಾಗು ಇದರ ಅರ್ಥವನ್ನು ಗ್ರಹಿಸಿಕೊಂಡಿತು.

ಇಚಿತಹ ಅನೇಕ ವಿಧಾನಗಳನ್ನು ಅವರು ಅನುಸರಿಸುತ್ತಿದ್ದರು. ಅವರು ಅತ್ಯಂತ ಬಡಕುಟುಂಬದ ಒಬ್ಬ ಹೆಣ್ಣುಮಗಳು ಶಿಕ್ಷಣ ಮತ್ತು ವಸತಿನಿಲಯದ ಶುಲ್ಕವನ್ನು ಭರಿಸಿದರು ಮತ್ತು ಅತ್ಯಂತ ಸವಾಲಿನ ಪರಿಸ್ಥಿತಿಯ ನಡುವೆ ಆಕೆ ವ್ಯಾಸಂಗ ಮುಗಿಸಿ ಶಿಕ್ಷಕಿಯಾದಳು. ಬೆಳೆಯುತ್ತಿದ್ದ ಸಾರಿಗೆ ಕ್ಷೇತ್ರದಲ್ಲಿ ಕೆಲಸ ಪಡೆಯುವಂತಾಗಲು, ಬಡ ಕುಟುಂಬಗಳಿಂದ ಬಂದ ಅನೇಕ ಹುಡುಗರು ಎಂಟನೇ ತರಗತಿಯ ಪರೀಕ್ಷೆಯನ್ನು ಬರೆಯುವಂತೆ ಅವರು ಉತ್ತೇಜಿಸಿದರು. ಶಾಲೆಯಲ್ಲಿ ತನ್ನ ಸಹೋದ್ಯೋಗಿಗಳು ನೀಡಿದ ಮೌನ ಬೆಂಬಲದ (tacit support) ಕಾರಣ ಇದೆಲ್ಲ ಸಾಧ್ಯವಾಯಿತು ಎಂದು ಅವರು ಹಲವಾರು ವರ್ಷಗಳ ನಂತರ ಅವರು ವಿವರಿಸಿದರು. ಆ ಮೌನ–ಸಹೋದ್ಯೋಗಿ ವರ್ಗವು ಸಾರ್ವಜನಿಕ ಚರ್ಚೆಯನ್ನು ನಡೆಸದೆ ಪ್ರಚಾರದಿಂದ ದೂರ ಉಳಿಯಿತು. ಆದರೆ ಇವುಗಳ ಪರಿಣಾಮ ಮಾತ್ರ ಗಣನೀಯವಾಗಿತ್ತು.

ಸಮೀಪದ ಹಳ್ಳಿಯ ಇನ್ನೊಬ್ಬ ದಲಿತ ಶಿಕ್ಷಕರೊಬ್ಬರು ಆ ಹಳ್ಳಿಯ ವಿದ್ಯಾರ್ಥಿಗಳಿಗಾಗಿ ಟ್ಯೂಷನ್ ಕೇಂದ್ರವನ್ನು ಸ್ಥಾಪಿಸಿದರು. ಸರ್ಕಾರಿ ಪ್ರಾಯೋಜಕತ್ವದ ಶಿಕ್ಷಣ ಮತ್ತು ಆರೈಕೆಯನ್ನು ಒದಗಿಸುವ ಜವಾಹರ್ ನವೋದಯ ವಿದ್ಯಾಲಯದ ಪ್ರವೇಶ ಪರೀಕ್ಷೆಯನ್ನು ಬರೆಯಲು ಹಳ್ಳಿಯ ಮಕ್ಕಳು ಸಾಮರ್ಥ್ಯ ಗಳಿಸಿಕೊಳ್ಳಬೇಕು ಎನ್ನುವ ಉದ್ದೇಶದಿಂದ ಇವರು ಈ ಟ್ಯೂಷನ್ ಕೇಂದ್ರವನ್ನು ತೆರೆದಿದ್ದರು. ಗ್ರಾಮೀಣ ಸಮಾಜದ ಎಲ್ಲಾ ಜಾತಿ ವರ್ಗಗಳು ಹಾಜರಾಗುವ ಕೋಚಿಂಗ್ ತರಗತಿಯನ್ನು ದಲಿತ ಶಿಕ್ಷಕರೊಬ್ಬರು ನಡೆಸುವುದು ಕಷ್ಟಕರವಾದರೂ, ತನ್ನ ಕೆಲಸದಲ್ಲಿ ಇವರು ಯಶಸ್ವಿಯಾದರು. ಇಂತಹ ಅನುಭವಗಳಿಂದಲೇ, (ಗ್ರಾಮೀಣ ಪರಿಸರದಲ್ಲಿ ಇದು ಅಸಾಧ್ಯ ಎನಿಸಿದರೂ) ಶಾಲಾ ಪರಿಸರದಲ್ಲಿ ಎಲ್ಲರೂ ಸಮಾನ ಎನ್ನುವ ಕಲ್ಪನೆಯನ್ನು ವಿದ್ಯಾರ್ಥಿಗಳು ಮೈಗೂಡಿಸಿಕೊಳ್ಳುತ್ತಾರೆ.

ತಮ್ಮ ಮಾಧ್ಯಮಿಕ ಶಾಲೆಯೊಂದರದಲ್ಲಿ ಹೆಣ್ಣುಮಕ್ಕಳ ಶಿಕ್ಷಣವನ್ನು ಉತ್ತೇಜಿಸುವುದಕ್ಕಾಗಿ, ಆ ಶಾಲೆಯ ಶಿಕ್ಷಕರ ತಂಡವೊಂದು ಸರಳ ಸೂತ್ರವನ್ನು ರೂಪಿಸಿತು. ಸರ್ಕಾರದ ಆಪರೇಶನ್ ಬ್ಲ್ಯಾಕ್–ಬೋರ್ಡ್ ಯೋಜನೆಯಡಿ (1986) ಮಹಿಳೆಯರನ್ನು ಪ್ರಾಥಮಿಕ ಶಾಲಾ ಶಿಕ್ಷಕಿಯರನ್ನಾಗಿ ನೇಮಿಸಲಾಯಿತು. ಇದು ಧನಾತ್ಮಕ ಫಲಿತಾಂಶಗಳನ್ನು ತಂದಿತು. ಹೆಚ್ಚಿನ ಬಾಲಕಿಯರು ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸಿ ಮಾಧ್ಯಮಿಕ ಶಾಲೆಗೆ (ಕುಟುಂಬದ ಒತ್ತಡ ಮತ್ತು ಭದ್ರತೆಗೆ ಬಗ್ಗೆ ಸಂಬಂಧಿಸಿದ ವಿಚಾರಗಳು ಒತ್ತಡ ಹಾಕುವ ಕಾಲಘಟ್ಟವಿದು) ಸೇರಿಕೊಂಡರು. ಸ್ಥಳೀಯ ಸಮುದಾಯದಲ್ಲಿ ಭದ್ರವಾಗಿ ಬೇರೂರಿದ್ದ ಶಿಕ್ಷಕರ ಈ ತಂಡವು, ಪೋಷಕರಿಗೆ ಹೆಣ್ಣು ಮಕ್ಕಳ ಭದ್ರತೆಯ ಭರವಸೆಯನ್ನು ನೀಡಿತು ಹಾಗು ಅವರು ಮಾಧ್ಯಮಿಕ ಶಾಲೆಗೆ ಹಾಜರಾಗಲು ಅನುವು ಮಾಡಿಕೊಡುವಂತೆ ಅವರನ್ನು ವಿನಂತಿಸಿತು. ಆ ಶಾಲೆಯು ಹಳ್ಳಿಯ ಹೊರವಲಯದಲ್ಲಿ ಇದ್ದುದರಿಂದ, ಪ್ರಮುಖ ಕ್ರಮವಾಗಿ ಹುಡುಗಿಯರಿಗೆ ಮೊದಲಿಗೆ ಮನೆಗೆ ಹೋಗಲು ಅವಕಾಶ ಮಾಡಿಕೊಟ್ಟು ಗುಂಪಿನಲ್ಲಿಯೇ ಅವರು ಹಳ್ಳಿಯ ಮುಖ್ಯ ಪ್ರದೇಶಕ್ಕೆ ತಲುಪಲು ಹತ್ತು ನಿಮಿಷಗಳ ಕಾಲಾವಧಿಯನ್ನು ನೀಡಲಾಯಿತು. ನಿಯಮಗಳ ಈ ಸರಳ ಹೊಂದಾಣಿಕೆಯು ಪೋಷಕರಲ್ಲಿ ಇನ್ನಷ್ಟು ಆತ್ಮವಿಶ್ವಾಸವನ್ನು ತುಂಬಿತು ಹಾಗು ದೊಡ್ಡ ಸಂಖ್ಯೆಯಲ್ಲಿ ಬಾಲಕಿಯರು ಶಾಲೆಗೆ ದಾಖಲಾದರು.

ಇನ್ನೊಂದು ದೃಷ್ಟಾಂತದಲ್ಲಿ, ಹುಡುಗಿಯರ ಪ್ರೌಢಶಾಲೆಯೊಂದರ ಪ್ರಾಂಶುಪಾಲರು ಮತ್ತು ಸಮಾಜ ವಿಜ್ಞಾನ ಶಿಕ್ಷಕರು ಶಾಲಾ ಆವರಣದ ಗೋಡೆಯನ್ನು ಕಟ್ಟುವ ಮೂಲಕ ಪರಿವರ್ತನೆಗೆ ಅಡಿಗಲ್ಲು ಹಾಕಿದರು ಹಾಗು ಪುಸ್ತಕಗಳು, ವಿದ್ಯಾರ್ಥಿವೇತನ ಮತ್ತು ಸಮವಸ್ತ್ರಗಳ ಸೂಕ್ತ ವಿತರಣೆಯ ಮೂಲಕ ಇದನ್ನು ಮುಂದುವರಿಸಿದರು. ತರಗತಿಗಳು ವೇಳಾಪಟ್ಟಿಯಂತೆಯೇ ನಡೆಯುವಂತೆ ಖಾತ್ರಿಪಡಿಸಿದರು. ಒಂದು ವರ್ಷದೊಳಗೆ ಈ ಶಾಲೆಯ ದಾಖಲಾತಿಯು ೮೦ರಿಂದ ೪೦೦ಕ್ಕೆ ತಲುಪಿತು. ಅನೇಕ ಹುಡುಗಿಯರು ಸಣ್ಣ ಖಾಸಗಿ ಶಾಲೆಗಳನ್ನು ಬಿಟ್ಟು ಈ ಸರ್ಕಾರಿ ಶಾಲೆಗೆ ಬರಲು ಪ್ರಾರಂಭಿಸಿದರು.

ಹಳ್ಳಿಯೊಂದರ ಮಾಧ್ಯಮಿಕ ಶಾಲೆಯ ಶಿಕ್ಷಕರೊಬ್ಬರು ಅರ್ಧ ಗಂಟೆ ಬೇಗನೆ ಬಂದು ಸಣ್ಣ ಕಪ್ಪುಹಲಗೆಯಲ್ಲಿ ದಿನದ ಮುಖ್ಯ ಸುದ್ದಿಗಳನ್ನು ಬರೆಯುತ್ತಿದ್ದರು. ಇದು ಚಿಕ್ಕ ವಾಕ್ಯಗಳಾಗಿದ್ದರೂ ಕೂಡ ಅನೇಕ ವಿಷಯಗಳನ್ನು ಒಳಗೊಳ್ಳುತ್ತಿತ್ತು. ಅವರು ತುಂಬಾ ಜಾಣ್ಮೆಯಿಂದ ಸ್ಥಳೀಯ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಸುದ್ದಿಗಳನ್ನು ಆರಿಸುತ್ತಿದ್ದರು. ಮಕ್ಕಳು ಇದನ್ನು ಓದುತ್ತಿದ್ದರು ಹಾಗು ಬಿಡುವಿನ ವೇಳೆಯಲ್ಲಿ ಇದನ್ನು ತಮ್ಮ ನೋಟ್ ಪುಸ್ತಕಗಳಲ್ಲಿ ಬರೆದುಕೊಳ್ಳುತ್ತಿದ್ದರು. ಟಿ.ವಿ ಪ್ರಭಾವವು ಆಗ ತಾನೇ ಹೆಚ್ಚುತ್ತಿದ್ದ ಕಾಲವದು. ಆದರೆ ಇಡೀ ಹಳ್ಳಿಯಲ್ಲಿ ಕೆಲವು ಸುದ್ದಿಪತ್ರಿಕೆಗಳನ್ನು ವಿತರಿಸಲಾಗುತ್ತಿತ್ತು. ಮಕ್ಕಳ ಪ್ರಯಾಣದ ಅನುಭವವು ಪಕ್ಕದ ಹಳ್ಳಿಗಳಿಗಷ್ಟೇ ಸೀಮಿತವಾಗಿತ್ತು. ಪಕ್ಕದ ಪೇಟೆಗಳಾದ ಉಜ್ಜಯಿನಿ ಅಥವಾ ದೇವಾಸ್‌ಗೆ ಸಹ ಅವರು ಭೇಟಿ ನೀಡಿದ್ದು ತುಂಬಾ ವಿರಳವಾಗಿತ್ತು. ಕಾಲ ಕಳೆದಂತೆ ಈ ವಿಧಾನವು ಫಲ ನೀಡಲು ಪ್ರಾರಂಭಿಸಿತು. ಮಕ್ಕಳು ತರಗತಿಯಲ್ಲಿ ಕೆಲವು ಪ್ರಶ್ನೆಗಳನ್ನು ಕೇಳಲು ಪ್ರಾರಂಭಿಸಿದರು. ಕೆಲವೊಮ್ಮೆ ಈ ಪ್ರಶ್ನೆಗಳು ಸುದ್ದಿಯಲ್ಲಿ ಉಲ್ಲೇಖಿಸಿದ ಸ್ಥಳಗಳಿಗೆ ಸಂಬಂಧಿಸಿದರೆ, ಇನ್ನು ಕೆಲವೊಮ್ಮೆ ಯಾಕೆ ಭೂಕಂಪ ಉಂಟಾಗುತ್ತದೆ ಅಥವಾ ಯುದ್ಧವು ಏಕೆ ನಡೆದಿದೆ ಮುಂತಾದ ಪ್ರಶ್ನೆಗಳು ಇರುತ್ತಿದ್ದವು. ಅವರ ನಡುವೆ ಹಾಗು ಮನೆಯಲ್ಲಿ ಸುದ್ದಿಯ ಕೆಲವೊಂದು ತುಣುಕುಗಳು ಚರ್ಚೆಯಾಗುತ್ತಿದ್ದವು. ಅವರು ಸಾಕಷ್ಟು ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು ಮತ್ತು ಆ ದಿನದ ಸುದ್ದಿಗಾಗಿ ಎದುರು ನೋಡುತ್ತಿದ್ದರು. ಇದು ಇಡೀ ಪ್ರಪಂಚವನ್ನು ನೋಡಲು ಅವರ ಪಾಲಿಗಿದ್ದ ಕಿಟಕಿಯಾಗಿತ್ತು.

ಏಕಲವ್ಯದ ಹದಿಹರೆಯದ ಆರೋಗ್ಯ ಕಾರ್ಯಕ್ರಮದ (Adolescence Health Programme) ಜೊತೆ ಕೈಜೋಡಿಸಿದ್ದ ಸರ್ಕಾರಿ ಶಾಲೆಗಳ ಶಿಕ್ಷಕಿಯರು, ಅನೇಕ ಸೂಕ್ಷ್ಮ ವಿಚಾರಗಳನ್ನು ಬಾಲಕಿಯರ ಜೊತೆ ಮುಕ್ತವಾಗಿ ಚರ್ಚಿಸಬೇಕು ಎಂಬ ಸ್ಪಷ್ಟ ಅಭಿಪ್ರಾಯವನ್ನು ಹೊಂದಿದ್ದರು. ಈ ವ್ಯಾಪ್ತಿಯಲ್ಲಿ ಒಳಗೊಂಡಿದ್ದ ಕೆಲವು ವಿಷಯಗಳೆಂದರೆ ಲಿಂಗ, ಕೌಟುಂಬಿಕ ಹಿಂಸೆ, ಮುಟ್ಟಾಗುವಿಕೆ, ಗರ್ಭನಿರೋಧಕ ವಿಧಾನಗಳು ಇತ್ಯಾದಿ. ವಿಪರೀತ ಪಿತೃಪ್ರಧಾನ ಸಮಾಜದಲ್ಲಿ ಇಂತಹ ವಿಷಯಗಳನ್ನು ಚರ್ಚಿಸುವುದು

ಸುಲಭದ ಮಾತಾಗಿರಲಿಲ್ಲ. ಆದರೆ ಈ ಮಹಿಳೆಯರು ಅಚ್ಚರಿ ಎಂಬಂತೆ ನಿರ್ಭೀತಿಯಿಂದ ವರ್ತಿಸಿದರು ಮತ್ತು ಈ ಕಾರ್ಯಾಗಾರಗಳನ್ನು ನಡೆಸಲು ಪರಸ್ಪರ ಬೆಂಬಲ ನೀಡಿದರು. ಅವರು ತಮ್ಮದೇ ಆದ ದೀರ್ಘ ಹೋರಾಟವನ್ನು ನಡೆಸಿದ ಕಾರಣದಿಂದಲೇ ಇಂಥ ವಿಚಾರಗಳಲ್ಲಿ ಇದರ ಉದ್ದೇಶ ಮತ್ತು ಅವಕಾಶವನ್ನು ಅತ್ಯುತ್ತಮವಾಗಿ ಬಳಸಿಕೊಳ್ಳುವ ಆಸಕ್ತಿ ಅವರಲ್ಲಿ ಹುಟ್ಟಿಕೊಂಡಿತು. ಅವರಲ್ಲಿ ಯಾರಿಗೂ ಶಿಕ್ಷಕಿಯಾಗಿ ಬೆಳೆಯುವುದು ಹಾಗು ಕುಟುಂಬ ಮತ್ತು ಶಾಲೆಯಲ್ಲಿ ಬೇರೆಬೇರೆ ಪಾತ್ರಗಳನ್ನು ನಿಭಾಯಿಸುವುದು ಸುಲಭದ ಮಾತಾಗಿರಲಿಲ್ಲ. ಈ ಮಹಿಳಾ ತಂಡದಲ್ಲಿದ್ದ ಬಾಂಧವ್ಯವು ಅದ್ಭುತವಾಗಿತ್ತು ಮತ್ತು ಸಾಕಷ್ಟು ವರ್ಷಗಳ ಕಾಲ ಜೀವಂತವಾಗಿ ಉಳಿಯಿತು.

ಶಾಲಾ ಶಿಕ್ಷಣದ ಹಿನ್ನೆಲೆಯಲ್ಲಿ ಹೇಳುವುದಾದರೆ, ಪಠ್ಯಕ್ರಮದ ಸಾಮಗ್ರಿಗಳ ಮೇಲೆ ಸಾಕಷ್ಟು ಗಮನ ಹರಿಸಲಾಗುತ್ತದೆಯಾದರೂ, ಶಿಕ್ಷಕರ ದೃಷ್ಟಿಕೋನ ಮತ್ತು ಜಗತ್ತನ್ನು ಪರಿಭಾವಿಸುವ ರೀತಿಗಳ ಕುರಿತು ಅವರೊಂದಿಗೆ ಯಾವ ಸಂವಾದವೂ ನಡೆಯುವುದಿಲ್ಲ. ಪ್ರಜಾಪ್ರಭುತ್ವದ ಜೀವಂತ ಸನ್ನಿವೇಶದಲ್ಲಿ, ಶಿಕ್ಷಕರ ಅನೇಕ ಅನುಭವಗಳು, ಅರ್ಥಪೂರ್ಣ ತೊಡಗಿಸಿಕೊಳ್ಳುವಿಕೆಯ ಅನೇಕ ವಿಧಾನಗಳನ್ನು ನಮಗೆ ತೋರಿಸುತ್ತವೆ. ಸಾಂವಿಧಾನಿಕ ಮೌಲ್ಯಗಳ ಜೊತೆ ತೊಡಗಿಸಿಕೊಳ್ಳಲು ಅವರು ಬಳಸಿಕೊಂಡ ಸೂಕ್ಷ್ಮ ವಿಧಾನಗಳು, ಅವರ ಸ್ವಾಯತ್ತತೆಯನ್ನು ಬಲಪಡಿಸಿದರೆ ಸೃಜನಾತ್ಮಕ ದಾರಿಗಳು ತೆರೆದುಕೊಳ್ಳುತ್ತವೆ ಎಂಬುದನ್ನು ತೋರಿಸಿಕೊಡುತ್ತವೆ. ಸ್ವಾಯತ್ತತೆಯ ಸಂಸ್ಕೃತಿಯು ಶಿಕ್ಷಕರು ಮತ್ತು ಶಾಲಾ ತಂಡ ಒದಗಿಸುವ ಬದಲಾವಣೆಯಲ್ಲಿ ಅತ್ಯಂತ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ವಿಷಯಾಧಾರಿತ ಕಾರ್ಯಾಗಾರಗಳನ್ನು ನಡೆಸುವುದು, ಶಿಕ್ಷಕರ ಸಹವರ್ತಿ ತಂಡವನ್ನು ರೂಪಿಸುವುದು, ಮತ್ತು ಪಠ್ಯಕ್ರಮವನ್ನು ಮುಗಿಸಲೇಬೇಕು ಎನ್ನುವ ಸಂಕುಚಿತ ವ್ಯಾಪ್ತಿಯೊಳಗೆ ನಿಲ್ಲದೆ ಸಡಿಲವಾದ ಪಠ್ಯಕ್ರಮದ ಕೊಂಡಿಯನ್ನು ಕಾಪಾಡುವುದು – ಮುಂತಾದ ಸಲಹೆಗಳನ್ನು ಹದಿಹರೆಯದ ಆರೋಗ್ಯ ಕಾರ್ಯಕ್ರಮದ ತಂಡವು ಮುಂದಿರಿಸಿದೆ. (ಅನು ಗುಪ್ತಾ, ಹೆಲ್ತ್ ಎಜುಕೇಶನ್: ಸಮ್ ಇನ್‌ಸೈಟ್ಸ್)

ಪೌರತ್ವ ಶಿಕ್ಷಣದಲ್ಲಿ ಕ್ರಿಯಾರೂಪಕ್ಕೆ ತರಬಹುದಾದ ಯಾವುದೇ ಒಂದು ನಿರ್ದಿಷ್ಟ ಸೂತ್ರವಿಲ್ಲ ಎನ್ನುವುದು ಸ್ಪಷ್ಟ. ಇಲ್ಲಿ ಅನೇಕ ರೀತಿಯ ಬೆಂಬಲ ಒದಗಿಸುವ ಸಂರಚನೆಗಳಿರಬಹುದು. ಆದರೆ ಸ್ಥಳೀಯ ನೆಲೆಗಟ್ಟಿನ ಹಿನ್ನೆಲೆಯಲ್ಲಿಯೇ ಸಂಘಟನಾತ್ಮಕವಾಗಿ ಕ್ರಿಯೆಯು ರೂಪುಗೊಳ್ಳಬೇಕು. ಇದರ ಮೂಲ ಉದ್ದೇಶವು, ಮಾಮೂಲಿ ಪಠ್ಯಕ್ರಮದ ಚೌಕಟ್ಟಿನ ಹೊರಗೆ ಯೋಚಿಸುವುದು ಮತ್ತು ವಿಷಯವಸ್ತುಗಳಿಗೆ ಪೂರಕವಾಗಿ ಸಮರ್ಪಕವಾದ ಚೌಕಟ್ಟನ್ನು ರೂಪಿಸುವುದಾಗಿದೆ. ಶಿಕ್ಷಕರ ಪಾಲ್ಗೊಳ್ಳುವಿಕೆಯನ್ನು ಆಧರಿಸಿ ಇದನ್ನು ರೂಪಿಸುವುದು, ಅವರ ದೃಷ್ಟಿಕೋನವನ್ನು ಚರ್ಚಿಸುವುದು ಮತ್ತು ಕ್ರಿಯೆಗಾಗಿ ಅವರ ಸ್ವಾಯತ್ತತೆಯನ್ನು ವೃದ್ಧಿಸುವುದು ತುಂಬಾ ಅಗತ್ಯ.

ಈ ಲೇಖನವನ್ನು ದೇವಾಸ್‌ನ ದಿವಂಗತ ಪನ್ನಾ ಲಾಲ್ ಚವ್ಡಾ ಅವರಿಗೆ ಅರ್ಪಿಸಲಾಗಿದೆ.

**ಉಲ್ಲೇಖಗಳು**


Anu Gupta, *Health Education: Some Insights, in School Health Services in India*, Rama Baru (ed), Sage, 2008, New Delhi.

Poonam Batra, (edited) *Social Science Learning in Schools*, Sage, 2010, New Delhi.

Alex M George, *Political Science Images in Schooling: Personal experiences of the Textbook-making Process, Contemporary Education Dialogue*, 2018, Sage.

Sunil Khilnani, *The Idea of India*, Penguin Books, India, 2012





**ಅರವಿಂದ ಸರ್ದಾನಾ** ಅವರು 'ಏಕಲವ್ಯ'ದಲ್ಲಿ ಸಮಾಜ ವಿಜ್ಞಾನ ಗುಂಪಿನ ಸದಸ್ಯರಾಗಿದ್ದಾರೆ. ಅವರು ಎನ್.ಸಿ.ಇ.ಆರ್.ಟಿ ಮತ್ತು ಇತರ ರಾಜ್ಯ ಸರ್ಕಾರಗಳ ಪಠ್ಯಪುಸ್ತಕಗಳ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರನ್ನು arvindewas@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** । ಪರಿಶೀಲನೆ: **ಲತಾ ಕೆ.ಸಿ.**

# ಪೌರತ್ವದ ಆದರ್ಶಗಳು

ಹೃದಯಕಾಂತ್ ದಿವಾನ್

ಶಿಕ್ಷಣ ಎಂಬ ಪ್ರಕ್ರಿಯೆಯು ಒಂದು ಮಗುವನ್ನು ಆತನ/ಆಕೆಯ ದೇಶದ ಭಾಗವನ್ನಾಗಿ ಮಾಡುವಲ್ಲಿ ತಯಾರಿ ಮಾಡುತ್ತದೆ. ಅದು ಮಗುವನ್ನು ದೇಶದ ಉತ್ತಮ ಹಾಗೂ ಜವಾಬ್ದಾರಿಯುತ ಪ್ರಜೆಯನ್ನಾಗಿ ಮಾಡಬೇಕು ಮತ್ತು ಆಕೆ/ಆತ ನಿರ್ವಹಿಸಬೇಕಾದ ಪಾತ್ರಗಳ ಬಗ್ಗೆ ಜ್ಞಾನವನ್ನು ತುಂಬಬೇಕು. ಜೊತೆಗೆ ಹಾಗೆ ಮಾಡಲು ಇರುವ ಕಾರಣಗಳನ್ನು ಮತ್ತು ಅವುಗಳ ವಿವಿಧ ಸ್ವರೂಪಗಳನ್ನೂ ಕೂಡ ತಿಳಿಸಬೇಕಾಗುತ್ತದೆ. ತಾನೊಬ್ಬನೇ(ಳೇ) ಅಲ್ಲ ಇತರರೂ ಇದ್ದಾರೆ ಎಂಬ ಅರಿವನ್ನು ಬೆಳೆಸುವುದು ಕೂಡ ಶ್ರೇಷ್ಠ ಪ್ರಜೆಯ ಪಾಲಿಗೆ ಬಹುಮುಖ್ಯ. ಉತ್ತಮ ಪೌರತ್ವ ಅಂದರೆ, ವಿಶಾಲ ವ್ಯಾಪ್ತಿಯನ್ನು ಪರಿಗಣಿಸುವುದು ಹಾಗು ಈ ಈ ರಾಷ್ಟ್ರಕ್ಕೆ ಅಥವಾ ದೇಶದ ಜನರಲ್ಲಿ ಯಾರೊಬ್ಬರಿಗೇ ಆಗಲಿ ಕೇಡು ತರುವಂತಹ ಪರಿಸ್ಥಿತಿಗಳನ್ನು ಎದುರಿಸುವ ಮತ್ತು ಬದಲಿಸುವ ಪ್ರಯತ್ನಗಳಲ್ಲಿ ತೊಡಗಿಕೊಳ್ಳುವುದೇ ಆಗಿದೆ.

ಒಟ್ಟಿದು ಮಗುವನ್ನು, ಅದರ ಕಲ್ಪನೆಗಳನ್ನು ಮತ್ತು ಅದು ತೊಡಗಿಕೊಳ್ಳುವ ಮಾರ್ಗಗಳನ್ನು ಅನೇಕ ಸಂಗತಿಗಳು ರೂಪಿಸುತ್ತಾ ಹೋಗುತ್ತವೆ. ಇವುಗಳಲ್ಲಿ ಮೊದಲ ಹೆಜ್ಜೆಯಾಗಿ ಬರುವುದು ಅದರ ಕುಟುಂಬ ಮತ್ತು ಸುತ್ತಲಿನ ಸಮುದಾಯ. ತಮ್ಮ ಮಕ್ಕಳು ಸಮುದಾಯದೊಂದಿಗೆ ಸಾಮರಸ್ಯದಿಂದ ಬೆರೆಯಬೇಕು ಮತ್ತು ಅದು ಕಾರ್ಯನಿರ್ವಹಿಸುವ ರೀತಿಯಲ್ಲಿ ಅಂತರ್ಗತ-ವಾಗಬೇಕು; ಅದು ತನ್ನದೇ ಎಂಬ ಭಾವನೆ ಅವರಿಗೆ ಬರುವಂತಿರಬೇಕು; ಅದಕ್ಕೆ ಕೊಡುಗೆಯನ್ನು ನೀಡುವಂತಿರಬೇಕು ಮತ್ತು ಅಂತಿಮವಾಗಿ ಆ ಮೂಲಕ ವಿಶ್ವಾಸವನ್ನು ಗಳಿಸಿ ಅದನ್ನು ಮುನ್ನಡೆಸುವ ಜವಾಬ್ದಾರಿಗೆ ಹೆಗಲು ಕೊಡುವಂತಿರಬೇಕು; ಈ ರೀತಿ ತಮ್ಮ ಮಕ್ಕಳಿಗೆ ಶಿಕ್ಷಣ ದೊರೆಯಬೇಕು ಎಂಬುದು ಎಲ್ಲ ಕುಟುಂಬಗಳ ಅಪೇಕ್ಷೆ ಮತ್ತು ಎಲ್ಲ ಸಮಾಜಗಳ ಅಗತ್ಯ ಕೂಡ ಆಗಿದೆ. ಸಮುದಾಯಗಳು ವಿಸ್ತಾರಗೊಳ್ಳುತ್ತ ಹೋಗುತ್ತಿರು-ವುದರಿಂದ ಮತ್ತು ಅದರ ಸ್ವರೂಪ ಬಹುತೇಕ ಸಂಕೀರ್ಣ-ವಾಗುತ್ತಿರುವುದರಿಂದ ಮಕ್ಕಳು ತಮ್ಮ ಕುಟುಂಬದ ಹೊರಗಿನವರೊಂದಿಗೆ ಅದರಲ್ಲೂ ಅವರ ಕುಟುಂಬಗಳಿಗೆ ಪರಿಚಯವೇ ಇಲ್ಲದವರ ಜೊತೆ ಹೆಚ್ಚು ಹೆಚ್ಚು ಮುಖಾಮುಖಿ-ಯಾಗುತ್ತಾರೆ. ಹೊಸ ಪರಿಸ್ಥಿತಿಗಳಿಗೆ ಅವರು ಸಾಕ್ಷಿಯಾಗಿ ಅಪರಿಚಿತರೊಂದಿಗೆ ಸಂವಹನ ನಡೆಸುವಂತಿರಬೇಕು. ಮಕ್ಕಳು ಅಪರಿಚಿತರನ್ನು ಎದುರಿಸುವುದರ ಜೊತೆಗೆ ಅಪರಿಚಿತರಲ್ಲದ, ಆದರೆ ಅವರ ಕುಟುಂಬದ ಭಾಗವಾಗಿರದ ಜನರ ಜೊತೆಗೂ ಮುಖಾಮುಖಿಯಾಗಬೇಕು. ತಮ್ಮ ಕುಟುಂಬಗಳ ಬೆಂಬಲವಿಲ್ಲದೆ ಇಂಥವರ ಜೊತೆ ಸಂಬಂಧ ಬೆಳೆಸಿಕೊಳ್ಳಲು ಮತ್ತು ಅವರೊಂದಿಗೆ ಹೇಗೆ ವರ್ತಿಸಬೇಕು ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯವಾಗುತ್ತದೆ. ನೈಜ ಪರಿಸ್ಥಿತಿಯಲ್ಲಿ ಕೆಲವು ಕಟ್ಟುಕಟ್ಟಳೆಗಳು ಇರುತ್ತವೆ ಎನ್ನುವುದು ಬೇರೆ ಮಾತು.

**ಸಂವಹನದ ಸೂಕ್ಷ್ಮತೆಯ ವ್ಯತ್ಯಾಸಗಳನ್ನು ಕಲಿಯುವುದು**

ಮಕ್ಕಳು ತಮ್ಮ ಸುತ್ತಮುತ್ತಲಿನ ಪ್ರಪಂಚದಲ್ಲಿ ಎದುರಾಗುವ ಪರಿಸ್ಥಿತಿಗಳನ್ನು ನಿಭಾಯಿಸಲು. ಆಯ್ಕೆಗಳನ್ನು ಮಾಡಿಕೊಳ್ಳ-ಬೇಕಾಗುತ್ತದೆ. ಅವರ ಮೇಲೆ ಸಾಕಷ್ಟು ಪ್ರಭಾವವನ್ನು ಅವರ ಹತ್ತಿರದ ಜಗತ್ತಿನಲ್ಲಿ ಮಕ್ಕಳಿಗಾಗಿ ಕಾಳಜಿ ವಹಿಸುವವರು, ಅವರ ಬಗ್ಗೆ ಉದಾಸೀನ ತೋರುವವರು, ಎಲ್ಲಕ್ಕಿಂತ ಮುಖ್ಯವಾಗಿ ಅವರನ್ನು ಉಪಾಯದಿಂದ ಬಳಸಿಕೊಳ್ಳಲು ಬಯಸುವವರು ಒಳಗೊಂಡಿರುತ್ತಾರೆ. ಈ ಜನರ ನಡುವೆ ಎಷ್ಟೊಂದು ವ್ಯತ್ಯಾಸಗಳಿವೆ ಎಂಬುದನ್ನು ಮಕ್ಕಳು ಅರ್ಥ ಮಾಡಿಕೊಳ್ಳಬೇಕು ಮತ್ತು ಪ್ರತಿಯೊಂದಕ್ಕೂ ಸೂಕ್ತವಾಗಿ ಪ್ರತಿಕ್ರಿಯಿಸುವಂತಾಗಬೇಕು. ವಿಶೇಷವಾಗಿ, ಯಾರಾದರೊಬ್ಬರು ಪ್ರಲೋಭನೆಯ ಮೂಲಕ ಮತ್ತು ಅಥವಾ ಪ್ರಾಬಲ್ಯದ ಮೂಲಕ ಆಕೆ/ಆತನನ್ನು ದುರುಪಯೋಗ ಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೆ ಅದು ಆ ಮಗುವಿಗೆ ಗೊತ್ತಾಗಬೇಕು ಮತ್ತು ಅದಕ್ಕೆ ಆ ಮಗು ಪ್ರತಿರೋಧ ತೋರುವಂತಿರಬೇಕು. ಇದಕ್ಕಾಗಿ ಮಗುವಿಗೆ ತನ್ನ ಬಗೆಗಿನ ಸ್ವ ಅರಿವು, ದೇಹ, ತನ್ನ ಮತ್ತು ಅದರ ಹಕ್ಕುಗಳು ಹಾಗು ಅದಕ್ಕಾಗಿ ಉಳಿದವರು ಏನು ಮಾಡಬಹುದು ಎನ್ನುವ ಬಗ್ಗೆ ತಿಳುವನ್ನು ಮೂಡಿಸಿ ಶಿಕ್ಷಣವನ್ನು ನೀಡಬೇಕಾಗುತ್ತದೆ.

ಇಂತಹ ಪ್ರಕರಣಗಳಲ್ಲೆಲ್ಲ ಯಾವ ರೀತಿಯ ನಿಲುವನ್ನು ಹೊಂದಿರಬೇಕು ಎನ್ನುವ ಬಗ್ಗೆಯೂ ಶಿಕ್ಷಣವನ್ನು ನೀಡಬೇಕಾದ ಅಗತ್ಯವಿದೆ. ಕಾಲಕಾಲಕ್ಕೆ ಸಮಾಜ ಮತ್ತು ಪರಿಸ್ಥಿತಿಗಳು ಬದಲಾಗುತ್ತಿರುವಂತೆ ಅದಕ್ಕೆ ತಕ್ಕಂತೆ ದುರುಪಯೋಗ-ಪಡಿಸಿಕೊಳ್ಳುವ ಮತ್ತು ಅತಿಕ್ರಮಣದ ವರ್ತನೆಗಳ ಸ್ವರೂಪಗಳೂ ಬದಲಾಗಬಹುದು. ಹಾಗಾಗಿ ಮಕ್ಕಳಿಗೆ ನೀಡುವ ಶಿಕ್ಷಣ ಕೂಡ ಇಂಥವುಗಳಿಗೆ ಹೊಸ ಬಗೆಯ ಪ್ರತಿಕ್ರಿಯೆಗಳನ್ನು ಒಳಗೊಂಡಿರಬೇಕು. ಹಾಗಾಗಿ ಒಂದು ಸಮಾಜದ ಸದಸ್ಯನಾಗುವ ಮತ್ತು ಸಂಭವನೀಯ ಅಪಾಯಗಳಿಂದ ರಕ್ಷಿಸಿಕೊಳ್ಳುವಂತೆ ತಯಾರಾಗುವ ಇಡೀ ಪ್ರಕ್ರಿಯೆಯಲ್ಲಿ ಶಿಕ್ಷಣ ಮತ್ತು ಕಲಿಕೆಯು ಒಂದು ಭಾಗವಾದರೆ ಮಾತ್ರ ಇವೆಲ್ಲವೂ ಸಾಧ್ಯವಾಗುತ್ತದೆ.

ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಈ ದೇಶದ ಪ್ರಜೆಯಾಗಿ ಒಂದು ಮಗು ಸುರಕ್ಷಿತವಾಗಿ ಬೆಳೆಯುವುದು, ಸುತ್ತಲಿನ ಪರಿಸರದ ಬಗ್ಗೆ ಅರಿವನ್ನು ಹೊಂದುವುದು ಮತ್ತು ಇಂತಹ ವ್ಯವಸ್ಥೆಯಲ್ಲಿಯೇ ತನ್ನನ್ನು ತಾನು ಸಂರಕ್ಷಿಸಿಕೊಳ್ಳುವ ಸಾಮರ್ಥ್ಯವನ್ನು ಬೆಳೆಸಿ-ಕೊಳ್ಳುವಂತೆ ಮಾಡುವುದು ಶಿಕ್ಷಣದ ಮುಖ್ಯ ಗುರಿಯಾಗುತ್ತದೆ. ತನ್ನ ಸುತ್ತಮುತ್ತಲೇ ಇರುವ ಅನೇಕ ಸೌಲಭ್ಯಗಳ ಬಳಕೆಯ ವೇಳೆ ಎದುರಾಗಬಹುದಾದಅಪಾಯಗಳ ಬಗ್ಗೆ ಆಕೆಗೆ ಅರಿವಿರಬೇಕು ಮತ್ತು ಮುಂಜಾಗ್ರತೆಯನ್ನು ಹೊಂದಿರಬೇಕು. ಉದಾಹರಣೆಗೆ, ರಸ್ತೆಯಲ್ಲಿ ನಡೆದಾಡುವಾಗ, ಎದುರಾಗುವ ವಿದ್ಯುತ್ ತಂತಿಗಳು, ಜಲಮೂಲಗಳು ಇತ್ಯಾದಿ. ಸಹಬಾಳ್ವೆ ಮತ್ತು ಒಡನಾಟಕ್ಕೆ ಈ ಮಗುವಿಗೆ ನಮ್ಮ ಸುತ್ತ ಜಾರಿಯಲ್ಲಿರುವ ನಿಯಮಗಳ ಬಗ್ಗೆಯೂ ತಿಳಿದಿರಬೇಕು. ಉದಾಹರಣೆಗೆ, ಆಟವನ್ನು ಆಡುವಾಗ ನಿಯಮವನ್ನು ಪಾಲಿಸಬೇಕು, ಪ್ರತಿ ಬಾರಿಯೂ ಒಬ್ಬರೇ ಗೆಲ್ಲಲು ಸಾಧ್ಯವಿಲ್ಲ, ಪ್ರತಿಯೊಬ್ಬರಿಗೂ ಒಂದಲ್ಲ ಒಟ್ಟಿದು ಸುತ್ತಿನಲ್ಲಿ ಅವಕಾಶ ಸಿಕ್ಕೇ ಸಿಗಬೇಕು ಇತ್ಯಾದಿ ಅಂಶಗಳು. ಒಂದು ಸಮುದಾಯದ ಭಾಗವಾಗಿರುವಾಗ ಮಗುವು ಸಂಪ್ರದಾಯಗಳನ್ನು,

ಆಚರಣೆಗಳನ್ನು ಮತ್ತು ಆಸುಪಾಸಿನಲ್ಲಿ ಹಾಗು ವಿಸ್ಮರಿತ ಕುಟುಂಬದಲ್ಲಿನ ರೀತಿ–ರಿವಾಜುಗಳನ್ನು ಕಲಿತುಕೊಳ್ಳಬೇಕು. ಒಂದು ಸಮುದಾಯದಲ್ಲಿ ಬೆಳೆಯುವಾಗ ಮಗುವಿಗೆ ಈ ಎಲ್ಲಾ ಅವಕಾಶಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ. ಆದರೆ ಇವೆಲ್ಲವನ್ನು ಮಗುವಿಗೆ ಸ್ಪಷ್ಟವಾಗಿ, ಪ್ರಜ್ಞಾಪೂರ್ವಕವಾಗಿ ತಿಳಿಸುವ ಕೆಲಸ ಮಾಡಿರುವುದಿಲ್ಲ ಅಥವಾ ಜಾರಿಗೆ ತಂದಿರುವುದಿಲ್ಲ, ಬದಲಾಗಿ ಇದು ಸಂಪ್ರದಾಯದ ಹಾಗು ಸಂಸ್ಕೃತಿಯ ಭಾಗವಾಗಿ ಮಗು ಅನುಭವಿಸಬೇಕಾಗಿರುತ್ತದೆ. ಮಗುವು ಹೇಗೆ ಬೆಳೆಯುತ್ತದೆ ಮತ್ತು ತನ್ನದೇ ಆದ ನಂಬಿಕೆಯ ವ್ಯವಸ್ಥೆಯನ್ನು ಹೇಗೆ ಬೆಳೆಸಿಕೊಳ್ಳುತ್ತದೆ ಎನ್ನುವುದರ ಮೇಲೆ ಶಿಕ್ಷಣ ಪರಿಣಾಮ ಬೀರುತ್ತದೆ.

ಮಗುವಿಗೆ ನಿಶ್ಚಿತವಾಗಿ ಅನೇಕ ಹಕ್ಕುಗಳಿರುತ್ತವೆ– ಸೂಕ್ತ ರೀತಿಯಲ್ಲಿ ಆರೈಕೆ ಹೊಂದುವುದು, ಸರಿಯಾದ ರಕ್ಷಣೆ ಪಡೆಯುವುದು, ಇವೆಲ್ಲವನ್ನೂ ಹಾಗು ಇನ್ನೂ ಅನೇಕ ಸಂಗತಿಗಳನ್ನು ಅರ್ಥಮಾಡಿ–ಕೊಳ್ಳುವಂತೆ ಶಿಕ್ಷಣವನ್ನು ಗಳಿಸುವುದು, ತನ್ನ ಸುತ್ತಲಿನ ಸಂಪನ್ಮೂಲಗಳು ಮತ್ತು ಚಟುವಟಿಕೆಗಳಲ್ಲಿ ಆಕೆಗಿರುವ ಪಾಲನ್ನು ಪಡೆಯುವುದು ಇವೆಲ್ಲವೂ ಸೇರಿರುತ್ತವೆ. ಅಂದರೆ ಕರ್ತವ್ಯಗಳೆಂದು ಪರಿಭಾವಿಸಲಾಗಿರುವ ಕೆಲವು ನಡವಳಿಕೆ ಮತ್ತು ಸಹಭಾಗಿತ್ವದ ನಿಯಮಗಳನ್ನು ಪಾಲಿಸುವ ಮೂಲಕ ಮಗು ತನ್ನ ಪಾತ್ರಗಳನ್ನು ನಿರ್ವಹಿಸಬೇಕಾಗುತ್ತದೆ. ಸಮುದಾಯದಲ್ಲಿ ಬೆರೆತಿರುವ ಮಗುವಿನ ಶಿಕ್ಷಣದಲ್ಲಿ ಇವೆಲ್ಲವೂ ಒಳಗೊಂಡಿರುತ್ತವೆ ಮತ್ತು ಇದು ಸಹಜ ಪ್ರಕ್ರಿಯೆಯಾಗಿದೆ.

**ಸಂಕೀರ್ಣ ಸಮಾಜದಲ್ಲಿ ಹಕ್ಕುಗಳು ಮತ್ತು ಕರ್ತವ್ಯಗಳು**

ಸಂಸ್ಕೃತೀಕರಣದ ಮೂಲಕ ಈ ಎಲ್ಲ ಅಂಶಗಳನ್ನು ಮೈಗೂಡಿಸಿ–ಕೊಳ್ಳುವ ಈ ಪ್ರಕ್ರಿಯೆ (acculturation) ಮಾತ್ರ ಶಿಕ್ಷಣದ ಅಗತ್ಯವನ್ನು ಪೂರೈಸುವುದಿಲ್ಲ. ನಮ್ಮ ಸುತ್ತಲಿನ ಸಮಾಜವೂ ಅಭಿವೃದ್ಧಿ ಹೊಂದಬೇಕು, ರೂಪಾಂತರಗೊಳ್ಳಬೇಕು, ಹೊಸ ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು ಎಂಬುದು ನಮಗೆ ಗೊತ್ತಿದೆ. ಇದರಿಂದ ಮುಖ್ಯವಾಗಿ ಮಗುವಿನಲ್ಲಿ ನಮ್ಮ ಕುತೂಹಲ ಹೆಚ್ಚುತ್ತದೆ, ಪರಿಶೋಧನೆ ಮಾಡುವ, ತನಿಖೆ ನಡೆಸುವ ಮತ್ತು ಪ್ರಶ್ನೆಗಳನ್ನು ಕೇಳುವ ಆಸಕ್ತಿ ಮೂಡುತ್ತದೆ. ಇವೆಲ್ಲದರ ಬಗ್ಗೆ ಶಿಕ್ಷಣವನ್ನು ಪಡೆಯುವ ಹಕ್ಕು ಮಗುವಿಗೆ ಇರಬೇಕು. ಇದರಿಂದ ಮಗು ಪ್ರೌಢಾವಸ್ಥೆಗೆ ಬಂದಾಗ ತನಗೆ ತಕ್ಕುದಾದ ಆಯ್ಕೆಯನ್ನು ಮಾಡಿಕೊಳ್ಳಲು ಮತ್ತು ತಾನು ಅರಿತಿರುವ ಸಮುದಾಯಕ್ಕಿಂತ ಭಿನ್ನವಾದ ಹೊಸ ಪರಿಸ್ಥಿತಿಗಳು ಮತ್ತು ಸವಾಲುಗಳನ್ನು ನಿಭಾಯಿಸುವ ಸಾಮರ್ಥ್ಯವನ್ನು ಹೊಂದಲು ಸಾಧ್ಯವಾಗುತ್ತದೆ. ಸಮುದಾಯ ಎನ್ನುವುದು ದೇಶ ಮತ್ತು ವಿಶ್ವವನ್ನು ಒಳಗೊಂಡಿರುವ ವಿಶಾಲ ಸಮಾಜದ ಒಂದು ಭಾಗ ಎನ್ನುವುದು ಕೂಡ ನಮಗೆ ತಿಳಿದಿದೆ. ಇಂತಹ ಜ್ಞಾನವನ್ನು ಪಡೆದುಕೊಳ್ಳುವುದು ತನ್ನಿಂದ ಸಾಧ್ಯವಿದೆ ಎಂಬುದು ಮಗುವಿಗೆ ಗೊತ್ತಾಗಬೇಕು. ಜೊತೆಗೆ ತಾನು ಏನಾಗಬೇಕು ಎಂಬುದನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕು ಕೂಡ ಅದಕ್ಕಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ತನ್ನ ಸುತ್ತಲಿರುವ, ಅದರಲ್ಲೂ ವಿಶೇಷವಾಗಿ ತನ್ನ ಕುಟುಂಬ ಹಾಗು ಸಮುದಾಯದಲ್ಲಿ ಲಭ್ಯವಿರುವ ಕೆಲವೇ ಕೆಲವು ಆಯ್ಕೆಗಳಿಗೆ ಮಾತ್ರ ಸೀಮಿತವಾಗುವಂತೆ ಇರಬಾರದು. ಹಕ್ಕುಗಳನ್ನು ಒಳಗೊಂಡ ಈ ಚೌಕಟ್ಟಿನಲ್ಲಿ ನಾವು ಇವುಗಳನ್ನೆಲ್ಲ ಸೇರಿಸಿದಾಗ ಅದು ಏಕಾಏಕಿ ಇನ್ನಷ್ಟು ವಿಶಾಲವಾಗುತ್ತ ಹೋಗುತ್ತದೆ.

ಈಗಾಗಲೇ ಸಂಕೀರ್ಣವಾಗಿರುವ ಸಮಾಜದಲ್ಲಿ ಮತ್ತು ಇನ್ನಷ್ಟು ಸಂಕೀರ್ಣವಾಗುತ್ತಿರುವ ವ್ಯವಸ್ಥೆಯಲ್ಲಿ ಕೆಲವು ವಿಶೇಷ ಪಾತ್ರಗಳನ್ನು ನಿರ್ವಹಿಸಲು ನಿರ್ದಿಷ್ಟವಾದ ಸಿದ್ಧತೆಗಳ ಅಗತ್ಯವಿರುತ್ತದೆ. ಪ್ರತಿಯೊಂದು ಮಗುವಿಗೂ ಇದರ ಬಗ್ಗೆ ಅರಿವಿರಬೇಕು ಮತ್ತು ಇಂತಹ ಅವಕಾಶಗಳ ಸಾಧ್ಯತೆಗಳನ್ನು ತಿಳಿದುಕೊಂಡಿರಬೇಕು. ಉದಾಹರಣೆಗೆ, ಮಕ್ಕಳಿಗೆ ಇಂತಹ ಆಯ್ಕೆಗಳನ್ನು ತಲುಪುವ ದಾರಿಗಳು ಯಾವುವು ಮತ್ತು ಎಂತಹ ಒಂದು ವ್ಯವಸ್ಥೆಯಿಂದ ಅವರಿಗೆ ಸಿದ್ಧತೆ ಮಾಡಿಕೊಳ್ಳಲು ಸಹಾಯವಾಗುತ್ತದೆ ದ ಎಂಬುದರ ಬಗ್ಗೆ ತಿಳಿದಿರಬೇಕು. ಸಮಾನತೆಯ ಭರವಸೆಯನ್ನು ನೀಡುವ ಪ್ರಜಾಸತ್ತಾತ್ಮಕ ರಾಷ್ಟ್ರದಲ್ಲಿ ಇದು ಸರಿಯಾದ ಮಾರ್ಗ ಕೂಡ ಆಗಿದೆ. ಒಂದು ಮಗುವಿಗೆ ಒಬ್ಬ ಕಲಾವಿದ, ಒಬ್ಬ ಸಂಗೀತಗಾರ, ಒಬ್ಬ ಎಂಜಿನಿಯರ್, ಒಬ್ಬ ವೈದ್ಯ, ಒಬ್ಬ ಶಿಕ್ಷಕ ಅಥವಾ ಒಬ್ಬ ದಾದಿಯಾಗಿ ನಿರ್ವಹಿಸಬೇಕಾದ ಪಾತ್ರಗಳನ್ನು ತಿಳಿಸುವ ಶೈಕ್ಷಣಿಕ ಪ್ರಕ್ರಿಯೆ ಇರಬೇಕು ಎಂಬುದನ್ನು ಇದು ಸೂಚಿಸುತ್ತದೆ.

ವಾಸ್ತವವಾಗಿ, ಮಕ್ಕಳು ಬದುಕುತ್ತಿರುವ ಮತ್ತು ಬೆಳೆಯುತ್ತಿರುವ ನಿಜವಾದ ಪರಿಸ್ಥಿತಿಗಳು ಇವುಗಳಿಂದ ಸಾಕಷ್ಟು ವಿಭಿನ್ನವಾಗಿವೆ. ತಾನು ತಲುಪಬೇಕಾಗಿರುವ ಗುರಿಗಳಿಗಾಗಿ ಕೆಲಸ ಮಾಡುವ ಮತ್ತು ತನ್ನ ಆಕಾಂಕ್ಷೆಗಳೆಲ್ಲ ಸಾಕಾರಗೊಳ್ಳಲು ಬೇಕಾದ ಎಲ್ಲ ಪ್ರಯತ್ನಗಳನ್ನು ಮಾಡುವ ಮಗುವಿನ ಜವಾಬ್ದಾರಿಯು ಈ ಹಕ್ಕಿನಲ್ಲಿ ಹಾಸುಹೊಕ್ಕಾಗಿದೆ ಎಂಬುದು ಮಾತ್ರ ಇದರಲ್ಲಿ ಸ್ಪಷ್ಟ. ಹಾಗಾಗಿ, ಇದಕ್ಕೆ ತಕ್ಕುದಾದ ಸಂಪನ್ಮೂಲಗಳು ಹಾಗು ಅವಕಾಶವನ್ನು ಒದಗಿಸಬೇಕು ಎಂದು ನಿರೀಕ್ಷಿಸುವುದು ಮಗುವಿನ ಹಕ್ಕಾಗಿರುವುದರ ಜೊತೆಗೆ ಅದಕ್ಕಾಗಿ ಸಾಕಷ್ಟು ಪ್ರಯತ್ನಗಳನ್ನು ಮಾಡುವುದು ಅದರ ಜವಾಬ್ದಾರಿ ಕೂಡ ಆಗಿದೆ. ಒಂದು ಸಮುದಾಯದಲ್ಲಿ ಜವಾಬ್ದಾರಿಗಳಿಲ್ಲದೆ ಅನೇಕ ಹಕ್ಕುಗಳು ಇರಲಾರವು ಎಂಬುದು ಒಂದರ್ಥದಲ್ಲಿ ನಿಜವಾದರೂ ಅವರಿಗೆ ಕೇವಲ ಜವಾಬ್ದಾರಿಗಳಿವೆ ಮತ್ತು ಕೆಲವೇ ಕೆಲವು ಅಥವಾ ಯಾವುದೇ ಹಕ್ಕುಗಳಿಲ್ಲ ಎನ್ನುವ ಪರಿಸ್ಥಿತಿಗಳಲ್ಲಿ ಮಕ್ಕಳು ಸಿಕ್ಕಿಹಾಕಿಕೊಳ್ಳಬಾರದು. ಒಂದು ಸಮಾಜವು ಅತ್ಯಗತ್ಯ ಎಂದು ಪರಿಗಣಿಸುವ ಜವಾಬ್ದಾರಿಗಳು ಮತ್ತು ಹಕ್ಕುಗಳು ಎಲ್ಲ ಮಕ್ಕಳನ್ನು ತಲುಪುವಂತೆ ಮಾಡುವುದು ಆ ಸಮಾಜದ ಕರ್ತವ್ಯ ಕೂಡ ಆಗಿರುವುದು ಇನ್ನೊಂದು ಬಹುಮುಖ್ಯ ಸಂಗತಿಯಾಗಿದೆ. ಹಕ್ಕುಗಳು ಮತ್ತು ಜವಾಬ್ದಾರಿಗಳು ರಾಷ್ಟ್ರದ ಎಲ್ಲ ಮಕ್ಕಳಿಗೆ ನ್ಯಾಯಸಮ್ಮತವಾಗಿ ಹಂಚಿಕೆಯಾಗಿವೆಯೇ ಎಂಬುದನ್ನು ನಾವು ಪ್ರತಿಯೊಬ್ಬರೂ ಕೇಳಿಕೊಳ್ಳಬೇಕಾಗಿದೆ ಕೂಡ.

**ರಾಷ್ಟ್ರದ ಪ್ರಜೆಗಳಾಗಲು ಕಲಿಕೆ**

ಇಂತಹ ಸ್ವಾಭಾವಿಕವಾದ ಶಿಕ್ಷಣವು ಮಕ್ಕಳು ಬದುಕುತ್ತಿರುವ ಪರಿಸರದಿಂದಲೇ ಲಭ್ಯವಾಗುತ್ತದೆ. ಇದು ಅವರ ಕುಟುಂಬಗಳಿಂದ, ಸಮುದಾಯ, ಮಾಧ್ಯಮ ಮತ್ತು ಸಮಾಜದಲ್ಲಿ ವ್ಯಕ್ತಿಯ ಪಾತ್ರಗಳು ಮತ್ತು ಹಕ್ಕುಗಳು, ಪರಸ್ಪರ ಸಂಬಂಧಗಳು ಹಾಗು ಸಂವಹನಗಳಂಥ ಇತರ ಮೂಲಗಳಿಂದ ಸಮ್ಮಿಳಿತಗೊಂಡ ದೃಷ್ಟಿಕೋನಗಳಿಂದ ಅವರಿಗೆ ಸಿಗುತ್ತದೆ. ಮಕ್ಕಳಲ್ಲಿ ಬೇಡಿಕೆಗಳನ್ನು ಹಾಗು ಮಹತ್ವಾಕಾಂಕ್ಷಿ ಮೌಲ್ಯಗಳನ್ನು ಹುಟ್ಟುಹಾಕಲು ಬಯಸುವ ಮಾರುಕಟ್ಟೆ ಶಕ್ತಿಗಳಿದ್ದು, ಸ್ಪರ್ಧೆಯನ್ನು ಉತ್ತೇಜಿಸುವುದು ಅಥವಾ ವಿಚಾರಹೀನವಾದ ಅರ್ಹತೆ ಮತ್ತು ಬೇಡಿಕೆಗಳ ಪ್ರಜ್ಞೆಯನ್ನು ಹುಟ್ಟುಹಾಕುವುದು ಅವುಗಳ ಉದ್ದೇಶವಾಗಿದೆ. ಇಂತಹ ಶಕ್ತಿಗಳು ಸಮಾನತೆ, ವೈವಿಧ್ಯತೆ ಮತ್ತು ಬಹುತ್ವಕ್ಕೆ ತಪ್ಪು ಅರ್ಥವನ್ನು ನೀಡುವ ಮೂಲಕ ವಾಸ್ತವವನ್ನು ಮರೆಮಾಚಬಹುದು. ಯುವಕರಿಗೆ ತಪ್ಪು

ಮಾಹಿತಿಯನ್ನು ನೀಡಿ ಅವರನ್ನು ತೀವ್ರಗಾಮಿಗಳನ್ನಾಗಿ ಮಾಡುವ ಪ್ರಯತ್ನದಲ್ಲಿ ತೊಡಗಿರುವ ಸಾಮಾಜಿಕ ಮತ್ತು ರಾಜಕೀಯ ಶಕ್ತಿಗಳು ನಮ್ಮ ನಡುವೆ ಇವೆ.

ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಮಾಧ್ಯಮದ ಅತಿಯಾದ ಲಭ್ಯತೆ ಮತ್ತು ಬಳಕೆಯಿಂದಾಗಿ ಸಾಕಷ್ಟು ಪ್ರಮಾಣದ ಅನಿಯಂತ್ರಿತ ಮಾಹಿತಿಗಳು ಎಲ್ಲರನ್ನೂ ತಲುಪುತ್ತಿವೆ. ತಾವು ಪಡೆದ ಮಾಹಿತಿಯ ಸ್ವರೂಪ, ಉದ್ದೇಶ ಮತ್ತು ನಿಖರತೆಯನ್ನು ಬಳಕೆದಾರರು ತಿಳಿದು-ಕೊಳ್ಳಬೇಕಾದ ಅಗತ್ಯವಿರುತ್ತದೆ. ಚುನಾವಣೆಯೂ ಸೇರಿದಂತೆ ಕೆಲವು ಸಂಕುಚಿತವಾದ ಲಾಭಗಳಿಗೆ ಜನರನ್ನು ಸೆಳೆಯುವ ಸೀಮಿತ ಉದ್ದೇಶ ಈ ಮಾಹಿತಿಯ ಹಿಂದಿರುವ ಸಾಧ್ಯತೆಯಿರುತ್ತದೆ. ಇಂತಹ ಸಂದೇಶಗಳ ಮೂಲಕ ಸತ್ಯಾಸತ್ಯತೆಯನ್ನು ಅರಿತುಕೊಳ್ಳಲು ಅವುಗಳನ್ನು ಸರಿಯಾಗಿ ವಿವೇಚಿಸಿ ಪ್ರಜಾಸತ್ತಾತ್ಮಕ ಸಂವಿಧಾನದ ಮೂಲತತ್ವಕ್ಕೆ ಅನುಗುಣವಾಗಿ ನ್ಯಾಯಸಮ್ಮತವಾದ ಅಭಿಪ್ರಾಯವನ್ನು ಹೊಂದುವಲ್ಲಿ ಶಕ್ತನಾಗುವುದು ತಿಳುವಳಿಕೆಯುಳ್ಳ ಮತ್ತು ಸಕ್ರಿಯ ನಾಗರಿಕನಿಗಿರಬೇಕಾದ ಒಂದು ಪ್ರಮುಖ ಅಂಶವಾಗಿದೆ.

ಮಕ್ಕಳು ಇಂತಹ ಜ್ಞಾನವನ್ನು ಪಡೆಯಲು ಅನುಕೂಲವಾಗುವಂತೆ ಪೌರತ್ವಕ್ಕೆ ಸಿದ್ಧಪಡಿಸುವ ಶಿಕ್ಷಣವು ಸೂಕ್ತವಾದ ಸಾಧನಗಳನ್ನು ಅಭಿವೃದ್ಧಿಪಡಿಸಬೇಕಾದ ಅಗತ್ಯವಿದೆ. ಈ ಸಾಧನಗಳೆಂದರೆ; ಮೊದಲನೆಯದಾಗಿ, ಜ್ಞಾನದ ಹೊಸಹೊಸ ಮೂಲಗಳು ಲಭ್ಯವಾಗುವಂತೆ ಮಾಡುವ ಸಾಮರ್ಥ್ಯ. ಅಂದರೆ ಆತ್ಮವಿಶ್ವಾಸದ ಅರಿವಿನೊಂದಿಗೆ ಓದುವ ಸಾಮರ್ಥ್ಯ ಮತ್ತು ಇದನ್ನು ಸಾಧ್ಯವಾದಷ್ಟು ಹೆಚ್ಚಿಸಿಕೊಳ್ಳುವ ಬಯಕೆಯನ್ನು ಹೊಂದುವುದು. ಎರಡನೆಯ ಅಂಶ ಏನೆಂದರೆ, ಒಂದು ಅಭಿಪ್ರಾಯ, ಒಂದು ಹೇಳಿಕೆ (ಅಥವಾ ಪಠ್ಯದ ಭಾಗ) ತರ್ಕಬದ್ಧವಾಗಿದೆಯೇ ಮತ್ತು ಆಂತರಿಕವಾಗಿ ಸ್ಥಿರವಾಗಿದೆಯೇ ಮತ್ತು ಇತರ ಮೂಲಗಳಿಗೆ ಅದು ಹೇಗೆ ಹೊಂದಾಣಿಕೆಯಾಗುತ್ತದೆ ಎಂಬುದನ್ನು ತುಲನೆ ಮಾಡುವ ಪ್ರಖರವಾದ ಸಾಮರ್ಥ್ಯ. ಇದಕ್ಕೆ ಮುಕ್ತವಾದ ಮನಸು ಬೇಕು ಮತ್ತು ತೀರ್ಪನ್ನು ಬದಿಗಿಡುವಂತಹ ಮನೋಧರ್ಮ ಬೇಕಾಗುತ್ತದೆ. ಆದರೆ, ಇಂತಹ ತಾರ್ಕಿಕ, ಬುನಾದಿ ಸಾಮರ್ಥ್ಯಗಳ ಹರಿತವಾದ ಸಾಧನಗಳಿಗೆ ಮೂಲಭೂತವಾದ ನೈತಿಕ ಚೌಕಟ್ಟಿನ ಅಗತ್ಯವಿದೆ. ಸಾಧನಗಳನ್ನು ಬಳಸುವ ಸಿದ್ಧಾಂತಗಳು ಯಾವುವು ಎಂಬುದನ್ನು ಕುರಿತು ಈ ಚೌಕಟ್ಟು ಸಲಹೆ ನೀಡುತ್ತದೆ ಮತ್ತು ಇವು ಸಾಂವಿಧಾನಿಕ ಹಾಗು ಮಾನವೀಯ ಮೌಲ್ಯಗಳಿಂದ ಹೊರಹೊಮ್ಮಬೇಕು. ಮೂಲ ಸಾಕ್ಷರತೆಯ ಜೊತೆಗೆ, ಮೂಲ ಗಣಿತದ ಸಾಮರ್ಥ್ಯ, ವೈಜ್ಞಾನಿಕ ಮತ್ತು ವಿವೇಚನಾಶೀಲ ಮನೋಧರ್ಮ ಇವೆಲ್ಲವನ್ನೂ 2020ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಮತ್ತೊಮ್ಮೆ ಪ್ರತಿಪಾದಿಸಲಾಗಿದೆ.

**ಪ್ರಸ್ತಾವನೆ ಎಂಬ ಭರವಸೆ**

ಭಾರತೀಯ ಪೌರರಿಗೆ ಅನ್ವಯವಾಗುವ ಮೌಲ್ಯಗಳ ಸಾರವು ಸಂವಿಧಾನದ ಪ್ರಸ್ತಾವನೆಯಲ್ಲಿ ಜನರು ಕೊಟ್ಟುಕೊಂಡಿರುವ ವಾಗ್ದಾನದಿಂದ ಬರುತ್ತದೆ. ವೈಜ್ಞಾನಿಕ ಮನೋಭಾವ ಮತ್ತು ವೈಚಾರಿಕತೆಯ ಜೊತೆಗೆ ಸಮಾನತೆ, ನ್ಯಾಯ, ಸ್ವಾತಂತ್ರ್ಯ ಹಾಗು ಭ್ರಾತೃತ್ವದ ವಾಗ್ದಾನ ಇದಾಗಿದೆ. ಶಾಲೆಗಳಲ್ಲಿ ವೈವಿಧ್ಯತೆಗೆ ಮನ್ನಣೆ ನೀಡುವುದು ಸೇರಿದಂತೆ ಈ ವಾಗ್ದಾನವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯಕ್ಕೆ ಸಂಬಂಧಿಸಿದ ಅನೇಕ ಪರಿಣಾಮಗಳನ್ನು ಹೊಂದಿವೆ. ವೈವಿಧ್ಯತೆಯನ್ನು ಹೊಂದಿರುವ ಜನರನ್ನು ಹೇಗೆ ನೋಡಿ-ಕೊಳ್ಳಲಾಗುತ್ತದೆ ಎಂಬುದರ ಮೌಲ್ಯಮಾಪನ ಮತ್ತು ಅಸಮಾನತೆಗೆ ಪ್ರತಿಕ್ರಿಯಿಸುವುದು ಹೇಗೆ ಎಂಬುದರ ಅರಿವನ್ನು ಪ್ರತಿಯೊಬ್ಬರಲ್ಲಿ ಮೂಡಿಸುವ ಕೆಲಸವನ್ನು ಶಿಕ್ಷಣವು ಮಾಡುತ್ತದೆ.

ಸಂವಿಧಾನದಲ್ಲಿ ನೀಡಲಾದ ವಾಗ್ದಾನಗಳ ಪೈಕಿ ಅತ್ಯಂತ ಮಹತ್ವದ್ದೆಂದರೆ ಭ್ರಾತೃತ್ವದ ವಾಗ್ದಾನ. ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಲು ಇದು ಅತ್ಯಂತ ಅಗತ್ಯದ್ದು ಹಾಗು ಬದುಕಿನ ಬಹುತ್ವದ ಸ್ವರೂಪಕ್ಕೆ ನೀಡುವ ಗೌರವವಾಗಿದೆ. ಉಳಿದೆಲ್ಲ ಅಂಶಗಳಿಗೆ ಹೋಲಿಸಿದರೆ ಈ ಮೌಲ್ಯವು ಬಹುಮುಖ್ಯವಾದುದು ಮತ್ತು ಇದು ಇಲ್ಲದೇ ಹೋದರೆ ಉಳಿದ ಯಾವುದೂ ಭದ್ರವಾಗಿ ಬೇರೂರಲು ಸಾಧ್ಯವಿಲ್ಲ. ಭ್ರಾತೃತ್ವವನ್ನು ಬೆಳೆಸುವ ಆಯಾಮಗಳ ವ್ಯಾಪ್ತಿ ಬಹುವಿಶಾಲವಾದುದಾಗಿದ್ದು, ವೈವಿಧ್ಯಮಯ ಹಿನ್ನೆಲೆಯುಳ್ಳ ಇತರರೊಂದಿಗೆ ಗುರುತಿಸಿಕೊಳ್ಳುವ ಮತ್ತು ತನ್ನಂತೆಯೇ ಸಮಾನವಾಗಿ ಸ್ವೀಕರಿಸುವ ಅಪೇಕ್ಷೆಯನ್ನು ಒಳಗೊಂಡಿದೆ.

ಯೋಚನೆ, ಅಭಿವ್ಯಕ್ತಿ, ನಂಬಿಕೆ, ವಿಶ್ವಾಸ ಮತ್ತು ಆರಾಧನೆಯ ಸ್ವಾತಂತ್ರ್ಯವು ಪ್ರಜೆಗಳಿಗೆ ಯೋಚಿಸುವ, ಅಭಿಪ್ರಾಯ ವ್ಯಕ್ತಪಡಿಸುವ, ಮುಕ್ತವಾಗಿ ವಾದ ಮಂಡಿಸುವ ಮತ್ತು ತನಗೆ ಸೂಕ್ತವೆಂದು ಅನಿಸಿದ ರೀತಿಯಲ್ಲಿ ವಿಶ್ವಾಸದಿಂದ ಆರಾಧಿಸುವ ಅವಕಾಶವನ್ನು ಒದಗಿಸುತ್ತದೆ.

**ಇತರ ಮೌಲ್ಯಗಳು**

ಜೊತೆಗೆ, ವೈವಿಧ್ಯತೆಯನ್ನು ಸ್ವೀಕರಿಸಲು ಮತ್ತು ನಂಬಿಕೆಗಳು, ಯೋಚಿಸುವ, ಚಿಂತಿಸುವ ಭಿನ್ನ ರೀತಿ, ಆರಾಧನಾ ಸ್ವರೂಪ, ಪರ್ಯಾಯ ಯೋಚನೆಗಳು ಮತ್ತು ಸ್ವರೂಪಗಳ ಬಹುತ್ವಕ್ಕೆ ಗೌರವ ನೀಡಲು ಸಾಕಷ್ಟು ತಾಳ್ಮೆ ಬೇಕಾಗುತ್ತದೆ. ವೈವಿಧ್ಯಮಯ ನಂಬಿಕೆಗಳು ಹಾಗು ಆರಾಧನಾ ಸ್ವರೂಪಗಳನ್ನು ಒಳಗೊಂಡಿರುವ ಭಾರತೀಯ ಸನ್ನಿವೇಶದಲ್ಲಿ, ಪ್ರತಿಯೊಬ್ಬರಿಗಾಗಿಯೂ ಇರುವ ಈ ಸ್ವಾತಂತ್ರ್ಯವು ಇತರರಿಗೂ ಅವಕಾಶ ನೀಡುವ ಅಂಶದೊಂದಿಗೆ ಹೆಣೆದುಕೊಂಡಿದೆ. ಆಚರಣೆಗಳಲ್ಲಿ ಮತ್ತು ನಾನಾ ನಂಬಿಕೆಗಳಂತೆ ಜನರು ಪೂಜಿಸುವುದರಿಂದ ಅವುಗಳಲ್ಲಿ ಭಾಗವಹಿಸಲು ಅಥವಾ ಆಸಕ್ತಿ ಹೊಂದಿದ ವೀಕ್ಷಕನಾಗಲು ಅರಿವು ಹಾಗು ಅವಕಾಶಗಳು ಬೇಕಾಗುತ್ತವೆ. ತನಗಾಗಿಯೇ ಇರುವ ಪ್ರಜಾಪ್ರಭುತ್ವದಲ್ಲಿ ಹಕ್ಕು ಸಾಧಿಸಲು ಇಂತಹ ಸ್ವೀಕಾರ ಪ್ರಜ್ಞೆ ಅತ್ಯಗತ್ಯ.

ತಿಳುವಳಿಕೆ ಮತ್ತು ಉದ್ದೇಶದೊಂದಿಗೆ ಪ್ರಜಾಸತ್ತಾತ್ಮಕ ಪ್ರಕ್ರಿಯೆಯಲ್ಲಿ ಭಾಗವಹಿಸಲು ಸಾಧ್ಯವಾಗುವುದು ಒಬ್ಬ ಪ್ರಜಾಸತ್ತಾತ್ಮಕ ನಾಗರಿಕನಾಗಿ ಇರುವ ಇನ್ನೊಂದು ಬಹುಮುಖ್ಯ ಅಂಶವಾಗಿದೆ. ಪ್ರಜಾಸತ್ತಾತ್ಮಕ ಪ್ರಕ್ರಿಯೆಯಲ್ಲಿ ಭಾಗವಹಿಸುವುದು ಎಂದರೆ ಅಧಿಕಾರದಲ್ಲಿರುವ ಸರ್ಕಾರವನ್ನು ಬೆಂಬಲಿಸುವುದು ಅಥವಾ ವಿರೋಧಿಸುವುದು ಮತ್ತು ಕೇವಲ ಮತ ಚಲಾಯಿಸುವುದಕ್ಕೆ ಮಾತ್ರ ಸೀಮಿತವಾದುದು ಎಂಬುದು ಖಂಡಿತವಾಗಿಯೂ ಅಲ್ಲ. ಅಂದರೆ ಪ್ರಸಕ್ತ ವಿದ್ಯಮಾನಗಳ ಬಗ್ಗೆ ತಿಳಿದುಕೊಳ್ಳುವುದು, ವಿಶ್ಲೇಷಿಸುವುದು, ಸರ್ಕಾರದ ಮತ್ತು ಆಡಳಿತದ ಕೆಲಸಗಳ ಮೌಲ್ಯಮಾಪನ ಹಾಗು ತುಲನೆ ಮಾಡುವುದು, ಅವರು ಕೈಗೊಂಡಿರುವ ಕ್ರಮಗಳು ಮತ್ತು ನಿರ್ಧಾರಗಳಿಗೆ ಸೂಕ್ತ ಸಮಜಾಯಿಷಿ ಪಡೆಯುವುದು ಮತ್ತು ಪ್ರಶ್ನಿಸುವುದು ಸೇರಿರುತ್ತದೆ. ಒಬ್ಬ ಉತ್ತಮ ಪ್ರಜೆಯಾಗಿರುವುದು ಎಂದರೆ ಅಧಿಕಾರದಲ್ಲಿರುವವರಿಗೆ ವಿಧೇಯರಾಗಿರುವುದು ಎಂದಲ್ಲ, ಬದಲಾಗಿ ಆಕೆ ತನ್ನ ಜೀವನಕ್ಕೆ ಮಾತ್ರವಲ್ಲ, ಇತರರ ಜೀವನದ ಬಗ್ಗೆಯೂ ಒಳಿತನ್ನು ಬಯಸುವ ತಿಳುವಳಿಕೆಯನ್ನು ಹೊಂದಿರುವ ಪ್ರಜೆಯಾಗಿರಬೇಕು. ಪ್ರಜಾಪ್ರಭುತ್ವದಲ್ಲಿ ಒಬ್ಬ ಶಿಕ್ಷಿತ ಪ್ರಜೆ ಎಂದರೆ:

- ಮಾಹಿತಿಯನ್ನು ಪಡೆದುಕೊಳ್ಳುವ ಮತ್ತು ವಿವೇಚನೆಯಿಂದ ತೀರ್ಮಾನಿಸುವ ಸಾಮರ್ಥ್ಯವನ್ನು ಹೊಂದಿರುವುದು.
- ಪುರಾವೆಗಳು, ದೃಷ್ಟಿಕೋನಗಳು, ಅಭಿಪ್ರಾಯಗಳು, ವಿಶ್ಲೇಷಣೆಗಳು, ಪ್ರತಿಪಾದನೆಗಳನ್ನು ಪಡೆದುಕೊಂಡು ಅದರ ಮೌಲ್ಯಮಾಪನ ಮಾಡುವುದು.
- ತರ್ಕಬದ್ಧವಾಗಿರುವುದನ್ನು ಮತ್ತು ವೈಚಾರಿಕವಾದುದನ್ನು ತಿಳಿದುಕೊಳ್ಳುವುದು.

ಮೇಲೆ ಪ್ರಸ್ತಾಪಿಸಿದ ಮೂರು ಸಂಗತಿಗಳು ಮಾತ್ರ ಸರ್ಕಾರ ಮತ್ತು ಆಡಳಿತ ನಡೆಸುವವರಂತೆಯೇ ನಾವು ಕೂಡ ಸಮಾನರು ಎಂಬ ವಿಶ್ವಾಸವನ್ನು ಮತ್ತು ನಾಗರಿಕನಾಗಿ ಒಬ್ಬನ ಪಾತ್ರದ ಮಹತ್ವವನ್ನು ಅರಿಯುವ ಸಾಮರ್ಥ್ಯವನ್ನು ಹುಟ್ಟುಹಾಕಬಹುದು. ಬದಲಾಗಿ ಅಧಿಕಾರಸ್ಥರನ್ನು ಒಂದು ಊಳಿಗಮಾನ್ಯ ಪದ್ಧತಿಯಲ್ಲಿನ ವ್ಯಕ್ತಿಯಂತೆ ಸುಮ್ಮನೆ ಒಪ್ಪಿಕೊಂಡು ಪರವಶವಾಗಬೇಕಾಗಿಲ್ಲ.

**ದೇಶಭಕ್ತಿ**

ದೇಶದ ಬಗ್ಗೆ ಕಾಳಜಿ ಮತ್ತು ಸಾಮಾಜಿಕ ಕಳಕಳ ಹೊಂದಿರುವುದು ಒಬ್ಬ ನಾಗರಿಕನಾಗಿ ಬಹುಮುಖ್ಯ ಅಂಶವಾಗಿದೆ. ಆದರೆ, ದೇಶಭಕ್ತನಾಗಿರುವುದು ಮತ್ತು ನಾಗರಿಕನಾಗಿ ಜವಾಬ್ದಾರಿಯಿಂದ ವರ್ತಿಸುವುದು ಎಂಬುದನ್ನು ಪರಾಮರ್ಶೆಗೆ ಒಳಪಡಿಸ-ಬೇಕಾಗುತ್ತದೆ. ರಾಷ್ಟ್ರದ ಕಲ್ಪನೆಯನ್ನು, ದೇಶಭಕ್ತಿಯ ಅರ್ಥವನ್ನು ಮತ್ತು ಅದು ಏನು ಮತ್ತು ಯಾಕೆ ಎನ್ನುವುದನ್ನು ಪ್ರಶ್ನಿಸುವುದು ಅತ್ಯಗತ್ಯ. ಪ್ರಶ್ನೆಗಳನ್ನು ಕೇಳುವುದು ಮತ್ತು ಸರ್ಕಾರದ ಅಥವಾ ಆಡಳಿತಾತ್ಮಕ ಕ್ರಮಗಳ ಬಗ್ಗೆ ಸಹಮತ ಇಲ್ಲದೇ ಇರುವುದು ಎಂದರೆ ದೇಶಪ್ರೇಮವಿಲ್ಲದೇ ಇರುವುದು ಎಂದಲ್ಲ.

> ಈ ದೇಶವನ್ನು ರಚಿಸುವುದು ಇಲ್ಲಿನ ಜನರೇ ಎಂಬುದನ್ನು ನಾಗರಿಕರು ಗುರುತಿಸಿ ಈ ತಿಳುವಳಿಕೆಯೊಂದಿಗೆ ಮತ್ತು ಮಾನ್ಯತೆಯೊಂದಿಗೆ ವರ್ತಿಸಬೇಕಾಗುತ್ತದೆ. ತನ್ನ ಜನರ ಬಗ್ಗೆ ಯಾವುದೇ ಕಳಕಳ ಇಲ್ಲದೆ ಮತ್ತು ರಾಷ್ಟ್ರೀಯತೆಯ ಅಮೂರ್ತ ಚಿಂತನೆಗೆ, ಅಂತ್ಯವಿಲ್ಲದ ತ್ಯಾಗಕ್ಕೆ ಒತ್ತಾಯಿಸುವ ದೇಶದ ಯಾವುದೇ ಚಿಂತನೆಯು ಪ್ರಜಾಸತ್ತಾತ್ಮಕವಲ್ಲದ ಸೂತ್ರೀ-ಕರಣವಾಗುತ್ತದೆ. ಒಬ್ಬ ವ್ಯಕ್ತಿ ಇತರ ವ್ಯಕ್ತಿಗಳು, ಸಮುದಾಯಗಳು ಮತ್ತು ದೇಶಗಳು ಆದರಿಸುವ ಹೆಮ್ಮೆಯ ಸಂಗತಿಗಳನ್ನು ಗೌರವದಿಂದ ಕಂಡರೆ ಮಾತ್ರ ತನ್ನ ಬಗ್ಗೆ ಮತ್ತು ದೇಶದ ಬಗ್ಗೆ ಹೊಂದಿರುವ ಹೆಮ್ಮೆಯನ್ನು ನಿಜವಾದದು ಎಂದು ನಿರ್ಣಯಿಸಬೇಕು.

ಕಳೆದುಹೋದ ಕಾಲದ ತಪ್ಪುಗಳನ್ನು ಗುರುತಿಸಲು ಮಾತ್ರ ನಮಗೆ ಸಹಾಯ ಮಾಡುತ್ತದೆಯೇ ಹೊರತು ಅದು ನಮ್ಮ ಇಂದಿನ ಬದುಕನ್ನು ಉತ್ತಮಗೊಳಿಸುವುದಿಲ್ಲ ಎಂಬ ಅಂಶವನ್ನು ನಾವು ಸದಾ ಮನಗಾಣಬೇಕಾದ ಅಗತ್ಯವಿದೆ. ಗತಿಸಿದ ಕಾಲದ ತಪ್ಪುಗಳನ್ನು ಇಂದಿನ ಸನ್ನಿವೇಶದಲ್ಲಿಟ್ಟು ಸಾರ್ವಭೌಮ ಗಣರಾಜ್ಯದ ಚಿಂತನೆಯನ್ನು ಪರಿಶೀಲಿಸಬೇಕಾದ ಮತ್ತು ಒಂದು ರಾಷ್ಟ್ರದ ಏಕತೆ ಹಾಗು ಸಮಗ್ರತೆ ಎಂದರೆ ಏನು ಎಂಬುದನ್ನು ಖಚಿತಪಡಿಸಿ-ಕೊಳ್ಳಬೇಕಾದ ಅಗತ್ಯವಿದೆ. ಇದು ಜನರಿಗೆ ಮತ್ತು ಎಲ್ಲ ವೈವಿಧ್ಯತೆಗೆ ಗೌರವ ಸಲ್ಲಿಸದಿರುವುದೇ? ಅಂದರೆ ಏಕಮುಖೀ ಯೋಚನೆ ಮತ್ತು ಏಕ ನಂಬಿಕೆಯನ್ನು ಒಳಗೊಂಡ ಏಕರೂಪತೆ ಮತ್ತು ಅಧಿಪತ್ಯವನ್ನೂ ಸಾಧಿಸುವುದರ ಕಡೆಗೆ ಕ್ರಮಿಸುವುದು ಎಂದು ಅರ್ಥವೇ? ಅಂದರೆ ಇದು ಇತರ ಸಮುದಾಯಗಳು ಅಥವಾ ವ್ಯಕ್ತಿಗಳ ವಿರುದ್ಧ ಭಯ ಮತ್ತು ಕ್ರೋಧದ ಬೀಜಗಳನ್ನು ಬಿತ್ತುವುದು ಎಂದು ಅರ್ಥವೇ? ಇದು ಕೇವಲ ಭೌತಿಕ ಭೂಮಿ ಮತ್ತು ಭೌಗೋಳಿಕ ವಿವರಣೆಗೆ ಮಾತ್ರ ಸಂಬಂಧಿಸಿದ್ದಲ್ಲವಾದ್ದರಿಂದ ಇದು ಈ ದೇಶದಲ್ಲಿ ಬೀಡುಬಿಟ್ಟಿರುವ ಜನರ ಬಗ್ಗೆಯೂ ಕಳಕಳಿಯನ್ನು ಹೊಂದಿರಬೇಕು. ಆ ಬಗ್ಗೆ ಮತ್ತು ಅಮೂರ್ತರೂಪದ ರಾಷ್ಟ್ರದ ಮೇಲೆ ಹೆಚ್ಚಿನ ಒತ್ತು ನೀಡುವುದು, ಕಳೆದುಹೋದ ಕಾಲದ ಕಡೆಗೆ ಹಿನ್ನೋಟ, ಅತಿಯಾದ ರಾಷ್ಟ್ರವಾದಿಯಾಗಿರುವುದು, ಸಂಕುಚಿತ ಮನೋಭಾವವನ್ನು ಹೊಂದಿರುವುದು ಮತ್ತು ಒಳಗೊಳ್ಳದೇ ಇರುವುದು – ಇವೆಲ್ಲವೂ ಸಂವಿಧಾನದಲ್ಲಿ ಕಲ್ಪಿಸಲಾಗಿರುವಂತೆ ಭಾರತೀಯನಾಗಿರುವುದರ ಆಲೋಚನೆಯನ್ನೇ ಅಗೌರವಿಸಿದಂತೆ.

**ಶಾಲೆಯ ಪಾತ್ರ**

ಶಾಲಾ ಶಿಕ್ಷಣದ ಪ್ರಕ್ರಿಯೆಯು ಈ ನಿಟ್ಟಿನಲ್ಲಿ ಕೊಡುಗೆಯನ್ನು ನೀಡಬಹುದು ಎನ್ನುವುದು ಈ ಯೋಚನೆಯ ಉದ್ದೇಶ. ಶಾಲೆಯಲ್ಲಿ ಎಲ್ಲರಲ್ಲೂ ಸಹಭಾಗಿತ್ವ ಮತ್ತು ಸಹಯೋಗದ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸುವ ಮೂಲಕ; ವಿವಿಧ ರೀತಿಯ ಜಂಟಿ ಕಾರ್ಯಗಳು ಮತ್ತು ಚಟುವಟಿಕೆಗಳನ್ನು ಹಂಚಿಕೊಳ್ಳುವುದರೊಂದಿಗೆ ಇದನ್ನು ಸಾಧ್ಯವಾಗಿಸಬಹುದು; ಶಾಲಾ ನಿರ್ವಹಣೆ ಮತ್ತು ಶಾಲೆಯನ್ನು ನಡೆಸುವ ಕೆಲಸಕ್ಕೆ ಕೊಡುಗೆಯನ್ನು ನೀಡಲು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಪರಸ್ಪರ ಪಾತ್ರಗಳನ್ನು ವಹಿಸಿಕೊಳ್ಳುವ ಸಂಸ್ಕೃತಿಯನ್ನು ಅನುಸರಿಸುವ ಮೂಲಕವೂ ಮಾಡಬಹುದು. ಇದರಿಂದ ಗುಂಪುಗಳಿಗೆ ಜವಾಬ್ದಾರಿಯನ್ನು ನೀಡಿದಂತಾಗುತ್ತದೆ. ನಾನಾ ಕಾರ್ಯನಿಯೋಜನೆಗಳನ್ನು ಗುಂಪುಗಳಲ್ಲಿ ಹಂಚಿಕೊಂಡು ಯೋಜನೆಯ ಚೌಕಟ್ಟಿನಲ್ಲಿಯೇ ಆಲೋಚನೆಗಳನ್ನು ರೂಪಿಸುವ ಮತ್ತು ಕಾರ್ಯರೂಪಕ್ಕೆ ತರುವಂತೆ ಮಾಡುತ್ತದೆ.

ಗುಂಪುಗಳ ಸಮನ್ವಯದ ಕೆಲಸಗಳನ್ನು ನಾನಾ ರೀತಿಯಲ್ಲಿ ವಿಂಗಡಿಸಬಹುದಾಗಿದೆ; ಉಪಕರಣಗಳ ನಿರ್ವಹಣೆ, ತರಗತಿಗಳು ಮತ್ತು ಶಾಲಾ ಆವರಣಗಳನ್ನು ಸ್ವಚ್ಛವಾಗಿರುವಂತೆ ಖಾತರಿ ಪಡಿಸುವುದು, ಮೈದಾನಗಳು ಮತ್ತು ಗಿಡಗಳನ್ನು ನಿರ್ವಹಣೆ ಮಾಡುವುದು, ಹಾಜರಾತಿಯನ್ನು ದೃಢೀಕರಿಸಲು ಸಹಾಯ ಮಾಡುವುದು, ಸಹಾಯದ ಅಗತ್ಯವಿರುವ ಮಕ್ಕಳಿಗೆ ಬೆಂಬಲವಾಗಿ ನಿಲ್ಲುವುದು ಇತ್ಯಾದಿ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಶಾಲೆಯ ಸುಗಮ ಕಾರ್ಯನಿರ್ವಹಣೆಗೆ ಬೇಕಾಗಿರುವುದು ಸಹಭಾಗಿತ್ವದ ಜವಾಬ್ದಾರಿ ವ್ಯವಸ್ಥೆ ಮತ್ತು ಸಂಸ್ಕೃತಿಯನ್ನು ಕಾರ್ಯರೂಪಕ್ಕೆ ತರುವುದು. ಜೊತೆಗೆ ವೇಳಾಪಟ್ಟಿ, ಶಾಲಾ ಚಟುವಟಿಕೆಗಳು, ಕಾರ್ಯಕ್ರಮಗಳು ಮತ್ತು ಇತರೆ ವಿಷಯಗಳಲ್ಲಿ ನಿರ್ಧಾರಗಳನ್ನು ಕೈಗೊಳ್ಳುವ ಕಾರ್ಯದಲ್ಲಿ ಭಾಗಿಯಾಗುವುದು ಕೂಡ ಇದರಲ್ಲಿ ಸೇರಿರಬಹುದು. ಒಟ್ಟಾರೆ ಸ್ವರೂಪದ ಚೌಕಟ್ಟಿನ ಒಳಗೇ ನಡೆಸುವ ಇಂತಹ ಕಾರ್ಯಗಳು, ವಿದ್ಯಾರ್ಥಿಗಳು ಸಹಯೋಗದಿಂದ ಮಾಡುವ ಕೆಲಸದ ಬಗ್ಗೆ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಮತ್ತು ಅವರಿಗೆ ತಮ್ಮದೇ ಆದ ಸ್ವಂತ ಅಭಿಪ್ರಾಯವಿದ್ದಾಗಲೂ ಬಹುಮತದ ನಿರ್ಧಾರವನ್ನು ಒಪ್ಪಿಕೊಳ್ಳುವುದು ಮತ್ತು ಟೀಕೆ ಹಾಗು ಸಲಹೆಗಳನ್ನು ಧನಾತ್ಮಕವಾಗಿ ಸ್ವೀಕರಿಸಲು ಮುಕ್ತವಾದ ಮನಸ್ಸಿನೊಂದಿಗೆ ಪರಾಮರ್ಶೆ ಮತ್ತು ಯೋಜನೆಯಲ್ಲಿ ಭಾಗಿಯಾಗಲು ಸಹಾಯವಾಗುತ್ತದೆ. ಇವೆಲ್ಲದರಿಂದ ಮಾತುಕತೆಗೆ, ಚರ್ಚೆಗೆ ಒಂದು ವೇದಿಕೆಯನ್ನು ಕಲ್ಪಿಸಿದಂತಾಗುತ್ತದೆ ಮತ್ತು ಇಂತಹ ವೇದಿಕೆಯಲ್ಲಿ ಶಾಲಾ ನಿರ್ಧಾರಗಳ ಬಗ್ಗೆ ವಿದ್ಯಾರ್ಥಿಗಳು ಪ್ರಶ್ನೆಗಳನ್ನು ಕೂಡ ಕೇಳುವ ಅವಕಾಶ ಒದಗುತ್ತದೆ.

ಸಾಮಾನ್ಯ ಶಾಲೆಗಳ ಕಲ್ಪನೆಗೆ ಅತ್ಯಂತ ನಿಕಟವಾಗಿರುವವು ಎಂದರೆ ಸರ್ಕಾರಿ ಶಾಲೆಗಳು. ಯಾಕೆಂದರೆ ಅವು ವಿಭಿನ್ನವಾದ ಹಿನ್ನೆಲೆಯಿಂದ ಬಂದ ಮಕ್ಕಳ ಶಿಕ್ಷಣಕ್ಕೆ ಒದಗಿಸುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಶಾಲೆಯಲ್ಲಿ ಅವರು ಆಟದಲ್ಲಿ ಜೊತೆಯಾಗಬಲ್ಲರು, ಒಬ್ಬರಿಗೊಬ್ಬರು ಪರಸ್ಪರ ಮಾತನಾಡಬಲ್ಲರು, ಇನ್ನೊಬ್ಬಳ/ನ ಮಾತಿಗೆ ಕಿವಿಯಾಗಬಲ್ಲರು, ಜೊತೆಜೊತೆಗೆ ತಿಂಡಿ ಮತ್ತು ಊಟವನ್ನು ಹಂಚಿಕೊಳ್ಳಬಲ್ಲರು. ಅವರು ಪರಸ್ಪರ ತಮ್ಮ ನಡವಳಿಕೆ ಹೇಗಿರಬೇಕು ಎಂಬುದನ್ನು ಕಲಿಯುತ್ತಾರೆ, ಭಾಷೆ, ಯೋಚನೆಗಳು ಮತ್ತು ಆಟಗಳನ್ನು ಕಲಿಯುತ್ತಾರೆ. ಶಾಲೆಯ ವಾತಾವರಣದಲ್ಲಿ ಬಹುತ್ವದ ಆಚರಣೆಗಳಲ್ಲಿ ಭಾಗಿಯಾಗುವುದರ ಅಥವಾ ಅವಲೋಕಿಸುವುದರ ಮೂಲಕ ಕೆಲವು ವರ್ಗದ ಜನರಿಗೆ ಕಳಂಕ ಹಚ್ಚುವ ರೀತಿಯಲ್ಲಿ ತಪ್ಪು ಮಾಹಿತಿಯ ಪ್ರಚಾರ ನಡೆಸುತ್ತಿರುವುದಕ್ಕೆ ಪ್ರತಿರೋಧವನ್ನು ಬೆಳೆಸಿಕೊಳ್ಳಬಲ್ಲರು. ವಿರಾಮದ ಸಮಯದಲ್ಲಿ ಅಥವಾ ಮಧ್ಯಾಹ್ನದ ಊಟದ ಸಮಯದಲ್ಲಿ ಜೊತೆಯಾಗಿ ಕುಳಿತುಕೊಂಡು ಪರಸ್ಪರ ತಿಂಡಿ ತಿನಿಸುಗಳನ್ನು ಹಂಚಿಕೊಳ್ಳುವುದರ ಮೂಲಕ ಅವರ ನಡುವಿನ ಅನೇಕ ಗೋಡೆಗಳನ್ನು ಕೆಡವಿ ಹಾಕಬಹುದಾಗಿದೆ.

ಆದರೆ ಇವೆಲ್ಲವೂ, – ಶಾಲೆಯು ಭ್ರಾತೃತ್ವವನ್ನು ಗೌರವಿಸುವುದರಿಂದ ಮತ್ತು ವಿದ್ಯಾರ್ಥಿಗಳ ನಡುವೆ ತಾರತಮ್ಯ ಸುಳಿಯದಂತೆ ಮಾಡುವುದರಿಂದ, ಮತ್ತು ಅವರು ಯಾವುದೇ ಜಾತಿ, ಸಮುದಾಯ, ಕುಟುಂಬದ ವೃತ್ತಿ ಮತ್ತು ಹಣಕಾಸಿನ ಸ್ಥಾನಮಾನಗಳ ಗಡಿಯನ್ನು ಮೀರಿ ಮಿತ್ರರನ್ನು, ಸಹಪಾಠಿಗಳನ್ನು, ತಂಡದ ಸದಸ್ಯರನ್ನು ಸೇರಿಸಿಕೊಳ್ಳುವಂತೆ ಉತ್ತೇಜನ ನೀಡುವುದರಿಂದ ಮಾತ್ರ ಸಾಧ್ಯವಾಗುವುದು. ವಿದ್ಯಾರ್ಥಿಗಳು ಒಂದು ತಂಡವಾಗಿ ಆಟವಾಡುವುದು, ಗೆಲ್ಲುವುದು ಮತ್ತು ಸೋಲುವುದನ್ನು ಕಲಿತು, ಫಲಿತಾಂಶ ಯಾವುದೇ ಇರಲಿ ಅದನ್ನು ಸ್ವೀಕರಿಸುವುದು, ಸಾಂಸ್ಕೃತಿಕ ಮತ್ತು ಇತರ ಚಟುವಟಿಕೆಗಳಲ್ಲಿ ಪರಸ್ಪರ ಒಂದಾಗುವುದು ಮತ್ತು ಶಾಲೆಗಾಗಿ ಅನೇಕ ಸವಾಲುಗಳನ್ನು ಗಟ್ಟಿಯಾಗಿ ಎದುರಿಸುವುದನ್ನು ಅರ್ಥ ಮಾಡಿಕೊಳ್ಳುವಂತಹ ಕಾರ್ಯಯೋಜನೆ ಕಲ್ಪಿಸುವುದು ಕೂಡ ಇವೆಲ್ಲದರಲ್ಲಿ ಒಳಗೊಂಡಿದೆ.

ವಿದ್ಯಾರ್ಥಿಗಳಲ್ಲಿ ನ್ಯಾಯಯುತ ಆಲೋಚನೆಗಳನ್ನು ಬೆಳೆಸಲು ಅವರೊಂದಿಗೆ ಪಾರದರ್ಶಕತೆಯಿಂದ ಇದ್ದು ವಸ್ತುನಿಷ್ಠ ಪ್ರತಿಕ್ರಿಯೆಗಳನ್ನು ನೀಡುವುದು ಅತ್ಯವಶ್ಯಕವಾಗಿದೆ.

ಒಂದು ಶಾಲೆಯ ಆಂತರಿಕ ಕಾರ್ಯನಿರ್ವಹಣೆ ಮತ್ತು ಚಟುವಟಿಕೆಗಳು – ಉದಾಹರಣೆಗೆ, ಜೊತೆಯಾಗಿ ಕೆಲಸ ಮಾಡುವ ಅನುಭವವನ್ನು ಒದಗಿಸುವುದು, ಪಾರದರ್ಶಕವಾದ ರೀತಿಯಲ್ಲಿ ಎಲ್ಲರನ್ನೂ ನೋಡುವುದು ಮತ್ತು ಮಿಶ್ರ ಗುಂಪುಗಳನ್ನು ಒಳಗೊಳ್ಳುವುದನ್ನು ಖಾತ್ರಿಗೊಳಿಸುವುದು ಇತ್ಯಾದಿ – ಸೂಕ್ಷ್ಮ ನೆಲೆಯಲ್ಲಿರುವ ವೈವಿಧ್ಯತೆಯನ್ನು ಒಪ್ಪಿಕೊಳ್ಳುವ ಮನೋ–ಭೂಮಿಕೆಗೆ ಮಕ್ಕಳನ್ನು ಸಿದ್ಧಗೊಳಿಸುವುದು ಅತ್ಯಂತ ಮುಖ್ಯವಾದುದು ಮತ್ತು ವಿಶಾಲ ಸಮಾಜದಲ್ಲಿ ಹಾಗು ಅದರ ಸವಾಲುಗಳೊಂದಿಗೆ ಮುಖಾಮುಖಿಯಾಗಲು ಬೇಕಾದ ಸಿದ್ಧತೆ ಕೂಡ ಹೌದು. ಈ ಸಿದ್ಧತೆಯು ವಿಶಾಲ ಸಮಾಜದ ಮೇಲೆ ಪರಿಣಾಮವನ್ನು ಬೀರುವ ಕಳಕಳಿಯ ವಿಷಯಗಳೊಂದಿಗೆ ತೊಡಗಿಕೊಳ್ಳುವಂತಿರಬೇಕು. ಚರ್ಚೆಯ ಮೂಲಕ ಇತರರಿಗೆ, ಅಪರಿಚಿತರಿಗೆ, ಭೇಟಿ ಮಾಡದವರು ಮತ್ತು ಅವರ ಸವಾಲುಗಳ ಬಗ್ಗೆ ಕಳಕಳಿ, ಪ್ರಚಲಿತ ವಿದ್ಯಮಾನಗಳ ಬಗ್ಗೆ ಅರಿವು ಹೊಂದಿ, ವಿಭಜಕ ವಿಚಾರಗಳ ಸುತ್ತ ಆಕರ್ಷಿತರಾಗಿ ಪ್ರಲೋಭನೆಗೆ ಒಳಗಾಗುವುದನ್ನು ತಡೆಯುವುದು ಮತ್ತು ಅದನ್ನು ಪ್ರತಿರೋಧಿಸುವುದು, ಅನಾವರಣ–ಗೊಳ್ಳುತ್ತಿರುವ ದೊಡ್ಡ ಬಿಕ್ಕಟ್ಟುಗಳಿಗೆ ಕಳಕಳಿಯಿಂದ ಪ್ರತಿಕ್ರಿಯೆ ನೀಡುವುದು (ಇತ್ತೀಚಿನ ಸಾಂಕ್ರಾಮಿಕ ರೋಗದ ಸಂದರ್ಭದಲ್ಲಿ ಜನರ ಮಹಾ ವಲಸೆಯಂತಹ ಸಂದರ್ಭದಲ್ಲಿ), ಪರಿಸರವನ್ನು ಸಂರಕ್ಷಿಸುವ ಜವಾಬ್ದಾರಿಯುತ ಮಾರ್ಗಗಳನ್ನು ಉತ್ತೇಜಿಸುವುದು, ಭೂ ಅವನತಿಯನ್ನು ತಡೆಯುವುದು, ಸುಸ್ಥಿರ ಸಾಮಗ್ರಿಗಳು, ಉತ್ಪನ್ನಗಳು, ವಿಧಾನಗಳ ಬಳಕೆಗೆ ಒತ್ತಾಯಿಸುವುದು ಮತ್ತು ಕೊಳ್ಳುಬಾಕ ಸಂಸ್ಕೃತಿಯನ್ನು ತಡೆಯುವುದು. ಮೇಲೆ ಪ್ರಸ್ತಾಪಿಸಿದ ಎಲ್ಲವೂ ಸಮುದಾಯದ ಯೋಜನೆಗಳಲ್ಲಿ ಭಾಗವಹಿಸುವುದರ ಮೂಲಕ ಸಾಮಾಜಿಕ ಜವಾಬ್ದಾರಿಗಳ ಬಗ್ಗೆ ಅರಿವನ್ನು ಬೆಳೆಸಿಕೊಂಡು ಒಂದಲ್ಲ ಒಂದು ವಿಧದಲ್ಲಿ ಪ್ರತಿಕ್ರಿಯಿಸುವ ಮಾರ್ಗಗಳಾಗಿವೆ.

**ಒಟ್ಟು ಸಾರಾಂಶ**

ಇವುಗಳಲ್ಲಿ ಬಹಳಷ್ಟನ್ನು ಶಾಲೆಗಳು ಜಾರಿಗೆ ತರುವುದು ಸುಲಭದ ಮಾತಲ್ಲ. ಆದರೆ ಎಲ್ಲರ ಮಟ್ಟವನ್ನೂ ಮೇಲಕ್ಕೇರಿಸಿ ಇಂತಹ ಒಂದು ಪೂರಕ ವಾತಾವರಣವನ್ನು ಸಾಧ್ಯವಾಗಿಸುವ ಪ್ರಯತ್ನವಂತೂ ಮಾಡಬಹುದು. ವಿಶಾಲ ನೆಲೆಯ ಎಲ್ಲ ಹಂತಗಳಲ್ಲಿಯೂ ಮಕ್ಕಳಲ್ಲಿ ಅರಿವು ಮೂಡಿಸುವಂತಹ ಮತ್ತು ಪ್ರಯತ್ನ ಮಾಡಬಹುದಾದ ನಿಟ್ಟಿನಲ್ಲಿ ಶಾಲೆಗಳು ಚರ್ಚೆಯನ್ನು ಆರಂಭಿಸಬಹುದಾಗಿದೆ. ಇದರ ಜೊತೆಗೆ ಶಾಲೆಯಿಂದ ಆಚೆಗೆ ಮತ್ತು ಸಮುದಾಯದಲ್ಲಿ ಕೆಲವು ಕ್ರಮಗಳನ್ನು ಕೈಗೊಳ್ಳುವುದು ಸಾಮಾಜಿಕವಾಗಿ ಜವಾಬ್ದಾರಿಯ ಹಾಗು ಉತ್ತಮ ನಾಗರಿಕನ ದ್ಯೋತಕವಾಗಿದೆ; ತಂಡಗಳು ಮತ್ತು ಗುಂಪುಗಳಲ್ಲಿ ಜಾತ್ಯತೀತ ಸಹಭಾಗಿತ್ವ, ಸಾರ್ವತ್ರಿಕವಾಗಿ ಭ್ರಾತೃತ್ವದ ಭಾವನೆಯನ್ನು ಖಾತ್ರಿಗೊಳಿಸುವುದಕ್ಕಾಗಿ ಪಂಥ–ರಹಿತ ಗೆಳೆತನವನ್ನು ರೂಪಿಸುವುದು ಮುಖ್ಯವಾಗುತ್ತದೆ. ಮಕ್ಕಳು ಕೂಡ ತಂಡದ ಆಟಗಳು, ಶಾಲಾ ಕಾರ್ಯಗಳಲ್ಲಿ ಜಂಟಿಯಾಗಿ ಜವಾಬ್ದಾರಿಗಳನ್ನು ವಹಿಸಿಕೊಳ್ಳುವುದು, ಶಾಲೆಯಲ್ಲಿ ಸಣ್ಣ ಹಾಗು ದೊಡ್ಡ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ವಿವಿಧ ಅಗತ್ಯಗಳ ಮೂಲಕ ಪರಸ್ಪರ ಒಬ್ಬರಿಗೊಬ್ಬರು ಸಹಾಯ ಮಾಡುವುದು ಇತ್ಯಾದಿ ಕೆಲಸಗಳನ್ನು ಮಾಡಬೇಕಾದ ಅಗತ್ಯವಿರುತ್ತದೆ.

ಇವೆಲ್ಲದರ ಹೊರತಾಗಿಯೂ ಮಕ್ಕಳು, ಓದುವುದರ ಮೂಲಕ ಮತ್ತು ಇತರ ಮೂಲಗಳಿಂದ ಹೊಸ ಜ್ಞಾನವನ್ನು ವಿಶ್ವಾಸದಿಂದ ಪಡೆದುಕೊಳ್ಳುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು; ತರ್ಕಬದ್ಧವಾಗಿ ಮತ್ತು ಸ್ಪಷ್ಟತೆಯಿಂದ ಅಭಿಪ್ರಾಯವನ್ನು ವ್ಯಕ್ತಪಡಿಸುವುದು, ತಮ್ಮ ಬಗ್ಗೆ ಧನಾತ್ಮಕವಾದ ಚಿತ್ರವನ್ನು ಹೊಂದಿರಲು; ಅತ್ಯಂತ ಬಲವಾದ ನೈತಿಕ ನೆಲೆಯನ್ನು ಹೊಂದಿರಲು ಮತ್ತು ನಿರ್ಭೀತನಾಗಿರಲು ಪೌರತ್ವದ ತರಬೇತಿಯ ಅಗತ್ಯವಿದೆ. ಪೌರತ್ವ ಎಂದರೆ ಪ್ರತಿಯೊಬ್ಬ ಕಲಿಕಾರ್ಥಿಯೂ ಕೂಡ ತನ್ನ ಪ್ರಾಮುಖ್ಯತೆಯ ಬಗ್ಗೆ ವಿಶ್ವಾಸದಿಂದಿ–ರುವುದು ಮತ್ತು ಆಕೆಯ ಪಾತ್ರದ ಬಗ್ಗೆ ಜವಾಬ್ದಾರಿಯುತಳಾಗಿ ವರ್ತಿಸುವುದು.

ಶಾಲೆಗಳು ಇದನ್ನು ಸಾಧ್ಯವಾಗಿಸುವುದು ಬದ್ಧತೆಯಿಂದ ಕೂಡಿದ ತಂಡವನ್ನು ಅವಲಂಬಿಸಿದೆ. ಈ ತಂಡದಲ್ಲಿ ಕೇವಲ ಶಿಕ್ಷಕರು ಮಾತ್ರವಲ್ಲದೆ ಇಡೀ ಶಾಲೆಯ ಸಿಬ್ಬಂದಿ ಸಕ್ರಿಯವಾಗಿರ–ಬೇಕಾಗುತ್ತದೆ. ಜೊತೆಗೆ ಈ ತಂಡಕ್ಕೆ ಸುರಕ್ಷಿತ ಭಾವನೆ ಬರುವಂತೆ ಮಾಡುವ, ಸ್ವಯಂ ಭರವಸೆಯ ಹಾಗು ಪೌರತ್ವದ ಪ್ರಜ್ಞೆಯನ್ನು ಮೂಡಿಸುವ ವಾತಾವರಣವನ್ನು ರೂಪಿಸಬೇಕಾಗುತ್ತದೆ. ಪೋಷಕರು ಸೇರಿದಂತೆ ಬಾಹ್ಯ ಪ್ರಪಂಚದ ಜೊತೆ ಮಾತುಕತೆ ನಡೆಸಲು ಅವರು ಆತ್ಮವಿಶ್ವಾಸವನ್ನು ಪಡೆಯಬೇಕು. ಇಂತಹ

ಮಾತುಕತೆಗಳು ಸದಾ ಮೇಲೆ ವಿವರಿಸಿದ ಮೌಲ್ಯಗಳಿಗೆ ತಕ್ಕುದಾಗಿ ಸೌಹಾರ್ದಯುತವಾಗಿಯೇ ಇರಲಾರದು ಎಂಬ ಅರಿವೂ ಅವರಿಗಿರಬೇಕು. ಇದಕ್ಕಾಗಿ ಅವರು ಪೌರತ್ವವನ್ನು ಅರ್ಥ ಮಾಡಿಕೊಳ್ಳುವ ಅಗತ್ಯವಿರುತ್ತದೆ, ಶಾಲೆಯ ಸಮಾಜೋ ಸಾಂಸ್ಕೃತಿಕ ವಾತಾವರಣದಲ್ಲಿ ಯಾವಯಾವ ಅಂಶಗಳನ್ನು ಸಾಕಾರಗೊಳಿಸಬಲ್ಲೆವು ಎಂದು ಅರಿಯುವ ಸಾಮರ್ಥ್ಯವನ್ನು ಹೊಂದಿರಬೇಕು ಮತ್ತು ಮುಕ್ತವಾದ ಹಾಗು ಔಚಿತ್ಯಪೂರ್ಣ ಚರ್ಚೆಗೆ ಅವಕಾಶವನ್ನು ನೀಡಲು ತಮ್ಮದೇ ಆದ ಪೂರ್ವಗ್ರಹಗಳು ಮತ್ತು ನಿಷ್ಠೆಗಳನ್ನು ಬದಿಗಿರಿಸಲು ಸಾಧ್ಯವಾಗ–ಬೇಕು. ಇದರಿಂದ ಮಕ್ಕಳು ಮಾನವೀಯ ಮತ್ತು ಸಾಂವಿಧಾನಿಕ ಮೌಲ್ಯಗಳಿಂದ ತುಂಬಿದ ತಮ್ಮದೇ ಆದ ತರ್ಕಬದ್ಧ ಅಭಿಪ್ರಾಯಗಳನ್ನು ರೂಪಿಸಿಕೊಳ್ಳುವುದನ್ನು ಕಲಿಯುತ್ತಾರೆ.

**ಉಲ್ಲೇಖಗಳು**


National Education Policy 2020, Department of Education Government of India, Delhi

National Curriculum Framework 2005, NCERT

Dewan Hriday Kant, (2017) Curricula: What can the school do in the life of the child, Voices of Teachers and Teacher Educators, 8-15, NCERT, August 2017, New Delhi





**ಹೃದಯಕಾಂತ್ ದಿವಾನ್** ಅವರು ಪ್ರಸ್ತುತ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಭಾಷಾಂತರ ಉಪಕ್ರಮದೊಂದಿಗೆ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ಏಕಲವ್ಯ ಎಂಬ ಗುಂಪಿನ ಸ್ಥಾಪಕ ಸದಸ್ಯರು ಮತ್ತು ಉದಯಪುರದ ವಿದ್ಯಾಭವನ ಸೊಸೈಟಿಯ ಶೈಕ್ಷಣಿಕ ಸಲಹೆಗಾರರು. ಕಳೆದ ನಲವತ್ತು ವರ್ಷಗಳ ಅವಧಿಯಲ್ಲಿ ಅವರು ಶಿಕ್ಷಣ ಕ್ಷೇತ್ರದಲ್ಲಿ ನಾನಾ ರೀತಿಯ ಜವಾಬ್ದಾರಿಗಳನ್ನು ನಿಭಾಯಿಸಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ಶೈಕ್ಷಣಿಕ ಆವಿಷ್ಕಾರಗಳು ಮತ್ತು ರಾಜ್ಯ ಶೈಕ್ಷಣಿಕ ಸ್ವರೂಪಗಳ ಪರಿವರ್ತನೆಯ ಪ್ರಯತ್ನದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಅವರನ್ನು ಈ ಮಿಂಚಂಚೆ ಮೂಲಕ ಸಂಪರ್ಕಿಸಬಹುದು: hardy@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಲತಾ ಕೆ.ಸಿ.**

# ಪಠ್ಯಪುಸ್ತಕಗಳ ಮೂಲಕ ಪೌರತ್ವದ ನಿರ್ಮಾಣ

ರೂಪಮಂಜರಿ ಹೆಗ್ಡೆ

ಪೌರ ನೀತಿ, ಪೌರತ್ವ ಶಿಕ್ಷಣ ಅಥವಾ ಸಕ್ರಿಯ ನಾಗರಿಕತ್ವಕ್ಕಾಗಿ ಶಿಕ್ಷಣವೆಂದು ಜಗತ್ತಿನ ವಿವಿಧೆಡೆ ಕರೆಯಲ್ಪಡುವ ಪೌರತ್ವ ಶಿಕ್ಷಣವು, ಪ್ರಜಾಸತ್ತಾತ್ಮಕ ಸಮಾಜದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದಕ್ಕಾಗಿ ಸಿದ್ಧಗೊಳಿಸಲು ಮುಖ್ಯವೆಂದು ಪರಿಗಣಿಸಲಾದ ನಿರ್ದಿಷ್ಟ ಜ್ಞಾನ, ಕೌಶಲಗಳು ಹಾಗು ಮನೋಧರ್ಮವನ್ನು ವಿದ್ಯಾರ್ಥಿಗಳಲ್ಲಿ ಮೈಗೂಡಿಸುವ ಗುರಿಯನ್ನು ಹೊಂದಿರುತ್ತದೆ. ಇದು ಕೆಲವೊಮ್ಮೆ ಎಳೆಯ ಮಕ್ಕಳಲ್ಲಿ ತಮ್ಮ ಕರ್ತವ್ಯ, ಜವಾಬ್ದಾರಿಗಳು ಮತ್ತು ಹಕ್ಕುಗಳ ಬಗ್ಗೆ ಅರಿವು ಮೂಡಿಸುವ ಮೂಲಕ ರಾಷ್ಟ್ರೀಯ ಅಭಿವೃದ್ಧಿ ಹಾಗು ರಾಷ್ಟ್ರ ನಿರ್ಮಾಣಕ್ಕೆ ನೆರವಾಗುವಂತೆ ಮಾಡುತ್ತದೆ. ಕೆಲವು ಎನ್‌ಸಿಇಆರ್‌ಟಿ ಪೌರನೀತಿಯ ಪಠ್ಯಪುಸ್ತಕಗಳು (1975–2000), ಉದಾಹರಣೆಗೆ, ವಿದ್ಯಾರ್ಥಿಯು ನಾಗರಿಕರಿಗೆ ಅಗತ್ಯವಾದ ಗುಣಗಳನ್ನು ಬೆಳೆಸಿಕೊಳ್ಳುವಂತೆ ನಿರಂತರವಾಗಿ ನೆನಪಿಸುತ್ತವೆ. ತಾರ್ಕಿಕ ವರ್ತನೆ, ಸಹಕಾರ ಮತ್ತು ಸಹ ಮಾನವರ ಬಗ್ಗೆ ಕಳಕಳ ವಹಿಸುವ ಮೂಲಕ ವಿಸ್ತೃತ ನೆಲೆಯಲ್ಲಿ ತನ್ನ ಕುಟುಂಬ, ಸಮುದಾಯ ಹಾಗು ಸಮಾಜಕ್ಕೆ ಆತನ/ಆಕೆಯ ಬಾಧ್ಯತೆಯನ್ನು ತೀರಿಸಬೇಕೆಂದು ಹೇಳಲಾಗುತ್ತದೆ.

ಆದರೆ, ವ್ಯಕ್ತಿಯೊಬ್ಬ ನಾಗರಿಕನಾದರೆ ಮಾತ್ರ ಸಾಲದು. ಬದಲಾಗಿ, ಆತ/ಆಕೆ ಉತ್ತಮ ನಾಗರಿಕನಾಗುವಂತೆ ಪ್ರೋತ್ಸಾಹಿಸಬೇಕು (ಎನ್‌ಸಿಇಆರ್‌ಟಿ 1988:49)– ಕೆಲವು ನಿರ್ದಿಷ್ಟ ಗುಣಗಳನ್ನು ಹೊಂದುವುದರ ಮೂಲಕ 'ನೆಲದ ಕಾನೂನನ್ನು ಗೌರವಿಸುವುದು': ದೇಶದ ಸಮಸ್ಯೆಗಳು ಮತ್ತು ಘಟನೆಗಳ ಬಗ್ಗೆ ಉತ್ತಮ ಮಾಹಿತಿ ಹೊಂದುವುದು (ಎನ್‌ಸಿಇಆರ್‌ಟಿ, 2003: 186) ಹಾಗು ದೇಶದ ಹಿತಕ್ಕೆ ಆದ್ಯತೆ ನೀಡುವ ಮೂಲಕ ದೇಶಕ್ಕೆ ಉಪಯುಕ್ತ ಆಗಬೇಕು. ವಿದ್ಯಾರ್ಥಿಗಳು 'ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳ ಬಗ್ಗೆ ಅರಿವು ಹೊಂದಿರಬೇಕು' ಎಂದು ಹೇಳಿದರೂ, ವಿದ್ಯಾರ್ಥಿಗಳು ಬೆಳೆಸಿ–ಕೊಳ್ಳಬೇಕೆಂದು ನಿರೀಕ್ಷಿಸಲಾದ ಕರ್ತವ್ಯಗಳು ಹಾಗು ಜವಾಬ್ದಾರಿಗಳ ಬಗ್ಗೆ ಈ ಪಠ್ಯಪುಸ್ತಕಗಳು ಸ್ಪಷ್ಟವಾಗಿ ಪ್ರಾಧಾನ್ಯ ನೀಡುತ್ತವೆ.

ಆದರೆ, ಪ್ರಜಾಪ್ರಭುತ್ವದೊಳಗೆ ಪೌರತ್ವ ಎನ್ನುವುದು ಕರ್ತವ್ಯ ನಿರ್ವಹಣೆ ಮಾತ್ರವಲ್ಲ: ಸಂವಿಧಾನವು ಪ್ರತಿ ಪ್ರಜೆಗೂ ಖಾತ್ರಿಗೊಳಿಸಿದ, ಆತನ ವರ್ಗ, ಲಿಂಗ, ಧರ್ಮ, ಜಾತಿ ಹಾಗು ಜನಾಂಗೀಯತೆಯ ಹೊರತಾಗಿಯೂ, ನೀಡಲಾದ ಶಾಸನಾತ್ಮಕ ಮಾನ್ಯತೆಯ ಪ್ರಶ್ನೆಯಾಗಿದ್ದು, ಇದು ಇತರರೊಂದಿಗೆ ಗುರುತಿಸಿಕೊಂಡು ಒಳಗೊಳ್ಳುವ ಭಾವನೆಗಳನ್ನು ಅಭಿವೃದ್ಧಿ ಪಡಿಸಬೇಕು (ಜಯಲ್ 2013:2). ಭಿನ್ನ ರೀತಿಯಲ್ಲಿ ವಿನ್ಯಾಸಗೊಳಿಸಿದ ಪಠ್ಯಪುಸ್ತಕವೊಂದು ರಾಷ್ಟ್ರ, ನಾಗರಿಕತ್ವ ಮತ್ತು ಅಸ್ಮಿತೆ ಕುರಿತ ಕಲ್ಪನೆಗಳಲ್ಲಿ ಸ್ವಲ್ಪಮಟ್ಟಿನ ಬದಲಾವಣೆ ತರಬಹುದೇ?

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005 (ಎನ್‌ಸಿಎಫ್, 2005) ಕ್ರಾಂತಿಕಾರಕ ಸ್ಥಿತ್ಯಂತರಗಳನ್ನು ಪರಿಚಯಿಸಿದೆ ಎಂದು ತಜ್ಞರಿಂದ ಶ್ಲಾಘಿಸಲ್ಪಟ್ಟಿದೆ (ಬಾತ್ರ 2010–13). ಎನ್‌ಸಿಎಫ್‌ನಲ್ಲಿ ಪೌರತ್ವ ಶಿಕ್ಷಣವನ್ನು ಮಾನವಹಕ್ಕುಗಳು ಮತ್ತು ವಿಮರ್ಶಾತ್ಮಕ ಬೋಧನಾ ವಿಧಾನದ ದೃಷ್ಟಿಕೋನದಲ್ಲಿ ನೆಲೆಸಲಾಗಿದ್ದು, ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳ ದೃಷ್ಟಿಕೋನವನ್ನು ಒಳಗೊಳ್ಳಲು ಸಮಾನತೆ ಹಾಗು ಸಾಮಾಜಿಕ ನ್ಯಾಯದ ಸಂಗತಿಗಳನ್ನು ಸೇರ್ಪಡೆಗೊಳಿಸಲಾಗಿದೆ ಎಂದು ವಾದಿಸಲಾಗುತ್ತದೆ. 'ಭಾರತ ದೇಶವನ್ನು ಕಲ್ಪಿಸಿಕೊಳ್ಳುವ ವಿಭಿನ್ನ ಮಾರ್ಗಗಳು' (Multiple ways of imagining the Indian nation') ಮತ್ತು ಲಿಂಗ ಕಾಳಜಿಗಳಿಗೆ ಒತ್ತು ನೀಡುವ ಪ್ರಯತ್ನಗಳನ್ನು ಕೂಡ ನಡೆಸಲಾಗಿದೆ.

ಈ ಲೇಖನವು ಪರಿಸರ ಅಧ್ಯಯನ (Environmental Studies - EVS) ಮತ್ತು ಸಮಾಜವಿಜ್ಞಾನ ಪಠ್ಯಪುಸ್ತಕಗಳಾದ ಲುಕ್ಕಿಂಗ್ ಅರೌಂಡ್ (ತರಗತಿ 3–5) ಹಾಗು ಸೋಷಿಯಲ್ ಆಂಡ್ ಪೊಲಿಟಿಕಲ್ ಲೈಫ್ (ತರಗತಿ 6–8) ಸರಣಿಯನ್ನು ಸಂಕ್ಷಿಪ್ತವಾಗಿ ಪರಿಶೀಲಿಸಲಿದ್ದು, ಇಂಥ ಹೊಸ ದೃಷ್ಟಿಕೋನಗಳಿಗೆ ಯಾವ ಪ್ರಮಾಣದ ನಿರ್ದಿಷ್ಟ ರೂಪವನ್ನು ಕೊಡಲಾಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಿದೆ.

ಪಠ್ಯಪುಸ್ತಕಗಳಲ್ಲಿ ಪ್ರತಿಫಲಿಸುವ ಪಠ್ಯಕ್ರಮದ ಬದಲಾವಣೆಯು ಶಾಲಾ ಕೊಠಡಿಯ ಬೋಧನಾ ವಿಧಾನದ ಪ್ರಕ್ರಿಯೆಯನ್ನು ಪರಿಣಾಮಕಾರಿಯಾಗಿ ಬದಲಿಸಲು ಸಮರ್ಥವಾದಾಗ ಮಾತ್ರ ಅರ್ಥಪೂರ್ಣವೆನಿಸಲಿವೆ. ಇದು ಶಿಕ್ಷಕರ ಸಕ್ರಿಯ ಮಧ್ಯ–ಪ್ರವೇಶದಿಂದ ಮಾತ್ರ ಸಾಧ್ಯವಾಗಲಿದೆ. ಈ ಲೇಖನವು ಭವಿಷ್ಯದ ನಾಗರಿಕರನ್ನು ಪೋಷಿಸುವಲ್ಲಿ ಶಿಕ್ಷಕರು ಹೇಗೆ ಪ್ರಮುಖ ಪಾತ್ರ ವಹಿಸಬಲ್ಲರು ಎನ್ನುವುದನ್ನು ಪರಿಶೀಲಿಸಲಿದೆ.

**ದೇಶವನ್ನು ಕಲ್ಪಿಸಿಕೊಳ್ಳುವುದು:**

ಪಠ್ಯಪುಸ್ತಕಗಳಲ್ಲಿ ಪೌರತ್ವದ ನಿರ್ಮಿತಿಯು ಸಾಮಾನ್ಯವಾಗಿ ದೇಶವನ್ನು ಹೇಗೆ ಕಲ್ಪಿಸಿಕೊಳ್ಳಲಾಗುತ್ತದೆ ಎಂಬುದನ್ನು ಪ್ರತಿಫಲಿಸುತ್ತದೆ. ಈ ಕಲ್ಪನೆಯಲ್ಲಿ ಯಾರನ್ನು ಮತ್ತು ಹೇಗೆ ಕಾನೂನುಬದ್ಧ ಪೌರರು ಎಂದು ಸೇರ್ಪಡೆಗೊಳಿಸಿ–ಕೊಳ್ಳಲಾಗುತ್ತದೆ? ಯಾರನ್ನು ಹೊರಗಿಡಲಾಗುತ್ತದೆ? ಈ ಪ್ರಶ್ನೆಗಳು ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಬೇಡುತ್ತವೆ. ಶಾಲಾ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ಎನ್‌ಸಿಎಫ್‌ಎಸ್‌ಸಿ)– 2000 ಮತ್ತು ಅದನ್ನು ಅನುಸರಿಸಿದ ಇಂಗ್ಲಿಷ್ ಹಾಗು ಸಮಾಜವಿಜ್ಞಾನದ ಪಠ್ಯಪುಸ್ತಕಗಳು ಬಹುಸಂಖ್ಯಾತರ ಪರವಾದ ಮತ್ತು ಪಿತೃಪ್ರಧಾನ ರಾಷ್ಟ್ರೀಯ ಅಸ್ಮಿತೆಯನ್ನು ಪ್ರಚುರಗೊಳಿಸಿದ್ದರಿಂದ, ಅವು ಭಾರತೀಯ ಸಮಾಜದ ಬಹುತ್ವದ ಗುಣವೈಶಿಷ್ಟ್ಯವನ್ನು ಶಿಥಿಲಗೊಳಿಸಿವೆ ಎಂಬ ತೀವ್ರ ಟೀಕೆಗೆ ಗುರಿಯಾದವು. ಅದಕ್ಕೆ ವ್ಯತಿರಿಕ್ತವಾಗಿ ಎನ್‌ಸಿಎಫ್–2005 "ನಮ್ಮ ಸಮಾಜದಲ್ಲಿ ಅಂತರ್ಗತವಾಗಿರುವ ಸಾಂಸ್ಕೃತಿಕ ಬಹುತ್ವಕ್ಕೆ ಪೂರಕವಾಗಿ ಪ್ರತಿಕ್ರಿಯಿಸುವ, ಆ ಮೂಲಕ 'ಸದೃಢ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಸುಸ್ಥಿರಗೊಳಿಸುವ' ಶಿಕ್ಷಣ ವ್ಯವಸ್ಥೆಯನ್ನು ಪ್ರಸ್ತಾಪಿಸುತ್ತದೆ. ಅದು ಜಾತ್ಯತೀತತೆ, ಸರ್ವಸಮಾನತೆ ಬಹುತ್ವ, ಹಾಗು ಸಾಮಾಜಿಕ ನ್ಯಾಯವನ್ನು ಆಧರಿಸಿದ ರಾಷ್ಟ್ರೀಯ ಅಸ್ಮಿತೆಯನ್ನು ಪುನರುಚ್ಚರಿಸುತ್ತದೆ.

ಲುಕಿಂಗ್ ಅರೌಂಡ್ (ಎಲ್ಎ)(ii) ಹಾಗು ಸೋಷಿಯಲ್ ಆಂಡ್ ಪೊಲಿಟಿಕಲ್ ಲೈಫ್ (ಎಸ್‌ಪಿಎಲ್)(ii), ಈ ಸರಣಿಯ ಸೂಕ್ಷ್ಮವಾದ ಪರಿಶೀಲನೆಯಿಂದ ವಿವಿಧ ಪ್ರಾಂತ್ಯ, ಸಮಾಜೋ ಆರ್ಥಿಕ ಹಾಗು ಸಾಂಸ್ಕೃತಿಕ ಸನ್ನಿವೇಶಗಳಲ್ಲಿ ವಾಸಿಸುವ ಜನರನ್ನುಳ್ಳ ಸಮಾಜವು ಕಾಣಿಸುವಂತೆ ಮಾಡುತ್ತದೆ. ಇಲ್ಲಿರುವ ಜನರು ಮುಂಬೈಯಂಥ ಮೆಟ್ರೋ (ಶಾಂತಿಯ ಕಥೆ, ಎಸ್‌ಪಿಎಲ್ iii:67), ಆಂಧ್ರಪ್ರದೇಶದ ಕರ್ನೂಲ್‌ನಂಥ ಅರೆ ನಗರ ಪ್ರದೇಶ (ಸ್ವಪ್ನಾಳ ಕತೆ, ಎಸ್‌ಪಿಎಲ್ 11:105)ದಿಂದ ಹಿಡಿದು ಮಧ್ಯಪ್ರದೇಶದ ಗ್ರಾಮೀಣ ಒಳನಾಡು (ತವಾ ಮತ್ಸ್ಯ ಸಂಘದ ಕಥೆ, ಎಸ್‌ಪಿಎಲ್ II:118) ಹಾಗು ಒಡಿಶಾದ ಆದಿವಾಸಿ ಪ್ರದೇಶದ (ದಾದೂರ ಕತೆ, ಎಸ್‌ಪಿಎಲ್ III:81–82)ದಂಥ ದೇಶದ ವಿವಿಧ ಭಾಗಗಳಿಗೆ ಸೇರಿರುತ್ತಾರೆ. ಪ್ರಾದೇಶಿಕ ಗುಣವೈಶಿಷ್ಟ್ಯಗಳಾದ ಆಹಾರಾ-ಭ್ಯಾಸ, ಉಡುಗೆತೊಡುಗೆ ಹಾಗು ಮನೆ ನಿರ್ಮಾಣದಲ್ಲಿ ಬಳಕೆಯಾದ ವಾಸ್ತುಶಿಲ್ಪ ಪದ್ಧತಿಗಳು ಕೂಡ ಚಿತ್ರಣಗೊಂಡಿತ್ತು. ಉದಾಹರಣೆಗೆ, ಫುಡ್ ವಿ ಈಟ್ (ಎಲ್ಎ I)ನಲ್ಲಿ ಕಾಶ್ಮೀರದಿಂದ ಕೇರಳದವರೆಗೆ ಭಾರತದ ನಾನಾ ಭಾಗಗಳ ಜನರು ಸೇವಿಸುವ ವೈವಿಧ್ಯಮಯ ಆಹಾರದ ಕುರಿತ ಪಠ್ಯ ಇದ್ದರೆ, ಅದೇ ಪುಸ್ತಕದ ಇನ್ನೊಂದು ಪಾಠ 'ಎ ಹೌಸ್ ಲೈಕ್ ದಿಸ್'ನಲ್ಲಿ ಭೂಪೇನ್ (ಅಸ್ಸಾಂ), ನಸೀಂ (ಶ್ರೀನಗರ), ಚಮೇಲಿ (ಮನಾಲಿ), ಕಾನ್ಷಿರಾಂ (ರಾಜಸ್ಥಾನ) ಮತ್ತು ಮಿಥಾಲಿ (ದೆಹಲಿ) ತಮ್ಮ ಸುತ್ತಲಿನ ಪರಿಸರಕ್ಕೆ ಅನುಗುಣವಾಗಿ ತಮ್ಮ ಮನೆಗಳ ವಿನ್ಯಾಸ ಹೇಗೆ ಬದಲಾಗಿದೆ ಎನ್ನುವ ಅಂಶಗಳನ್ನು ಹಂಚಿಕೊಳ್ಳುವುದನ್ನು ಕೊಡಲಾಗಿದೆ ಬಹುತೇಕ ಪ್ರಕರಣಗಳಲ್ಲಿ ಮುದ್ರಿತ ಕಥನವು ಸೂಕ್ತ ವರ್ಣಮಯ ಚಿತ್ರಕಗಳನ್ನು ಒಳಗೊಂಡಿದ್ದು, ಮಕ್ಕಳು ಪಠ್ಯದ ಮಾಹಿತಿಯನ್ನು ದೃಶ್ಯೀಕರಿಸಿಕೊಳ್ಳಲು ನೆರವಾಗಿವೆ..

ಈ ಪಠ್ಯಪುಸ್ತಕಗಳ ಸಮಾಜೋ ಸಾಂಸ್ಕೃತಿಕ ಹರಹು ಕೂಡ ಬಹುಧಾರ್ಮಿಕವಾಗಿದ್ದದು.. ಮುಸ್ಲಿಂ ಮಹಿಳಾ ಧೋಬಿ ಅನ್ವಾರಿ, (ಎಲ್ಎ III:26), ಮನೆ ಕೆಲಸದ ಕ್ರೈಸ್ತ ಮಹಿಳೆ ಮೆಲನಿ (ಎಸ್‌ಪಿಎಲ್ II:49) ಮತ್ತು ಸಿಖ್ ಮಧ್ಯಮ ಮೇಲ್ವರ್ಗದ ಗೃಹಿಣಿ ಜಸ್‌ಪ್ರೀತ್ (ಎಸ್ಎಎಲ್ II:47) ಹೀಗೆ ವಿವಿಧ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಸದಸ್ಯರ ಉಪಸ್ಥಿತಿಯಲ್ಲಿ ಇದನ್ನು ಕಾಣಬಹುದು. ಆ ಮೂಲಕ ಭಾರತದ ಸಮಾಜೋ ಸಾಂಸ್ಕೃತಿಕ ಹರಹು ಮುಖ್ಯವಾದ ಹಾಗು ಏಕರೂಪವಾದದ್ದು ಎನ್ನುವ ಸಂಕುಚಿತತೆಗೆ ಈ ಪಠ್ಯಪುಸ್ತಕಗಳು ಸವಾಲು ಎಸೆಯುತ್ತವೆ. ಬದಲಾಗಿ, ಅದು ಭಾರತದ ಬಹುತ್ವ, ವೈವಿಧ್ಯಮಯವಲ್ಲದ ಹಾಗು ಬಹುಸಾಂಸ್ಕೃತಿಕ ಗುಣವೈಶಿಷ್ಟ್ಯವನ್ನು ಎತ್ತಿಹಿಡಿಯುತ್ತವೆ.

**ಸಾಂಸ್ಕೃತಿಕ ವೈವಿಧ್ಯತೆ ಮತ್ತು ಆರ್ಥಿಕ ಅಸಮಾನತೆ:**

ಹಿಂದಿನ ಕೆಲವು ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳು (1975–2004) ಸಾಂಸ್ಕೃತಿಕ ವೈವಿಧ್ಯತೆಯನ್ನು ಸಾಮರ್ಥ್ಯದ ಮೂಲ ಎಂದಷ್ಟೇ ಚಿತ್ರಿಸುವ ಮೂಲಕ ಆರ್ಥಿಕ ಅಸಮಾನತೆಗಳು ಮತ್ತು ಸಮಾಜೋಸಾಂಸ್ಕೃತಿಕ ಅಸಂಗತತೆಯನ್ನು ಪರಿಗಣಿಸುತ್ತಿರಲಿಲ್ಲ. ಆದರೆ, ಎಲ್ಎ ಮತ್ತು ಎಸ್‌ಪಿಎಲ್ ಸರಣಿಗಳು ವೈವಿಧ್ಯತೆಯ ಸಮಸ್ಯಾತ್ಮಕ ಸ್ವರೂಪವನ್ನು ಬಿಂಬಿಸಿದವು. ಅದರ ಪ್ರಯೋಜನಗಳನ್ನು ಗುರುತಿಸುತ್ತಲೇ, ಸಮಾಜೋ ಆರ್ಥಿಕ ವ್ಯತ್ಯಾಸಗಳಿಂದ ಮೂಡುವ ವೈವಿಧ್ಯತೆಯು ಹೇಗೆ ಅಸಮಾನತೆ ಹಾಗು ತಾರತಮ್ಯಕ್ಕೆ ದಾರಿ ಮಾಡಿಕೊಡುತ್ತದೆ ಎನ್ನುವುದನ್ನು ಗುರುತಿಸಿತು. ಉದಾಹರಣೆಗೆ, ಫುಡ್ ವಿ ಈಟ್ (ಎಲ್ಎ I:36–42)ನ ಪಾಠವೊಂದು ವೈವಿಧ್ಯಮಯ ಹಿನ್ನೆಲೆಯ ಮಕ್ಕಳು ತಾವು ರಾತ್ರಿ ಏನು ತಿಂದೆವು ಎಂದು ಚರ್ಚೆ ಮಾಡುತ್ತಿರುವ ಚಿಂತನೆಗೆ ಹಚ್ಚುವಂಥ ದೃಶ್ಯಾವಳಿಯಿಂದ ಆರಂಭವಾಗುತ್ತದೆ. ಬೇರೆಬೇರೆ ಮಕ್ಕಳು 'ಪೂರಿ, ಪಾಯಸ, ಆಮ್ಲೆಟ್' ಅಥವಾ 'ಮೀನು' ಅಥವಾ 'ಬೇಳೆಸಾರು ಮತ್ತು ಅನ್ನ' ಎಂದು ಹೇಳುತ್ತಿರುವಾಗ, ಮಗುವೊಂದು ತನ್ನ ತಾಯಿ ಕೆಲಸ ಮಾಡುವ ಮನೆಯಿಂದ ತಂದ ಇತರರು ತಿನ್ನದೆ ಉಳಿಸಿದ ಶಾವಿಗೆಯನ್ನು ಇಷ್ಟಪಟ್ಟು ತಿಂದೆ ಎಂದು ಹೇಳಿಕೊಂಡಿತು. ಇನ್ನೊಂದು ಮಗು ನಮ್ಮ ಮನೆಯಲ್ಲಿ 'ಅಡುಗೆ ಮಾಡುವುದಿಲ್ಲ' ಎಂದಿತು. ಚರ್ಚೆಯು ಸಾಂಸ್ಕೃತಿಕ ವೈವಿಧ್ಯತೆ ಮಾತ್ರವಲ್ಲದೆ, ಸಮಾಜದಲ್ಲಿ ಚಾಲ್ತಿಯಲ್ಲಿರುವ ತೀವ್ರ ಆರ್ಥಿಕ ಅಸಮಾನತೆಯ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆ. ಚಿತ್ರಗಳ ಬಳಿಕ ಆಲೋಚನೆಯನ್ನು ಕೆದಕುವ ಪ್ರಶ್ನೆಗಳು ಸರಣಿಯೋಪಾದಿಯಲ್ಲಿ ಕೇಳಲ್ಪಟ್ಟು, ಆ ಮೂಲಕ ವಿಷಯದೊಂದಿಗೆ ಗಾಢವಾಗಿ ತೊಡಗಿಕೊಳ್ಳುವ ಅವಕಾಶವು ಸೃಷ್ಟಿಯಾಗುತ್ತದೆ.

- ಚಿತ್ರದಲ್ಲಿ ಒಂದು ಮಗು ತನ್ನ ಮನೆಯಲ್ಲಿ ಅಡುಗೆ ಮಾಡಿರಲಿಲ್ಲ ಎಂದಿರುವುದನ್ನು ನೀವು ಗಮನಿಸಿರಬಹುದು. ಇದಕ್ಕೆ ಕಾರಣ ಏನಿರಬಹುದು?
- ಒಂದು ದಿನ ನೀವು ಹಸಿದಿರುವಾಗ, ತಿನ್ನಲು ಏನೂ ಸಿಗದ ಪರಿಸ್ಥಿತಿ ಎದುರಿಸಿದ್ದೀರಾ? ಹೌದು ಎಂದಾದರೆ, ಏಕೆ?

ಗ್ರಾಮ ಮತ್ತು ನಗರದ ಸ್ಥಿತಿಗತಿಗಳನ್ನು ಸರಳ, ಸುಂದರ ಪ್ರದೇಶ ಎಂದಾಗಲೀ ಇಲ್ಲವೇ ಹಲವು ಸಮಸ್ಯೆಗಳಿಂದ ಪೀಡಿತವಾದವು ಎನ್ನುವ ಇಬ್ಬಗೆಯ ಮಾದರಿಯಾಗಿ ನೋಡುವ ಬದಲು, ಈ ಪಠ್ಯಪುಸ್ತಕಗಳು ಅವುಗಳನ್ನು ವರ್ಗ ಮತ್ತು ಜಾತಿಯ ಶ್ರೇಣೀಕರಣವಿರುವ, ನಾನಾ ಹಿತಾಸಕ್ತಿಗಳುಳ್ಳವರು ತಮ್ಮ ಪಾಲನ್ನು ಪಡೆದುಕೊಳ್ಳಲು ಸಂಧಾನ ಹಾಗು ಸಂಘರ್ಷ ನಡೆಸುವ ಸ್ಪರ್ಧಾತ್ಮಕ ಪ್ರದೇಶ ಪರಿಗಣಿಸುತ್ತವೆ. ಎಲ್ಎ ಮತ್ತು ಎಸ್‌ಪಿಎಲ್ ಸರಣಿಯಲ್ಲಿರುವ ಜನರು ನಗರ ಇಲ್ಲವೇ ಗ್ರಾಮೀಣ ಪ್ರದೇಶದವರಾಗಿರಲೀ, ನಾನಾ ಸಾಮಾಜಿಕ ಅಂತಸ್ತಿಗೆ ಸೇರಿದವರಾಗಿದ್ದು, ಬೇರೆಬೇರೆ ಜೀವನಾಧಾರ ಮೂಲ ಹಾಗು ಜೀವನಮಟ್ಟಗಳನ್ನು ಹೊಂದಿರುತ್ತಾರೆ ಎಂದು ತೋರಿಸಲಾಗಿದೆ. ಎರಡೂ ಕಡೆ ಸಾಮಾನ್ಯ ಜನರು ತಮ್ಮ ಘನತೆಯ ಬದುಕಿಗಾಗಿ ಮೂಲಭೂತ ಹಕ್ಕನ್ನು ಪಡೆದುಕೊಳ್ಳಲು ಹೇಗೆ ಕಷ್ಟಪಡುತ್ತಾರೆ ಎನ್ನುವುದನ್ನು ಕೂಡ ಈ ಪಠ್ಯಪುಸ್ತಕಗಳಲ್ಲಿ ಎತ್ತಿ ತೋರಿಸಲಾಗಿದೆ.

ಉದಾಹರಣೆಗೆ: ಎಲ್ಎ ಮತ್ತು ಎಸ್‌ಪಿಎಲ್ ಸರಣಿಯಲ್ಲಿ ಬರುವ ಕೃಷಿಕ ಸಮುದಾಯಗಳು, ಉದಾಹರಣೆಗೆ, ಶ್ರೀಮಂತ ಜಮೀನುದಾರ (ರಾಮಲಿಂಗಂ, ಎಸ್‌ಪಿಎಲ್ I:71), ಸಣ್ಣ ಹಿಡುವಳಿದಾರರು (ಶೇಖರ್, ಎಸ್‌ಪಿಎಲ್ I:70) ಮತ್ತು ಜೀವನಕ್ಕೆ ಅಗತ್ಯವಿರುವಷ್ಟನ್ನು ದುಡಿಯಲು ಹೆಣಗಾಡುತ್ತಿರುವ ಭೂರಹಿತ ಕಾರ್ಮಿಕರ ಬದುಕು (ಧನು, ಎಲ್ಎ II:200: ತುಳಸಿ, ಎಸ್‌ಪಿಎಲ್ I:68), ತೀವ್ರವಾಗಿ ವಿಭಜಿತಗೊಂಡಿವೆ. ಗ್ರಾಮೀಣ ಆರ್ಥಿಕತೆಯು ನಾನಾ ಕೃಷಿಯೇತರ ಚಟುವಟಿಕೆಗಳಾದ ಮೀನುಗಾರಿಕೆ, ನೇಕಾರಿಕೆ, ಪಶುಸಾಕಣೆ ಹಾಗು ಲೇವಾದೇವಿ ವ್ಯವಹಾರ (ಅಧ್ಯಾಯ 22, ಎಲ್ಎ II: ಅಧ್ಯಾಯ 8, ಎಸ್‌ಪಿಎಲ್ 1)ವನ್ನು ಆಧರಿಸಿದೆ ಎಂದು ತೋರಿಸಲಾಗಿದೆ. ರೈತರಂಥ ಗ್ರಾಮೀಣರು ಎದುರಿಸುವ ಸಂಕಷ್ಟಗಳನ್ನು ಎತ್ತಿಹಿಡಿಯಲಾಗಿದೆ (ಶೇಖರ್ ಎಸ್‌ಪಿಎಲ್ I:70 ಬೆಳೆ ವೈಫಲ್ಯ, ಸಾಲ ಮತ್ತು ಆತ್ಮಹತ್ಯೆ).

ಎಲ್ಎ ಮತ್ತು ಎಸ್‌ಪಿಎಲ್ ಸರಣಿಯಲ್ಲಿನ ನಗರ ಪ್ರದೇಶಗಳು ಗಗನಚುಂಬಿ ಕಟ್ಟಡಗಳು, ವೇಗದ ವಾಹನ ಸಂಚಾರ, ಐಷಾರಾಮಿ ಆಸ್ಪತ್ರೆಗಳು ಹಾಗು ಸುವ್ಯವಸ್ಥಿತ ಮಾಲ್‌ಗಳು ಮಾತ್ರವನ್ನಲ್ಲದೆ, ಕೂಲಿ, ಕೆಲಸಗಾರರ ನೈರ್ಮಲ್ಯರಹಿತ ವಸತಿ ಸಮುದಾಯಗಳು,

ತುಂಬಿತುಳುಕುವ ಸರ್ಕಾರಿ ಆಸ್ಪತ್ರೆಗಳು ಮತ್ತು ರಸ್ತೆ ಬದಿಯ ತೆರೆದ ಮಾರುಕಟ್ಟೆಗಳನ್ನು ಸಹ ಒಳಗೊಂಡಿರುತ್ತವೆ. ನಗರ ಪ್ರದೇಶದಲ್ಲಿ ನಾನಾ ಸಮಾಜೋಆರ್ಥಿಕ ಸ್ತರಗಳಿಗೆ ಸೇರಿದವರು ಇರುತ್ತಾರೆ. ಇಲ್ಲಿ ಅತ್ಯಂತ ಶ್ರೀಮಂತ ಉದ್ಯಮಿಗಳು, ಮೇಲ್-ಮಧ್ಯಮ ಹಾಗು ಮಧ್ಯಮ ವರ್ಗದ ಸಲಹೆಗಾರರು ಮತ್ತು ಸರ್ಕಾರಿ ನೌಕರರು ಕೆಳ ಮಧ್ಯಮ ವರ್ಗದ ಮತ್ತು ಶ್ರಮಿಕ ವರ್ಗಗಳಾದ ಕಾರ್ಖಾನೆ ಕಾರ್ಮಿಕರು, ರಸ್ತೆ ಬದಿ ವ್ಯಾಪಾರಿಗಳು, ಮನೆ ಕೆಲಸದವರು, ಕುಶಲಕರ್ಮಿಗಳು, ರಿಕ್ಷಾ ಚಾಲಕರು, ದಿನಗೂಲಿಗಳು, ವಸತಿರಹಿತ ಹಾಗು ಬೀದಿಯಲ್ಲಿ ವಾಸಿಸುವ ಮಕ್ಕಳೊಟ್ಟಿಗೆ ಸಹಜೀವನ ನಡೆಸುತ್ತಾರೆ ಎಂದು ತೋರಿಸಲಾಗಿದೆ. ನಗರ ಪ್ರದೇಶದಲ್ಲಿರುವವರು –ನೈರ್ಮಲ್ಯರಹಿತ ಜೀವನ ಸ್ಥಿತಿ (ಕಾಂತ, ಎಸ್‌ಪಿಎಲ್ II:4–5), ನೀರು ಮತ್ತಿತರ ಮೂಲಸೌಲಭ್ಯಗಳ ಕೊರತೆ (ನಂದಿಯಾ ಕಮ್ಸ್ ಟು ಮುಂಬೈ, ಎಲ್‌ಎ, ತರಗತಿ 4: ಚೆನ್ನೈ ನಗರವಾಸಿಗಳ ಪ್ರಕರಣ ಅಧ್ಯಯನ, ಎಸ್‌ಪಿಎಲ್ III:106–107) ಹಾಗು ನಿರ್ವಸತಿ (ಚೋಟೂಸ್ ಹೌಸ್, ಎಲ್‌ಎ, 3ನೇ ತರಗತಿ) – ಮೊದಲಾದ ತಮ್ಮದೇ ಆದ ಸಮಸ್ಯೆಗಳ ವಿರುದ್ಧ ಹೋರಾಟ ನಡೆಸುತ್ತಿರುತ್ತಾರೆ ಎಂದು ತೋರಿಸಲಾಗಿದೆ.



ಚೋಟೂಸ್ ಹೌಸ್, ಲುಕಿಂಗ್ ಅರೌಂಡ್, 3ನೇ ತರಗತಿ ಎನ್‌ಸಿಇಆರ್‌ಟಿ ಪಠ್ಯಪುಸ್ತಕ 2006

**ಲಿಂಗ ಕಾಳಜಿಗಳ ಬಗ್ಗೆ ಗಮನ ಹರಿಸುವುದು**

ಈ ಮೊದಲಿನ ಎನ್‌ಸಿಇಆರ್‌ಟಿ ಪೌರನೀತಿಯ ಪಠ್ಯಪುಸ್ತಕಗಳಲ್ಲಿ (2002–04) ಎರಡೂ ಲಿಂಗಗಳಿಗೆ ಉತ್ತಮ ಪ್ರಾತಿನಿಧ್ಯ ನೀಡಿದ್ದರೂ, ಕೆಲಸದ ವಿಂಗಡಣೆಗೆ ಸಂಬಂಧಿಸಿದ ದೃಶ್ಯಾವಳಿಗಳು ಕೆಲವು ರೂಢಿಗತ ಸಾಮಾಜಿಕ ಪಡಿಯಚ್ಚುಗಳನ್ನು ಬಲಪಡಿಸುವಂತೆ ಇದ್ದವು. ಸರೋಜಿನಿ ನಾಯ್ಡು ಮತ್ತು ವಿಜಯಲಕ್ಷ್ಮೀ ಪಂಡಿತ್ ಅವರಂಥ ಸುಪ್ರಸಿದ್ಧ ವ್ಯಕ್ತಿಗಳನ್ನು ಹೊರತುಪಡಿಸಿ (ಎನ್‌ಸಿಇಆರ್‌ಟಿ 2003: 176), (ಎನ್‌ಸಿಇಆರ್‌ಟಿ 1987: ಎನ್‌ಸಿಇಆರ್‌ಟಿ 2002) ಈ ಪಠ್ಯಪುಸ್ತಕಗಳಲ್ಲಿ ಬರುವ ಮಹಿಳೆಯರ ಚಿತ್ರಣಗಳು ಪೋಷಿಸುವವರು ಹಾಗು ಸಂರಕ್ಷಿಸುವವರು (ಗೃಹಿಣಿಯರು, ದಾದಿಯರು) ಎಂಬುದಾಗಿ ಬಿಂಬಿಸಲ್ಪಟ್ಟಿದೆ.

ನಾಗರಿಕರ ಎಲ್‌ಎ ಮತ್ತು ಎಸ್‌ಪಿಎಲ್ ಸರಣಿಗಳಲ್ಲಿ ಮಹಿಳೆಯರು ಪುರುಷರ ಜೊತೆಗೆ ಸಮಾನ ವೇದಿಕೆಯನ್ನು ಹಂಚಿಕೊಳ್ಳುತ್ತಾರೆ. ಪ್ರಖ್ಯಾತರಾದ ಪಂಡಿತಾ ರಮಾಬಾಯಿ, ರೊಕೆಯ ಶೆಖಾವತ್ ಹುಸೇನ್‌ರಂಥವರ ಕೊಡುಗೆಗಳ ಕುರಿತು ಚರ್ಚೆ ನಡೆದಿದ್ದರೂ, ಕೆಲವರ ಸಾಧನೆಗೆ ಸೀಮಿತವಾಗದೆ, ಅದನ್ನು ಮೀರುವ ನಿರ್ದಿಷ್ಟ ಪ್ರಯತ್ನ ನಡೆಸಲಾಗಿದೆ. ಪಠ್ಯಪುಸ್ತಕಗಳಲ್ಲಿ ನಾನಾ ಸಾಮಾಜಿಕ ಗುಂಪಿಗೆ ಸೇರಿದ ಸಾಮಾನ್ಯ ಮಹಿಳೆಯರು ಕುಟುಂಬದ ಆದಾಯಕ್ಕೆ ಪಾಲು ನೀಡುತ್ತಿರುವುದರ ಜೊತೆಗೆ ಸಮುದಾಯ ಹಾಗು ದೇಶದ ಸಮಾಜೋ-ಆರ್ಥಿಕ ಅಭಿವೃದ್ಧಿಗೆ ಕಾಣಿಕೆ ಸಲ್ಲಿಸುತ್ತಿರುವ ಹಲವು ಉದಾಹರಣೆಗಳಿವೆ. ಮಹಿಳೆಯರನ್ನು ಅವರ ಸಾಂಪ್ರದಾಯಿಕ ಪೋಷಣೆಗೆ ಸಂಬಂಧಿಸಿದ ಪಾತ್ರಗಳಲ್ಲಿ (ಶಬ್ಬಂಬಾನು, ಎಸ್‌ಪಿಎಲ್ II:5) ಮಾತ್ರವಲ್ಲದೆ, ಕುಟುಂಬದ ದುಡಿಯುವ ಸದಸ್ಯರಾಗಿ, ಉದಾಹರಣೆಗೆ, ಕಸ ಸಂಗ್ರಹಿಸುವವರು (ಎಲ್‌ಎ III :147; ಎಸ್‌ಪಿಎಲ್ 3:101), ಮೀನುಗಾರರು (ಅರುಣಾ, ಎಸ್‌ಪಿಎಲ್ I:73), ಮನೆ ಕೆಲಸದವರು (ಎಲ್‌ಎ I:83: ಮೆಲನಿ, ಎಸ್‌ಪಿಎಲ್ II: 49), ಧೋಬಿಗಳು (ಅನ್ವರಿ, ಎಲ್‌ಎ I:27), ಜೇನುಸಾಕಣೆ (ಅನಿತಾ, ಎಲ್‌ಎ 3:38) ಮತ್ತು ಕಾರ್ಖಾನೆ ಕಾರ್ಮಿಕರು (ಎಸ್‌ಪಿಎಲ್ II:109) ಇರುತ್ತಾರೆ. ಅವರು ಶಿಕ್ಷಕಿಯರು (ಮಂಜಿತ್ ಕೌರ್, ಎಸ್‌ಪಿಎಲ್ II:4), ಸರ್ಕಾರಿ ಉದ್ಯೋಗಿಗಳು (ಯಾಸ್ಮಿನ್ ಎಸ್‌ಪಿಎಲ್ I:57), ಉದ್ಯಮಿಗಳು (ವಂದನಾ ಎಸ್‌ಪಿಎಲ್ I:80–81) ಹಾಗು ವಕೀಲರು (ಕಮಲಾ ರಾಯ್ ಎಸ್‌ಪಿಎಲ್ III:69–70) ಸೇರಿದಂತೆ ಹಲವು ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುತ್ತಾರೆ.

ಉದ್ಯೋಗಸ್ಥ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು ಹಲವು ಕತೆಗಳಲ್ಲಿ ಪ್ರಸ್ತಾಪಗೊಂಡಿವೆ. ಅನಿಯಮಿತ ಆದಾಯ ಮೂಲ ಮತ್ತು ಕಡಿಮೆ ವೇತನದಿಂದಾಗಿ ಸಂಕಷ್ಟಕ್ಕೆ ಸಿಲುಕಿರುವ ತುಳಸಿಯಂಥ ಭೂರಹಿತ ಕೃಷಿ ಕಾರ್ಮಿಕರು ಹಾಗು ತಾತ್ಕಾಲಿಕ ಆಧಾರದಲ್ಲಿ ಕೆಲಸ ಮಾಡುವ ನಿರ್ಮಲಾರಂಥ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರನ್ನು ಇಲ್ಲಿ ಉಲ್ಲೇಖಿಸಬಹುದು.

ಎಸ್‌ಪಿಎಲ್ ಸರಣಿಯಲ್ಲಿ ಲಿಂಗ ಸಂಬಂಧಿ ರೂಢಿಗತ ಎನ್ನುವುದು ಹೇಗೆ ಸಾಮಾಜಿಕ ನಿರ್ಮಿತಿ ಎನ್ನುವುದನ್ನು ಓದುಗರಿಗೆ ಅರ್ಥ ಮಾಡಿಸಲು ಅವಕಾಶಗಳಿವೆ. ಲಿಂಗ ಪಡಿಯಚ್ಚುಗಳು ಹಾಗು ಮಹಿಳೆಯರನ್ನು ಪಾಲಕ-ಪೋಷಕರು ಮತ್ತು ಗೃಹಿಣಿಯರೆಂಬ ಅಪಮೌಲ್ಯೀಕರಣವು ಸಮಾಜದ ನಾನಾ ಸ್ತರಗಳು ಮತ್ತು ಸಮುದಾಯದಲ್ಲಿ ಅಸ್ತಿತ್ವದಲ್ಲಿದೆ ಎನ್ನುವುದನ್ನು ಮೇಲ್ವರ್ಗಕ್ಕೆ ಸೇರಿದ ಗೃಹಿಣಿ (ಜಸ್‌ಪ್ರೀತ್ ಎಸ್‌ಪಿಎಲ್ II:47-48) ಮತ್ತು ಮನೆಕೆಲಸ ಮಾಡುವ ಮೆಲನಿಯ ಪ್ರಕರಣ ಅಧ್ಯಯನ (ಎಸ್‌ಪಿಎಲ್ II:49)ದಲ್ಲಿ ಎತ್ತಿ ತೋರಿಸಲಾಗಿದೆ. ಮನೆಗೆಲಸದ ಬಗ್ಗೆ ಘನತೆ ಮತ್ತು ಮೌಲ್ಯಕ್ಕೆ ಒತ್ತು ನೀಡುವ ಪ್ರಯತ್ನಗಳೂ ಪಠ್ಯಪುಸ್ತಕದಲ್ಲಿದೆ. ಉದಾಹರಣೆಗೆ, ಪರಿಸರ ಅಧ್ಯಯನ ಪಠ್ಯಪುಸ್ತಕದಲ್ಲಿ ದೀಪಾಲಿ ಎಂಬ ಹುಡುಗಿಯ ಒಂದು ಕಥೆಯಿದೆ. (ವರ್ಕ್ ವೀ ಡು ಎಲ್‌ಪಿ I:83). ಮನೆಗೆಲಸ ಮಾಡುವ ತಾಯಿ ಹಾಗು ತರಕಾರಿ ಮಾರಾಟಗಾರರಾದ ತಂದೆಯ ಹಿರಿಯ ಮಗಳಾದ ದೀಪಾಲಿಯ ಮೇಲೆ ಕಿರಿಯ ಸೋದರ ಸೋದರಿಯರ ಜವಾಬ್ದಾರಿಯಲ್ಲದೆ, ಅಡುಗೆ, ಶುಚೀಕರಣ ಮತ್ತಿತರ ಕೆಲಸಗಳನ್ನು ಹೇರಲಾಗಿತ್ತು. ಸಂಸಾರ ಸಾಗಿಸಲು ಆಕೆಯ ಪೋಷಕರು ಪರದಾಡುತ್ತಿದ್ದರು. ಈ ಕತೆಯು ಸೂಕ್ಷ್ಮವಾಗಿ ಆದರೂ, ದೃಢವಾಗಿ ಬಡತನದಿಂದಾಗಿ ಹೆಣ್ಣುಮಕ್ಕಳು ಶಿಕ್ಷಣ ಕೈಬಿಡಬೇಕಾಗುತ್ತದೆ ಮತ್ತು ಶಾಲೆಯನ್ನು ತೊರೆಯ-ಬೇಕಾಗುತ್ತದೆ ಎನ್ನುವ ಬದುಕಿನ ಕಟುವಾಸ್ತವವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತದೆ.

ಈ ಪಠ್ಯಪುಸ್ತಕಗಳು ಪುರುಷರಿಗೆ ಹೋಲಿಸಿದರೆ ಮಹಿಳೆಯರು ಮನೆಕೆಲಸ ಹಾಗು ಉದ್ಯೋಗದ ಎರಡು ಹೊರೆಗಳನ್ನು ನಿಭಾಯಿಸಲು ಹೇಗೆ ಸಿಲುಕಿಕೊಂಡಿದ್ದಾರೆ ಎಂದು ಚರ್ಚಿಸುತ್ತವೆ. ಹರಿಯಾಣ ಮತ್ತು ತಮಿಳುನಾಡಿನಲ್ಲಿ ನಡೆಸಿದ ಸಮೀಕ್ಷೆ (ಎಸ್‌ಪಿಎಲ್ 2:50)ಯೊಂದನ್ನು ಉಲ್ಲೇಖಿಸಲಾಗಿದೆ. ಕೌಟುಂಬಿಕ ಹಿಂಸೆಯಂಥ ಲಿಂಗಾಧಾರಿತ ತಾರತಮ್ಯ (ಶಾಜಿಯಾ ಮತ್ತು ಕುಸುಂ, ಎಸ್‌ಪಿಎಲ್ 3:46-48) ಮತ್ತು ವರದಕ್ಷಿಣೆ ಸಾವುಗಳು (ಸುಧಾ ಗೋಯಲ್ ಕತೆ, ಎಸ್‌ಪಿಎಲ್ III:46-48) ಮತ್ತು ವರದಕ್ಷಿಣೆ ಸಾವು 3:58)ಗಳು ಉಲ್ಲೇಖಗೊಂಡಿವೆ.

**ಪೌರತ್ವದ ನಿರ್ಮಾಣ:**

ಈ ಮೊದಲಿನ ಎನ್‌ಸಿಇಆರ್‌ಟಿ ಪಠ್ಯಪುಸ್ತಕ(1975-2004) ಗಳಲ್ಲಿ ಪೌರತ್ವ ಎನ್ನುವುದು ಕರ್ತವ್ಯದ ಆಲೋಚನೆಗಳನ್ನು ಅವಲಂಬಿಸಿದೆ ಹಾಗು ಅದು ಹಕ್ಕುಗಳನ್ನು ಕಡೆಗಣಿಸುತ್ತದೆ ಎನ್ನುವುದನ್ನು ಮೇಲೆ ಉಲ್ಲೇಖಿಸಲಾಗಿದೆ. ರಾಷ್ಟ್ರ ನಿರ್ಮಾಣಕ್ಕೆ ಅಗತ್ಯವಾದ ಸೂಕ್ತ ಗುಣಗಳನ್ನು (Appropriate Qualities) ಬೆಳೆಸಿಕೊಳ್ಳುವ ಮೂಲಕ ಜವಾಬ್ದಾರಿಯುತ ಹಾಗು ಕರ್ತವ್ಯನಿಷ್ಠ ನಾಗರಿಕರಾಗಬೇಕು ಎಂದು ವಿದ್ಯಾರ್ಥಿಗಳಿಗೆ ಮತ್ತೆಮತ್ತೆ ನೆನಪಿಸಲಾಗುತ್ತದೆ ಎನ್ನುವುದು ಸ್ಪಷ್ಟ.

ಅಷ್ಟಲ್ಲದೆ, ಈ ಪಠ್ಯಪುಸ್ತಕಗಳಲ್ಲಿ ರಾಜ್ಯವು ಸದಾಕಾಲ ಪ್ರಜೆಗಳ ಒಳಿತನ್ನು ನೋಡಿಕೊಳ್ಳುವ ಅಖಂಡ, ಪಿತೃಪ್ರಧಾನ ಮತ್ತು ದಯಾಪರ ಸಂರಚನೆಯೆಂದು (Benevolent structure) ಚಿತ್ರಿಸಲಾಗಿ. ರಾಜ್ಯ ಆಡಳಿತ ಯಂತ್ರದ ಕಾರ್ಯನಿರ್ವಹಣೆಯಲ್ಲಿ ನಡೆಯಬಹುದಾದ ಲೋಪ / ನ್ಯಾಯ ವಿರೋಧಿ ಕಾರ್ಯಗಳ ಬಗ್ಗೆ ಇಲ್ಲವೇ ಸರ್ಕಾರ ಅಂಥ ಲೋಪಗಳನ್ನು ಪ್ರಜಾಸತ್ತಾತ್ಮಕವಾಗಿ ಹೇಗೆ ಸರಿಪಡಿಸಬಹುದು ಎನ್ನುವ ಬಗ್ಗೆ ಯಾವುದೇ ಚರ್ಚೆಗೆ ಅಷ್ಟೇನೂ ಅವಕಾಶ ಇರುವುದಿಲ್ಲ.

**ಸಾಮಾಜಿಕ ಅಸಮಾನತೆಯ ವಿರುದ್ಧ ಸೆಡ್ಡು ಹೊಡೆಯುವುದು**

ಎಸ್‌ಪಿಎಲ್ ಸರಣಿಯಲ್ಲಿ ನಾಗರಿಕರ ಹಕ್ಕುಗಳ ಚೌಕಟ್ಟಿನಲ್ಲಿ ಪೌರತ್ವವನ್ನು ವ್ಯಾಖ್ಯಾನಿಸಲಾಗಿದೆ. ಇಲ್ಲಿ ಪೌರತ್ವವನ್ನು ರಾಜಕೀಯ ಹಕ್ಕುಗಳು ಅಂದರೆ, ಪ್ರಜಾಪ್ರಭುತ್ವದಲ್ಲಿ ವಯಸ್ಕ ನಾಗರಿಕರನ್ನು ಅವರ, ಸಾಮಾಜಿಕ ಸ್ಥಿತಿಗತಿ ಏನೇ ಇದ್ದರೂ ಸಮಾನರಂತೆ ಮತ ಚಲಾವಣೆಯ ಹಕ್ಕು ಹೊಂದಿರುವುದು, ಇದನ್ನು ಒದಗಿಸುವ ಹಕ್ಕನ್ನು ಮೀರಿ ಪೌರತ್ವವನ್ನು ವ್ಯಾಖ್ಯಾನಿಸುವ ಪ್ರಯತ್ನ ಮಾಡಬೇಕಿದೆ. ಅಸಮಾನತೆ ಹಾಗು ನಾನಾ ಆಯಾಮಗಳ ಭೇದಗಳು ಇರುವ ನಾಗರಿಕರ ಸಮಾಜೋ-ಆರ್ಥಿಕ ವಾಸ್ತವ ಬದುಕಿನ ನೆಲೆಯಲ್ಲಿ ವಾಸ್ತವದಲ್ಲಿ ಸಮಾನತೆ ಎನ್ನುವುದರ ಮೂಲವನ್ನೇ ಪ್ರಶ್ನಿಸುತ್ತದೆ. ಉದಾಹರಣೆಗೆ, ಪಠ್ಯಪುಸ್ತಕವೊಂದು ನಾನಾ ಸಮಾಜೋ-ಆರ್ಥಿಕ ಹಿನ್ನೆಲೆಯ ನಾಗರಿಕರು (ಶಿಕ್ಷಕ, ಮನೆಕೆಲಸದವರು, ಸಲಹೆಗಾರ, ಉದ್ಯಮಿ) ಮತದಾನ ಕೇಂದ್ರದ ಎದುರು ಸರತಿ ಸಾಲಿನಲ್ಲಿ ನಿಲ್ಲುವ ಮೂಲಕ ನಾಗರಿಕರಾಗಿ ಸಮಾನ ಸ್ಥಾನಮಾನವನ್ನು ಹೊಂದಿದ್ದಾರೆ ಎಂದು ತೋರಿಸುವ ಕತೆಯೊಂದನ್ನು ಒಳಗೊಂಡಿದೆ. ಆದರೆ, ಮನೆ ಕೆಲಸ ಮಾಡುವ ಕಾಂತಾಳಿಗೆ, ತಾನು ಯಜಮಾನ, ಉದ್ಯಮಿ ಜೈನ್ ನಿಂತಿದ್ದ ಸರತಿ ಸಾಲಿನಲ್ಲಿ ನಿಂತು ಮತ ಚಲಾವಣೆ ಮಾಡಬಹುದಾದರೂ, ದಿನದ ಅಂತ್ಯದಲ್ಲಿ ತಮ್ಮಿಬ್ಬರ ನಡುವೆ ಅಗಾಧ ಕಂದಕವಿದೆ ಎನ್ನುವುದು ಅರಿವಾಗುತ್ತದೆ. ತನ್ನ ಉದ್ಯೋಗದಾತನ ವಿಶಾಲವಾದ ಅಪಾರ್ಟ್‌ಮೆಂಟ್‌ಗೆ ವ್ಯತಿರಿಕ್ತವಾಗಿ ಕಾಂತಾ ಕೊಳೆಗೇರಿಯೊಂದರ ಅತ್ಯಂತ ಹೊಲಸು ವಾತಾವರಣದಲ್ಲಿ ವಾಸಿಸುತ್ತಾಳೆ ಮತ್ತು ಕಾಯಿಲೆಯಿಂದ ಬಳಲುತ್ತಿದ್ದ ಕಿರಿಯ ಮಗಳನ್ನು ಮನೆಯಲ್ಲೇ ಬಿಟ್ಟು ವಿಧಿಯಿಲ್ಲದೆ ಕೆಲಸಕ್ಕೆ ಹೋಗುವ ಸ್ಥಿತಿಯಲ್ಲಿದ್ದಾಳೆ. ಮಾಲೀಕನ ಮನೆಯ ಕೆಲಸವನ್ನೆಲ್ಲ ಮುಗಿಸಿ ಆತನಿಂದ ಸ್ವಲ್ಪ ಹಣ ಸಾಲ ಪಡೆದ ನಂತರವೇ, ಮಗಳನ್ನು ಸಂಜೆ ಹೊತ್ತಿಗೆ ವೈದ್ಯರ ಬಳಿಗೆ ಕರೆದುಕೊಂಡು ಹೋಗಲು ಅವಳಿಗೆ ಸಾಧ್ಯವಾಗುತ್ತದೆ. ಅವಳು ಆಶ್ಚರ್ಯಪಡುತ್ತಾಳೆ: 'ಮತ ಚಲಾಯಿಸಲು ನಾವು ಒಂದೇ ಸರತಿ ಸಾಲಿನಲ್ಲಿ ನಿಂತಿರಬಹುದು. ಆದರೆ, ನಾವು ನಿಜವಾಗಿಯೂ ಸಮಾನರೇ?' (ಎಸ್‌ಪಿಎಲ್ 2:4-6).

ಅಸಮಾನತೆ ಅಸ್ತಿತ್ವದಲ್ಲಿರುವ ಈ ಹಿನ್ನೆಲೆಯಲ್ಲಿ ಸಂವಿಧಾನವು ಮೂಲಭೂತ ಹಕ್ಕುಗಳ ರೂಪದಲ್ಲಿ ಕೊಡಮಾಡಿದ ನಾಗರಿಕ, ಸಾಮಾಜಿಕ ಹಾಗು ಆರ್ಥಿಕ ಹಕ್ಕುಗಳ ಪ್ರಾಮುಖ್ಯತೆಯನ್ನು ಕುರಿತು ಪಠ್ಯಪುಸ್ತಕಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಪಠ್ಯಪುಸ್ತಕಗಳಲ್ಲಿ ಮುಖ್ಯವಾಗಿ, ಸಮಾನತೆಯ ಹಕ್ಕು (ವಿಧಿ 15) ಹಾಗು ಬದುಕುವ ಹಕ್ಕು (ವಿಧಿ 21)ಗಳನ್ನು ಉಲ್ಲೇಖಿಸಲಾಗಿದೆ. ಹಲವು ಪ್ರಕರಣ ಅಧ್ಯಯನಗಳ ಮೂಲಕ, ಈ ಹಕ್ಕುಗಳು ಲಭ್ಯವಾದಲ್ಲಿ ಸಾಮಾಜಿಕ ಅಸಮಾನತೆಗಳಿಗೆ ಸವಾಲು ಎಸೆಯಲು ಸಾಧ್ಯವಾಗುವುದಲ್ಲದೆ, ಎಲ್ಲ ನಾಗರಿಕರೂ ಘನತೆಯ ಬದುಕನ್ನು ಹೊಂದುವಂತೆ ಖಾತ್ರಿಗೊಳಿಸಬಹುದು ಎಂದು ಪಠ್ಯಪುಸ್ತಕಗಳು ತೋರಿಸಿಕೊಡುತ್ತವೆ. ಸಂವಿಧಾನದಲ್ಲಿ ಈ ಹಕ್ಕುಗಳು ಇದ್ದರೂ, ನಾಗರಿಕರು ಎಲ್ಲ ಕಾಲದಲ್ಲೂ ಇವುಗಳನ್ನು ಚಲಾಯಿಸಲು ಸುಲಭವಲ್ಲ ಎಂದೂ ತೋರಿಸಿಕೊಡುತ್ತವೆ.

ಬದಲಾಗಿ, ಈ ಹಕ್ಕುಗಳನ್ನು ವ್ಯಕ್ತಿಗಳು, ಸಂಸ್ಥೆಗಳು ಹಾಗು ರಾಜ್ಯ ಕೂಡ ಪ್ರಶ್ನಿಸುತ್ತದೆ, ಹತ್ತಿಕ್ಕುತ್ತವೆ ಹಾಗು ಉಲ್ಲಂಘಿಸುತ್ತವೆ. ಬಹುತೇಕ ಪ್ರಕರಣಗಳಲ್ಲಿ ನಾಗರಿಕರು ಒಂದಲ್ಲ ಒಂದು ರೀತಿ ಸಾಮಾಜಿಕ ತಾರತಮ್ಯಕ್ಕೆ ಸಿಲುಕಿರುವುದನ್ನು ತೋರಿಸಲಾಗಿದೆ. ಅದು ಜಾತಿ ಆಧಾರಿತ (ಬಿ.ಆರ್.ಅಂಬೇಡ್ಕರ್, ಎಸ್‌ಪಿಎಲ್ I:19–20 ಮತ್ತು ಓಂಪ್ರಕಾಶ್ ವಾಲ್ಮೀಕಿ ಎಸ್‌ಪಿಎಲ್ II:7–8) ಅಥವಾ ಲಿಂಗಾಧಾರಿತ (ಜಸ್‌ಪ್ರೀತ್ ಕತೆ ಎಸ್‌ಪಿಎಲ್ II:47–48) ಅಥವಾ ಧರ್ಮಾ–ಧಾರಿತ (ಅನ್ಸಾರಿ, ಎಸ್‌ಪಿಎಲ್ II:8) ಕತೆ ಆಗಿರಬಹುದು. ನಾಗರಿಕನೊಬ್ಬನ ಆರ್ಥಿಕ ಹಿನ್ನೆಲೆಯ ಕಾರಣದಿಂದ ಆತ/ಆಕೆ ಸಮಾಜದ ಪ್ರಬಲರು ಹಾಗು ಶ್ರೀಮಂತರಿಂದ ಶೋಷಣೆಗೀಡಾದ ಉದಾಹರಣೆಗಳನ್ನು ಕೂಡ ಸನ್ನಿವೇಶಗಳಲ್ಲಿ ನೋಡಬಹುದು (ಓಂಪ್ರಕಾಶ್, ಭೂರಹಿತ ಕಾರ್ಮಿಕ, ಎಸ್‌ಪಿಎಲ್ I:44–45)

**ರಾಜ್ಯವನ್ನು ಉತ್ತರದಾಯಿತ್ವದ ಸ್ಥಿತಿಯಲ್ಲಿರಿಸುವುದು**

ಸರ್ಕಾರದ ನಾನಾ ಇಲಾಖೆಗಳ ಕಾರ್ಯ ನಿರ್ವಹಣೆಯಲ್ಲಿನ ದೋಷಗಳಿಂದಾಗಿ ನಾಗರಿಕರು ಶಾಸನಾತ್ಮಕ ಹಕ್ಕುಗಳನ್ನು ಕಳೆದುಕೊಂಡಿರುವ ಹಲವು ಪ್ರಕರಣಗಳನ್ನು ಎಸ್‌ಪಿಎಲ್ ಪಠ್ಯಪುಸ್ತಕಗಳು ಚರ್ಚಿಸುತ್ತವೆ. ಕೆಲವು ಕತೆಗಳು ಸ್ಪಷ್ಟವಾಗಿ ರಾಜ್ಯದ ಉದ್ದೇಶಪೂರ್ವಕ ಹಾಗು ಉತ್ಸಾಹಹೀನ ಮನೋ–ಭಾವವನ್ನು ಬಿಂಬಿಸುತ್ತವೆ (ಕಾರ್ಖಾನೆ ನೌಕರರು ಮತ್ತು ನಾಗರಿಕರ ಸುರಕ್ಷತೆ ಹಾಗು ಭದ್ರತೆಯನ್ನು ಖಾತ್ರಿಗೊಳಿಸುವಲ್ಲಿ ರಾಜ್ಯದ ವೈಫಲ್ಯ, ಭೋಪಾಲ್ ಅನಿಲ ದುರಂತ ಕುರಿತ ಚಿತ್ರಲೇಖನ, ಎಸ್‌ಪಿಎಲ್ III:124–127). ಕೆಲವು ಪ್ರಕರಣಗಳಲ್ಲಿ ರಾಜ್ಯವು ಉದ್ದೇಶಪೂರ್ವಕವಾಗಿ ಜನರ ಹಕ್ಕನ್ನು ಹತ್ತಿಕ್ಕುವ ಕ್ರಮ ಕೈಗೊಂಡಿರುವುದನ್ನು ನಿರೂಪಿಸುತ್ತವೆ (ಅರಣ್ಯವಾಸಿಗಳ ಪ್ರಕರಣ, ತವಾ ಮತ್ಸ್ಯ ಸಂಘದ ಕತೆ, ಎಸ್‌ಪಿಎಲ್ II:117–119).



ಮಹಿಳೆಯರು ಜಗತ್ತನ್ನು ಬದಲಾಯಿಸುತ್ತಾರೆ, ಎಸ್‌ಪಿಎಲ್ !! ಎನ್‌ಸಿಇಆರ್‌ಟಿ, 2007

**ಹಕ್ಕುಗಳ ಮರುಪಡೆಯುವಿಕೆ:**

ಪೌರತ್ವವನ್ನು ಇಲ್ಲಿ ಬಿಂಬಿಸಿರುವ ರೀತಿ ನೋಡಿದರೆ, ನಾಗರಿಕರ ಹಕ್ಕುಗಳನ್ನು ಕುರಿತು ಅಥವಾ ಗುಂಪು–ವ್ಯಕ್ತಿಗಳಿಗೆ ಆ ಹಕ್ಕುಗಳನ್ನು ಹೇಗೆ ನಿರಾಕರಿಸಲಾಗುತ್ತಿದೆ ಎನ್ನುವ ಚರ್ಚೆಗೆ ಸೀಮಿತವಾಗದೆ ಇರುವುದು ಈ ಪಠ್ಯಪುಸ್ತಕಗಳ ಆಸಕ್ತಿಕರ ಅಂಶವಾಗಿದೆ. ಬದಲಾಗಿ, ಚರ್ಚೆಯು ಅಂಥ ಹಕ್ಕುಗಳನ್ನು ಯಾವ ರೀತಿ ಸಾಧ್ಯವಾಗಿಸಬಹುದು ಹಾಗು ಮರಳಿ ಪಡೆಯಬಹುದು ಎನ್ನುವ ಸಾಧ್ಯತೆಗಳನ್ನು ಶೋಧಿಸುತ್ತದೆ. ಸಾಮಾಜಿಕ ವರ್ಗಗಳು ಯಾವುದೇ ಆಗಿರಲಿ, ಹೆಚ್ಚಿನ ನಾಗರಿಕರು ತಮ್ಮ ಕರ್ತೃತ್ವತೆಯನ್ನು ಚಲಾಯಿಸುವುದನ್ನು ನಾವು ನೋಡುತ್ತೇವೆ. ಉದಾಹರಣೆಗೆ, ಮಹಿಳೆಯರು ಚಾಲ್ತಿಯಲ್ಲಿರುವ ಸಾಮಾಜಿಕ ಪದ್ಧತಿ ಹಾಗು ಪೂರ್ವಗ್ರಹಗಳಿಗೆ ಸವಾಲೆಸೆದು ತಮ್ಮ ಹಕ್ಕು ಸ್ಥಾಪಿಸುತ್ತಾರೆ. (ರಮಾಬಾಯಿ ಎಸ್‌ಪಿಎಲ್ II:59) ಅಥವಾ ಆತ್ಮಸ್ಥೈರ್ಯದಿಂದ ತಮ್ಮ ಆಶಯಗಳನ್ನು ಸಾಕಾರಗೊಳಿಸಲು ಮುಂದಾಗುತ್ತಾರೆ. (ಲಕ್ಷ್ಮೀ ಲಾಕ್ರ, ಎಸ್‌ಪಿಎಲ್ II:57). ಹಲವು ಪ್ರಕರಣಗಳಲ್ಲಿ ನಾಗರಿಕರು ಕಾನೂನಿನ ನೆರವು ಪಡೆದುಕೊಳ್ಳುವುದು ಹಾಗು ರಾಜ್ಯಗಳ ನಾನಾ ಸಂಸ್ಥೆಗಳ ಮಧ್ಯಪ್ರವೇಶವನ್ನು ಕೇಳುವುದು (ತನ್ನ ಭೂಮಿಯನ್ನು ಅತಿಕ್ರಮಿಸಿದ್ದಕ್ಕೆ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ತನ್ನ ನೆರೆಯವನ ವಿರುದ್ಧ ಎಫ್‌ಐಆರ್ ದಾಖಲಿಸಿದ ಮೋಹನ್ ಕತೆ, ಎಸ್‌ಪಿಎಲ್ I:49–50). ಹಕ್ಕುಗಳನ್ನು ಹತ್ತಿಕ್ಕಿದಾಗ, ನ್ಯಾಯಾಲಯದ ಮೊರೆ ಹೋಗುವುದೂ ತನ್ನ. ಕೃಷಿ ಕಾರ್ಮಿಕ ಹಕೀಂ ಶೇಖ್ ಗಂಭೀರ ಅಪಘಾತದ ಬಳಿಕ ತನಗೆ ಚಿಕಿತ್ಸೆ ನಿರಾಕರಿಸಿದ ಸರ್ಕಾರಿ ಆಸ್ಪತ್ರೆಗಳ ಮೇಲೆ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿದ ಪ್ರಕರಣ ಅಧ್ಯಯನದೆಡೆಗೆ ಕೂಡ ಗಮನ ಸೆಳೆಯಬೇಕಾಗುತ್ತದೆ. (ಎಸ್‌ಪಿಎಲ್ II:21).

**ಸಾಮೂಹಿಕ ಚಳವಳಿ:**

ಸಹಕಾರ ಸಂಘಗಳ ರಚನೆ ಹಾಗು ಸಾಮಾಜಿಕ ಆಂದೋಲನಗಳನ್ನು ಕಟ್ಟಿಕೊಳ್ಳುವ ಮೂಲಕ ತಮ್ಮ ಹಕ್ಕುಗಳನ್ನು ಮರುಸ್ಥಾಪಿಸಲು ಪ್ರಜೆಗಳು ಹೋರಾಡುತ್ತಿರುವ ಸಾಮುದಾಯಿಕ ಚಳುವಳಿಗಳನ್ನು (Collective action) ಪಠ್ಯಪುಸ್ತಕಗಳು ಎತ್ತಿಹಿಡಿದಿವೆ. ಪಠ್ಯಪುಸ್ತಕಗಳು ಸಮಾಜದ ಶಿಕ್ಷಿತ ಮಧ್ಯಮ ಅಥವಾ ಮೇಲ್ಮಧ್ಯಮ ವರ್ಗಗಳು ಸಾಮಾಜಿಕ ಅಸಮಾನತೆಯ ವಿರುದ್ಧ ನಡೆಸಿದ ಹೋರಾಟಗಳನ್ನು ಉಲ್ಲೇಖಿಸುತ್ತವೆ (ಉದಾಹರಣೆಗೆ, ಲಾಯರ್ಸ್ ಕಲೆಕ್ಟಿವ್ ಹಾಗು ರಾಷ್ಟ್ರೀಯ ಮಹಿಳಾ ಆಯೋಗ (National Commission for Women) ಕೌಟುಂಬಿಕ ಹಿಂಸಾಚಾರಕ್ಕೆ ಸಂಬಂಧಿಸಿದ ಕಾನೂನನ್ನು ತರಲು ನೀಡಿದ ಕೊಡುಗೆ ಕುರಿತ ಕತೆ, ಎಸ್‌ಪಿಎಲ್ 3:46–48). ಆದರೆ, ಹೆಚ್ಚಿನ ಸಂದರ್ಭಗಳಲ್ಲಿ ಸಾಮಾನ್ಯ ಜನರು ಅದರಲ್ಲೂ ಅಂಚಿನಲ್ಲಿ ಬದುಕುತ್ತಿರುವವರು ಸಾಮೂಹಿಕವಾಗಿ ಒಗ್ಗೂಡಿ ಪಾಲ್ಗೊಳ್ಳುವ ಸಾರ್ವಜನಿಕ ಮೆರವಣಿಗೆ ಮತ್ತು ಪ್ರತಿಭಟನಾ ಜಾಥಾಗಳು, ಸಾರ್ವಜನಿಕ ವಿಚಾರಣೆ ನಡೆಸುವುದು, ಧರಣಿ ಕೂರುವುದು ಮತ್ತು ತಮ್ಮ ಅಭಿಪ್ರಾಯಭೇದವನ್ನು ನಾಟಕ, ಹಾಡು, ಹಾಗು ಕ್ರಿಯಾಶೀಲ ಬರಹದ ಮೂಲಕ ತೋರ್ಪಡಿಸುವುದು ಹೆಚ್ಚು ಗಮನ ಸೆಳೆಯುತ್ತದೆ. ಪಠ್ಯಪುಸ್ತಕಗಳಲ್ಲಿ ಉಲ್ಲೇಖಗೊಂಡ ಪ್ರಮುಖ ಉದಾಹರಣೆಗಳೆಂದರೆ, ಮಧ್ಯಪ್ರದೇಶದ ಕಾಡುಗಳಿಂದ ಸ್ಥಳಾಂತರಗೊಂಡ ಅರಣ್ಯವಾಸಿಗಳಿಂದ ತವಾ ಮತ್ಸ್ಯ ಸಂಘ ನಡೆಸಿದ ಹೋರಾಟ (ಎಸ್‌ಪಿಎಲ್ II:118) ಮತ್ತು ಸಮಾನ ಪೌರತ್ವದ ಹಕ್ಕುಗಳಿಗಾಗಿ ಮಹಿಳೆಯರು ನಡೆಸಿದ ಚಳವಳಿ (ಎಸ್‌ಪಿಎಲ್ II:63–67).

ಆದರೆ, ನಾಗರಿಕರು ಎಲ್ಲ ಪ್ರಕರಣಗಳಲ್ಲೂ ವಿಜಯ–ಶಾಲಿಗಳಾಗುವುದಿಲ್ಲ. ಬದಲಾಗಿ, ಪಠ್ಯಪುಸ್ತಕಗಳು ನಾಗರಿಕರಲ್ಲಿ ಹೋರಾಟದ ಸ್ಫೂರ್ತಿಯನ್ನು ತುಂಬುತ್ತವೆ ಮತ್ತು ಯಾವುದೇ ರೀತಿಯ ಅನ್ಯಾಯ ಹಾಗು ಅಸಮಾನತೆಯ ವಿರುದ್ಧ ಹೋರಾಟದಲ್ಲಿ ತೊಡಗುವುದು ಶಾಸನಬದ್ಧವಾದುದು ಮತ್ತು ಪ್ರಜಾಪ್ರಭುತ್ವದ ಆಶಯಗಳಿಗೆ ಪೂರಕವಾದುದು ಎಂದು ಉತ್ತೇಜಿಸುತ್ತವೆ. ಇದು ಖಂಡಿತವಾಗಿಯೂ ಈ ಪಠ್ಯಪುಸ್ತಕಗಳಲ್ಲಿ ಪೌರತ್ವ ಮತ್ತು ಪೌರತ್ವದ ಶಿಕ್ಷಣದ ಪರಿಕಲ್ಪನೆಗಳನ್ನು ನೋಡುವ ದೃಷ್ಟಿಕೋನದಲ್ಲಿನ ಬದಲಾವಣೆಯ ಗುರುತಾಗಿದೆ.

**ಶಿಕ್ಷಕರ ಪಾತ್ರ:**

ಪಠ್ಯಪುಸ್ತಕಗಳು ರಾಷ್ಟ್ರೀಯ ಕಲ್ಪನೆಯಲ್ಲಿರುವ ಪೌರತ್ವದ ಸ್ವರೂಪವನ್ನು ಒದಗಿಸಬಹುದಾದರೂ, ಆ ಕಾಣ್ಕೆಯನ್ನು ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಮನಗಾಣಿಸುವಲ್ಲಿ ಶಿಕ್ಷಕರ ಪಾತ್ರ ನಿರ್ಣಾಯಕವಾದುದು. ಮೊದಲಿಗೆ, ತರಗತಿ ಕೊಠಡಿಯಲ್ಲಿ ವಿದ್ಯಾರ್ಥಿಗಳು ಯಾವುದೇ ಹಿಂಜರಿಕೆಯಿಲ್ಲದೆ ನಾನಾ ವಿಷಯಗಳನ್ನು ಕುರಿತು ತಮ್ಮ ಆಲೋಚನೆ ಹಾಗು ವಿಚಾರಗಳನ್ನು ಯಾವುದೇ ಹಿಂಜರಿಕೆಯಿಲ್ಲದೆ ಅಭಿವ್ಯಕ್ತಗೊಳಿಸಲು ಸಾಧ್ಯವಾಗುವಂಥ ವಾತಾವರಣವನ್ನು ಶಿಕ್ಷಕರು ಸೃಷ್ಟಿಸುವುದು ಬಹಳ ಮುಖ್ಯ. ಮಕ್ಕಳು ತಮ್ಮ ವೈವಿಧ್ಯಮಯ ಮತ್ತು ಬಹುತ್ವದ ದೃಷ್ಟಿಕೋನಗಳನ್ನು ಬಾಯಿ ಮುಚ್ಚಿಸುತ್ತಾರೆ ಇಲ್ಲವೇ ತಮ್ಮ ಬಗ್ಗೆ ಯಾವುದೇ ನಿಲುವನ್ನು ತಾಳುತ್ತಾರೆ ಎನ್ನುವ ಭೀತಿಯಿಲ್ಲದೆ ಅಭಿವ್ಯಕ್ತಿಸುವ ಪ್ರಜಾಸತ್ತಾತ್ಮಕ ಸಂಸ್ಕೃತಿಯನ್ನು ಸೃಷ್ಟಿಸುವುದು ಈ ಆಲೋಚನೆಯ ಹಿಂದಿನ ಉದ್ದೇಶ.

ವಿದ್ಯಾರ್ಥಿಗಳು ಚರ್ಚಿಸುತ್ತಿರುವ ವಿಷಯಕ್ಕೆ ಸಂಬಂಧಿಸಿದಂತೆ ತಮ್ಮ ಬದುಕಿನ ದೈನಂದಿನ ಅನುಭವಗಳನ್ನು ಆಧರಿಸಿದ ಸೂಕ್ತ ಸ್ಥಳೀಯ ಉದಾಹರಣೆಗಳನ್ನು ತರುವಂತೆ ಉತ್ತೇಜಿಸುವುದು ಶಿಕ್ಷಕರಿಗೆ ಸಾಧ್ಯವಾಗಬೇಕು. ಶಿಕ್ಷಕರು ಪಠ್ಯಪುಸ್ತಕದಾಚೆಗೆ ವಿದ್ಯಾರ್ಥಿಗಳನ್ನು ಕರೆದೊಯ್ದಲ್ಲಿ ಮಾತ್ರ ಇದು ಸಾಧ್ಯವಾಗಲಿದೆ. ಇಂಥ ವಿಧಾನಗಳು ತರಗತಿಯಲ್ಲಿನ ಚರ್ಚೆಯನ್ನು ಸಮೃದ್ಧಗೊಳಿಸುವ ಜೊತೆಗೆ, ಉರುಹಚ್ಚುವಿಕೆಯನ್ನು ತಡೆಯುತ್ತದೆ; ದೀರ್ಘಕಾಲದಲ್ಲಿ ವಿದ್ಯಾರ್ಥಿಗಳ ಕಲಿಕೆಯನ್ನು ಬಲಪಡಿಸುತ್ತದೆ.

ಮಕ್ಕಳು ಪಠ್ಯಪುಸ್ತಕ ಮಾತ್ರವಲ್ಲದೆ, ಮುದ್ರಣ ಹಾಗು ವಿದ್ಯುನ್ಮಾನ ಮಾಧ್ಯಮ ಸೇರಿದಂತೆ ನಾನಾ ಮೂಲಗಳಿಂದ ಜ್ಞಾನವನ್ನು ಪಡೆದುಕೊಳ್ಳಬಹುದು ಎಂಬುದನ್ನು ಶಿಕ್ಷಕರು ಅರ್ಥ ಮಾಡಿಕೊಳ್ಳಬೇಕಿದೆ. ಹೀಗಾಗಿ, ಶಿಕ್ಷಕರು ಅಗತ್ಯವಿರುವ ಸ್ಥಳೀಯ ಹಾಗು ರಾಷ್ಟ್ರೀಯ ಸಂಗತಿಗಳ ಬಗ್ಗೆ ಅರಿವು ಹೊಂದಿರಬೇಕು ಮತ್ತು ಅಗತ್ಯವಿರುವಾಗ ವಿದ್ಯಾರ್ಥಿಗಳನ್ನು ಚರ್ಚೆಯಲ್ಲಿ ತೊಡಗಿಸುವ ಸಾಮರ್ಥ್ಯ ಹೊಂದಿರಬೇಕು.

ಎಸ್‌ಪಿಎಲ್ ಪಠ್ಯಪುಸ್ತಕವೊಂದರಲ್ಲಿ (ಶಿಕ್ಷಕರಿಗೆ ಪರಿಚಯಾತ್ಮಕ ಟಿಪ್ಪಣಿ, ಎಸ್‌ಪಿಎಲ್ III) ಈ ಸರಣಿಯು ವಿಶೇಷವಾಗಿ ಜಾತಿ, ಲಿಂಗ, ವರ್ಗ ಮತ್ತು ಧರ್ಮವನ್ನು ಆಧರಿಸಿದ ಅಸಮಾನತೆ ಬಗ್ಗೆ ವಿವರಿಸುತ್ತದೆ ಮತ್ತು ತರಗತಿ ಕೊಠಡಿಯಲ್ಲಿ ಇಂಥ ವ್ಯತ್ಯಾಸಗಳನ್ನು ಒಳಗೊಂಡಿರುವ ಎಲ್ಲ ಸಾಧ್ಯತೆಯಿದೆ ಎಂದು ಹೇಳಲಾಗಿದೆ. ಇದನ್ನು ಮನಸ್ಸಿನಲ್ಲಿ ಇರಿಸಿಕೊಂಡು, ಇಂಥ ವಿಷಯಗಳನ್ನು ಚರ್ಚಿಸುವಾಗ ಶಿಕ್ಷಕರು ಇನ್ನಷ್ಟು ಸೂಕ್ಷ್ಮತೆಯನ್ನು ತೋರಿಸುವುದು ಮುಖ್ಯವಾಗಲಿದೆ.

**ಮುಕ್ತಾಯ:**

ಪಠ್ಯಪುಸ್ತಕಗಳು ದೇಶದ ಸಾಮೂಹಿಕ ಕಲ್ಪನೆಯನ್ನು ರೂಪು–ಗೊಳಿಸುವ ಸಾಂಸ್ಕೃತಿಕ ಸಾಧನಗಳು. ಎನ್‌ಸಿಎಫ್ 2005ರ ಜಾರಿಯ ಬಳಿಕ ಪರಿಚಯಿಸಲ್ಪಟ್ಟ 'ದ ಲುಕ್ಕಿಂಗ್ ಅರೌಂಡ್ ಸಿರೀಸ್' ಮತ್ತು ಎಸ್‌ಪಿಎಲ್ ಪಠ್ಯಪುಸ್ತಕಗಳು ಭಾರತೀಯ ಸಂವಿಧಾನದಲ್ಲಿನ ಮೌಲ್ಯಗಳಿಗೆ ಅನುಗುಣವಾದ ಪೌರತ್ವ ಶಿಕ್ಷಣದ ರೂಪುರೇಷೆಯನ್ನು ಹೇಗೆ ರೂಪಿಸಬೇಕು ಎಂಬುದನ್ನು ಯಶಸ್ವಿಯಾಗಿ ತೋರಿಸಿಕೊಟ್ಟಿದೆ. ಮೇಲಿನ ವಿಶ್ಲೇಷಣೆಯು ಕಾಣಿಸುವಂತೆ ರಾಷ್ಟ್ರವನ್ನು ಕಲ್ಪಿಸಿಕೊಳ್ಳುವುದು ಹೇಗೆ, ಲಿಂಗ ಸಂಬಂಧಿತ ವಿಷಯಗಳನ್ನು ಹೇಗೆ ನೋಡಬೇಕು ಮತ್ತು ಮಾನವಹಕ್ಕುಗಳ ಚೌಕಟ್ಟಿನಲ್ಲಿ ಪೌರತ್ವವನ್ನು ಹೇಗೆ ಸಂರಚಿಸಲಾಗಿದೆ ಎಂಬುದನ್ನು ವಿಶದಪಡಿಸಲಾಗಿದೆ. ಈ ಆಲೋಚನೆಗಳು ತರಗತಿ ಕೊಠಡಿಯಲ್ಲಿ ಶಿಕ್ಷಕರ ಮಧ್ಯಸ್ಥಿಕೆಯಲ್ಲಿ ಹೇಗೆ ಅನುಕರಿಸಲ್ಪಡುತ್ತವೆ ಎಂಬುದನ್ನು ನೋಡಬೇಕಿದೆ.

1. ಎನ್‌ಸಿಎಫ್ 2005, ಯುಪಿಎ–1ರ ಅವಧಿಯಿಂದ (2004–2014) ಅನುಷ್ಠಾನದಲ್ಲಿದ್ದು, ಕಾಲಾವಧಿಯನ್ನು ಮೀರಿ ಅಧಿಕಾರ ಹಸ್ತಾಂತರವಾಗಿ ಇನ್ನೊಂದು ಸರ್ಕಾರ ರೂಪುಗೊಂಡ ಮೇಲೂ ಜಾರಿಯಲ್ಲಿದೆ.
2. ಮುಂದೆ 'ಲುಕ್ಕಿಂಗ್ ಅರೌಂಡ್' ಮತ್ತು 'ಸೋಷಿಯಲ್ ಆಂಡ್ ಪೊಲಿಟಿಕಲ್ ಲೈಫ್' ಅನ್ನು ಎಲ್‌ಎ ಹಾಗು ಎಸ್‌ಪಿಎಲ್ ಎಂದು ಕರೆಯಲಾಗುತ್ತಿದೆ.

**ಉಲ್ಲೇಖಗಳು:**


Advani, Shalini. 2009. *Schooling the National Imagination: Education, English and the Indian Modern*. New Delhi: Oxford University Press.

Batra, Poonam. 2010. *Social Science Learning in Schools: Perspectives and Challenges*. New Delhi: Sage Publications.

Bhog, Dipta (Ed.). 2010. *Textbook Regimes: An Overall Analysis*. New Delhi: Nirantar.

Jain, Manish. 2004. 'Civics, Citizen and Human Rights: Civics Discourse in India', *Contemporary Education Dialogue*, 1(2): 165-198.

Jayal, Niraja Gopal. 2013. *Citizenship and its Discontents: An Indian History.* Ranikhet: Permanent Black

NCERT textbooks mentioned in the text:

- *National Curriculum Framework for School Education*. 2000. NCERT: New Delhi
- *National Curriculum Framework*. 2005. NCERT: New Delhi





**ರೂಪಮಂಜರಿ ಹೆಗ್ಡೆ,** ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಿಂದ ಶೈಕ್ಷಣಿಕ ಸಮಾಜಶಾಸ್ತ್ರದಲ್ಲಿ ಪಿಎಚ್‌ಡಿ ಪದವಿಯನ್ನು ಪಡೆದಿದ್ದಾರೆ. ಸಮಾಜವಿಜ್ಞಾನದ ಪಠ್ಯಕ್ರಮ, ಪಠ್ಯಪುಸ್ತಕಗಳು ಮತ್ತು ತರಗತಿ ಕೊಠಡಿಯಲ್ಲಿನ ಬೋಧನಾ ವಿಧಾನಗಳು ಅವರ ಸಂಶೋಧನೆಯ ಕ್ಷೇತ್ರವಾಗಿದೆ. ಪ್ರಸ್ತುತ ಗುರುಗ್ರಾಮದ ಸ್ವಯಂಸೇವಾ ಸಂಘಟನೆ 'ಐ ಆಮ್ ಎ ಟೀಚರ್'ನಲ್ಲಿ ಶಿಕ್ಷಕರ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಶೈಕ್ಷಣಿಕ ಕ್ಷೇತ್ರದಲ್ಲಿ ಇಪ್ಪತ್ತು ವರ್ಷದ ಅನುಭವ ಹೊಂದಿರುವ ರೂಪಮಂಜರಿ ಅವರು, ಐ ಡಿಸ್ಕವರಿ ಎಜುಕೇಷನ್ (ಗುರುಗ್ರಾಮ) ಮತ್ತು ನೀವ್ (NEEV -New Delhi) ತಂಡದ ಮುಂಚೂಣಿ ಸದಸ್ಯೆಯಾಗಿ ಸಮಾಜವಿಜ್ಞಾನ ಹಾಗು ಇವಿಎಸ್‌ನಲ್ಲಿ ಅನುಭವಾತ್ಮಕ ತರಗತಿ ಕೋಣೆಗಳನ್ನು ರೂಪಿಸಲು ಬೋಧನಾ ವಿನ್ಯಾಸ ಮತ್ತು ಮೌಲ್ಯಮಾಪನ ಕ್ಷೇತ್ರದಲ್ಲಿ ವಿಸ್ತೃತವಾಗಿ ಕಾರ್ಯ ನಿರ್ವಹಿಸಿದ್ದಾರೆ. ಭೂತಾನ್ ದೇಶದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಅಭಿವೃದ್ಧಿ ಯೋಜನೆಯ ಭಾಗವಾಗಿದ್ದರು. ಅವರ ಇಮೇಲ್: rupamanjarihegde@gmail.com



ಅನುವಾದ: **ಮಾಧವ ಐತಾಳ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಶಾಲಾ ಮೂಲಕ ಪ್ರಜಾಪ್ರಭುತ್ವದ ಕಲಿಕೆ

ಅಭಿಲಾಷಾ ಅವಸ್ಥಿ

2019ರ ಚಳಿಗಾಲದಲ್ಲಿ, ಶಾಲೆಗಳಲ್ಲಿ ಪ್ರಜಾಪ್ರಭುತ್ವವು ಹೇಗೆ ಕೆಲಸ ಮಾಡುತ್ತದೆ ಹಾಗು ಪ್ರಜಾಸತ್ತೆಗೆ ಸಂಬಂಧಿಸಿದ ಪರಿಕಲ್ಪನೆಗಳನ್ನು ಬೋಧಿಸುವ ಪರಿಣಾಮಗಳನ್ನು ತಿಳಿದುಕೊಳ್ಳುವ ಉದ್ದೇಶದಿಂದ ದಿನೇಶಪುರದ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ನಾನು ಸೀಮಿತವಾದ ಒಂದು ಸಂಶೋಧನಾ ಅಧ್ಯಯನವನ್ನು ನಡೆಸಿದೆ. ನಾನು ಆರು, ಏಳು ಮತ್ತು ಎಂಟನೇ ತರಗತಿಯಲ್ಲಿ ಕೆಲಸ ಮಾಡಿದರೂ ಏಳನೇ ತರಗತಿಯೇ ನನ್ನ ಅಧ್ಯಯನದ ಕೇಂದ್ರಬಿಂದುವಾಗಿತ್ತು. 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಅನ್ವಯ ಪರಿಷ್ಕೃತಗೊಂಡ ಎನ್‌ಸಿಇಆರ್‌ಟಿ (NCERT) ಸಮಾಜ ವಿಜ್ಞಾನ ಪಠ್ಯಪುಸ್ತಕದಲ್ಲಿ ಕೊಟ್ಟಿರುವಂತೆ ಪ್ರಜಾಸತ್ತೆಯ ಕೆಲವು ಮೂಲ ಪರಿಕಲ್ಪನೆಗಳನ್ನು ನಾನು ಅವರಿಗೆ ಬೋಧಿಸಿದೆ.

**ಪ್ರಜಾಪ್ರಭುತ್ವದ ಇರುವಿಕೆ**

**ಶಾಲಾ ಪಠ್ಯಕ್ರಮ**

ಮಗುವಿನ ಕಲಿಕೆಯನ್ನು ರೂಪಿಸುವಲ್ಲಿ ಅನೇಕ ಸಂಗತಿಗಳ ಪಾತ್ರವಿರುತ್ತದೆ. ಅವುಗಳಲ್ಲಿ ಮುಖ್ಯವಾದುದು ಶಾಲಾ ಪಠ್ಯಕ್ರಮ. ಪಠ್ಯಕ್ರಮದ ಮೇಲೆ ಇತರ ಹಲವು ಸಂಗತಿಗಳು ಪರಿಣಾಮ ಬೀರುತ್ತದೆಯಾದರೂ, ಶಾಲಾ ಸಂದರ್ಭದಲ್ಲಿ ಒಳಗೊಳ್ಳುವ ಗೌಪ್ಯ ಪಠ್ಯಕ್ರಮವೇ ಗಮನಾರ್ಹ ಅಂಶವಾಗಿರುತ್ತದೆ.

ದಿನೇಶಪುರದ ಅಜೀಂ ಪ್ರೇಮ್‌ಜಿ ಶಾಲೆಯ ಸಂದರ್ಭದಲ್ಲಿ ನಾನು ಗಮನಿಸಿದಂತೆ, ಭಾರತದ ಪ್ರಜಾಪ್ರಭುತ್ವದಲ್ಲಿ ಮೂಲಭೂತ ತತ್ವವೆಂದು ವರ್ಣಿಸಲಾಗಿರುವ ಸಮಾನತೆಯನ್ನು ಅರಿತು-ಕೊಳ್ಳಲಾಗಿತ್ತು. ಬಹುತೇಕ ಮಕ್ಕಳ ಜೊತೆಗೆ ಕತೆಗಳ ಬಗ್ಗೆ ಚರ್ಚಿಸಿದಾಗ ಮತ್ತು ಚಟುವಟಿಕೆಗಳಲ್ಲಿ ಗಮನಿಸಿದಂತೆ ಅವರು ಭಾರತದ ಪ್ರಜಾಪ್ರಭುತ್ವಕ್ಕೆ ವಿರುದ್ಧವಾದ ಅಂಶಗಳನ್ನು ಅರ್ಥೈಸಿಕೊಳ್ಳಲು ಶಕ್ತರಾಗಿದ್ದುದನ್ನು ಗಮನಿಸಿದೆ. ಸಂವಿಧಾನಕ್ಕೆ ವಿರುದ್ಧವಾದುದನ್ನು ಅರ್ಥ ಮಾಡಿಕೊಳ್ಳುವ ಮತ್ತು ಗುರುತಿಸುವ ಆಂತರಿಕ ಸಾಮರ್ಥ್ಯವನ್ನು ಹಾಗು ಯಾವ ಸಂದರ್ಭಗಳಲ್ಲಿ ಹಾಗೆ ಆಗುತ್ತವೆ ಎನ್ನುವುದನ್ನು ನಾನು ವಿದ್ಯಾರ್ಥಿಗಳಲ್ಲಿ ಸ್ಪಷ್ಟವಾಗಿ ಗಮನಿಸಬಹುದಾಗಿತ್ತು.

ಶೈಕ್ಷಣಿಕವಾಗಿ (ಆ ಶಾಲೆಯು ಎನ್‌ಸಿಇಆರ್‌ಟಿ ಪಠ್ಯವನ್ನು ಅಳವಡಿಸಿಕೊಂಡಿದೆ), ಮೂರೂ ತರಗತಿಗಳಲ್ಲಿ 'ಸಮಾನತೆ'ಯನ್ನು ಬೋಧಿಸಲಾಗುತ್ತಿತ್ತು. ಏಳನೇ ತರಗತಿಯಲ್ಲಿ, ನಾನು ಲಿಂಗ ಸಮಾನತೆಯನ್ನು ಬೋಧಿಸುತ್ತಿದ್ದಾಗ, ಅವರಲ್ಲಿನ ಸಮಾನತೆಯ ಕಲ್ಪನೆಯೂ ಬೆಳಕಿಗೆ ಬಂದಿತು. ಹುಡುಗರು ತಮ್ಮಂತೆಯೇ ಯಾಕೆ ಕೆಲಸ ಮಾಡಿಸಲಾಗುವುದಿಲ್ಲ ಎಂದು ಹುಡುಗಿಯರು ಪ್ರಶ್ನಿಸಿದರು. ಕೆಲವು ಹುಡುಗರು ತಾವು ಮನೆಯ ಎಲ್ಲಾ ಕೆಲಸಗಳಲ್ಲಿ ಸಮಾನವಾಗಿ ತೊಡಗಿಸಿಕೊಳ್ಳುತ್ತೇವೆ ಎಂದು ಹೇಳಿದರು.

ನಾನು ಏಳನೇ ತರಗತಿಯ ವಿದ್ಯಾರ್ಥಿಗಳಿಗೆ ಲಿಂಗ ಸಮಾನತೆಯ ಕುರಿತಾದ ಕಿರುಚಿತ್ರ 'ದಿ ಇಂಪಾಸಿಬಲ್ ಡ್ರೀಮ್'ಅನ್ನು (The Impossible Dream) ತೋರಿಸಿದೆ. ಹಾಸ್ಯ ಮತ್ತು ಅದ್ಭುತವಾದ ದೃಶ್ಯಗಳ ಮೂಲಕ ಈ ಕಿರುಚಿತ್ರದಲ್ಲಿ, ಮನೆಗೆಲಸ ಮತ್ತು ಮಕ್ಕಳ ಪೋಷಣೆಯಲ್ಲಿ ಗಂಡಸರೂ ಸಹ ಜವಾಬ್ದಾರಿಯನ್ನು ಹಂಚಿ-ಕೊಳ್ಳಬೇಕಾದ ಅವಶ್ಯಕತೆಯನ್ನು ತೋರಿಸಿಕೊಡಲಾಗಿದೆ. ವಿದ್ಯಾರ್ಥಿಗಳು ಅದರಲ್ಲಿನ ನ್ಯೂನತೆಗಳನ್ನು ತಕ್ಷಣವೇ ಗುರುತಿಸಿದರು ಮತ್ತು ಅವೆಲ್ಲವನ್ನು ತಮ್ಮ ಬದುಕಿಗೆ ಅನ್ವಯಿಸಿಕೊಂಡರು. ತಾವು ಮತ್ತು ಇತರರು ಲಿಂಗದ ಕಾರಣಕ್ಕಾಗಿ ಎದುರಿಸುತ್ತಿರುವ ತಾರತಮ್ಯಗಳ ಬಗ್ಗೆ ಅವರು ಉದಾಹರಣೆ-ಯೊಂದಿಗೆ ಹೇಳಿಕೊಂಡರು. ಆಗ ನಾವು, ಸಮಾನತೆ ಬಗ್ಗೆ ಸಂವಿಧಾನದಲ್ಲಿ ಏನು ಹೇಳಿದೆ ಎಂದು ತಿಳಿಸಲಾರಂಭಿಸಿದೆವು. ಆದರೆ ಅಚ್ಚರಿ ಎಂಬಂತೆ ಏಳನೇ ತರಗತಿಯ ವಿದ್ಯಾರ್ಥಿಗಳು ಈ ಪರಿಕಲ್ಪನೆಯನ್ನು ತುಂಬಾ ಆಂತರಿಕವಾಗಿ ಗ್ರಹಿಸುವಂತೆ ಕಂಡುಬಂದರು. ತಮ್ಮ ಮನೆಗಳಲ್ಲಿ ಕಾಣುವ ಅಸಮಾನತೆಯ ಬಗ್ಗೆ, ವಿಶೇಷವಾಗಿ ಹೆಣ್ಣುಮಕ್ಕಳಿಗಿದ್ದ ಅಸಮಾನತೆಯ ಬಗ್ಗೆ ಅಂದರೆ, ಅವರು ಶಾಲಾ ಸಮಯದ ಬಳಿಕ ಮನೆಗೆಲಸಗಳನ್ನು ಮಾಡಬೇಕಾದ ಅನಿವಾರ್ಯತೆ ಮತ್ತು ಗಂಡು ಮಕ್ಕಳಿಗೆ ಅದರಿಂದ ವಿನಾಯಿತಿ ಇದ್ದುದರ ಬಗ್ಗೆ ಅವರು ಮುಕ್ತವಾಗಿ ಮಾತನಾಡಿದರು.

'ನೀವು ಈ ಶಾಲೆ ಮತ್ತು ತರಗತಿಯಲ್ಲಿ ಸಮಾನರಾಗಿದ್ದೀರಿ ಅಂದುಕೊಂಡಿದ್ದೀರಾ?' ಎಂದು ನಾನು ಕೇಳಿದಾಗ ಅವರ ಉತ್ತರದಲ್ಲಿ ಹೌದೆಂಬ ಖಚಿತತೆ ಇತ್ತು. 'ಹಾಗೆ ಯಾಕೆ ಹೇಳುತ್ತೀರಿ' ಎಂದು ಕೇಳಿದ್ದಕ್ಕೆ, 'ಶಾಲೆಯಲ್ಲಿ ನಮ್ಮನ್ನು ಸಮಾನವಾಗಿ ಕಾಣಲಾಗುತ್ತದೆ' ಎಂದು ಉತ್ತರಿಸಿದರು. ಶಾಲಾ ಪ್ರಾಂಶುಪಾಲರು ತಮ್ಮೆಲ್ಲರನ್ನೂ ಸಮಾನವಾಗಿ ಕಾಣುತ್ತಾರೆ. ಅಲ್ಲದೆ ತಾರತಮ್ಯ ಕಂಡುಬಂದಲ್ಲಿ ಅದನ್ನು ವಿರೋಧಿಸುತ್ತಾರೆ ಎಂದು ಉದಾಹರಣೆಯನ್ನೂ ಕೊಟ್ಟರು.

ಏಳನೇ ತರಗತಿಯ 'ಗ್ರೋಯಿಂಗ್ ಅಪ್ ಆಸ್ ಬಾಯ್ಸ್ ಅಂಡ್ ಗರ್ಲ್ಸ್' (Growing up as Boys and Girls) ಎಂಬ ಪಠ್ಯ-ಪುಸ್ತಕದಿಂದ 'ಮೈ ಮದರ್ ಡಸನ್ಟ್ ವರ್ಕ್' (My Mother Doesn't Work) ಎಂಬ ಪಾಠವನ್ನು ಓದಿ, ಮನೆಕೆಲಸಗಳಲ್ಲಿ ನೆರವಾಗುವ ವಿಚಾರವನ್ನು ಗಂಭೀರವಾಗಿ ಚರ್ಚಿಸಿದೆವು. ಹುಡುಗರು ಯಾಕೆ ಮನೆಯ ಕೆಲಸಗಳಲ್ಲಿ ನೆರವಾಗುವುದಿಲ್ಲ ಎಂಬುದಕ್ಕೆ ಕಾರಣ ಕಂಡುಕೊಳ್ಳುವ ಹಂತದಲ್ಲಿ, ತಮ್ಮ ಮನೆಗಳಲ್ಲಿ ಯಾವುದೇ ಕೆಲಸಗಳಿಗೆ ನೆರವಾಗುವಂತೆ ತಮಗೆ ಪೋಷಕರು ಹೇಳುವುದಿಲ್ಲ. ಯಾಕೆಂದರೆ, ಮನೆಯ ಕೆಲಸ ಮಾಡುವುದು ಹುಡುಗರ ಜವಾಬ್ದಾರಿ ಅಲ್ಲ ಎಂದು ತಮ್ಮ ಪೋಷಕರಲ್ಲಿ ಹಳೆಯ ಕಾಲದ ನಂಬಿಕೆ ಬೇರೂರಿದೆ' ಎಂದು ಹುಡುಗರು ತಿಳಿಸಿದರು. 'ನಾನು ಪ್ರತಿದಿನ ಪೂಜೆ ಮಾಡಲೇ ಎಂದು ನನ್ನ ಅಜ್ಜಿಯನ್ನು ಒಮ್ಮೆ ಕೇಳಿದೆ. ಅದಕ್ಕೆ ಅವರು, 'ಅದು ಹುಡುಗರ ಕೆಲಸವಲ್ಲ' ಎಂದು ಹೇಳಿದರು – ಎಂದು ಒಬ್ಬ ಬಾಲಕ ವಿವರಿಸಿದ. ಗಂಡು ಮಕ್ಕಳು

ಮತ್ತು ಹೆಣ್ಣುಮಕ್ಕಳಿಗೆ ಕೆಲಸ ಹಂಚಿಕೆ ಮಾಡುವ ವಿಚಾರವಾಗಿ ಮನೆಯವರಲ್ಲಿ ಬೇರೂರಿರುವ ಜಿಗುಟುತನವನ್ನು, ಒಬ್ಬರು ಇನ್ನೊಬ್ಬರ ಕೆಲಸವನ್ನು ಹಂಚಿಕೊಂಡು ಮಾಡುವುದಕ್ಕೂ ನಮನೀಯತೆ ಇಲ್ಲದಿರುವುದನ್ನೂ ಇದು ತೋರಿಸಿಕೊಡುತ್ತದೆ. ಶಾಲೆಯಿಂದ ಮನೆಗೆ ಹೋದಾಗ ಎಷ್ಟೇ ದಣಿವಾಗಿದ್ದರೂ ಮನೆಕೆಲಸಗಳನ್ನು ಅನಿವಾರ್ಯವಾಗಿ ಮಾಡಲೇಬೇಕು ಎಂದು ಮನೆ ಮಂದಿಯ ನಿರೀಕ್ಷೆಯಾಗಿರುತ್ತದೆ ಎಂದು ಹುಡುಗಿಯೊಬ್ಬಳು ಹೇಳಿದಳು. ಇದೇ ವಿಚಾರವನ್ನು ಏಳನೇ ತರಗತಿಯ ಅನೇಕ ಗುಂಪುಗಳೊಡನೆ ಚರ್ಚಿಸಿದಾಗ ಹಲವು ರೀತಿಯ ವಾದಗಳು ನಡೆದು, ಹಳೆಯ ತಲೆಮಾರಿನವರ ಸಂಕುಚಿತ ಮನೋಭಾವದ ಬಗ್ಗೆ ಪರ ಮತ್ತು ವಿರೋಧದ ಅಭಿಪ್ರಾಯಗಳು ವ್ಯಕ್ತವಾದವು. ಆರರಿಂದ ಏಳನೇ ತರಗತಿಯವರೆಗಿನ ಪ್ರತಿಯೊಬ್ಬ ವಿದ್ಯಾರ್ಥಿಯಲ್ಲೂ ಸಮಾನತೆಯ ಪರಿಕಲ್ಪನೆಯ ಬಗ್ಗೆ ಅರಿವು ಇತ್ತು. ತಮ್ಮ ಬಗ್ಗೆ ಪಕ್ಷಪಾತ ಮಾಡಬಾರದು, ಒಂದು ವೇಳೆ ಆದದ್ದರೂ, ಆ ವಿಚಾರದಲ್ಲಿ ನೆರವು ಪಡೆಯಬೇಕು ಎಂಬ ತಿಳುವಳಿಕೆ ಅವರಲ್ಲಿತ್ತು. ಆದ್ದರಿಂದ, ಈ ಪರಿಕಲ್ಪನೆಯ ಬಗ್ಗೆ ಈ ಹಂತದ ವಿದ್ಯಾರ್ಥಿಗಳು ತಕ್ಷಣ ಸ್ಪಂದಿಸಿದ ರೀತಿಯ ಜೊತೆಗೆ ಸಮಾನತೆಯ ದೃಷ್ಟಿಕೋನವನ್ನು ಎತ್ತಿಹಿಡಿದುದಕ್ಕೆ ಮೆಚ್ಚುಗೆ ವ್ಯಕ್ತಪಡಿಸಲಾಯಿತು. ಪಠ್ಯಪುಸ್ತಕದಲ್ಲಿ ಯಾವುದೋ ಅಪರಿಚಿತ ಪರಿಕಲ್ಪನೆಯನ್ನು ನೀಡಲಾಗಿದೆ ಎಂದು ಯಾರೂ ಭಾವಿಸದೆ ಹೆಚ್ಚು ವಾಸ್ತವಿಕವಾದ ಹಾಗು ಸಂಬಂಧಪಟ್ಟ ವಿಚಾರಗಳನ್ನೇ ಚರ್ಚಿಸಿದರು. ಶಾಲೆಯಲ್ಲಿ ಕಾಳಜಿಪೂರ್ವಕವಾಗಿ ನಿರ್ಮಿಸಲಾಗಿರುವ ಪಕ್ಷಪಾತ ವಿರೋಧಿ ವಾತಾವರಣದ ನೆರವಿನೊಂದಿಗೆ, ಎನ್‌ಸಿಇಆರ್‌ಟಿ ಪಠ್ಯ-ಪುಸ್ತಕದಲ್ಲಿನ ಅಧ್ಯಾಯಗಳನ್ನು ಕೈಗೆತ್ತಿಕೊಂಡಾಗ ಅವರು ಅದರೊಂದಿಗೆ ಆಳವಾಗಿ ತಮ್ಮನ್ನು ತೊಡಗಿಸಿಕೊಂಡರು.

**ತರಗತಿ ಮತ್ತು ವಿದ್ಯಾರ್ಥಿ ಪ್ರತಿನಿಧಿಗಳು**

ಪ್ರತಿ ತರಗತಿಯಲ್ಲೂ ಇಬ್ಬರು ತರಗತಿ ಪ್ರತಿನಿಧಿಗಳು (class representatives) ಇದ್ದರು. ತಲಾ ಒಂದು ಗಂಡು ಮಗು ಹಾಗು ಒಂದು ಹೆಣ್ಣು ಮಗು. ಅವರಿಗೆ ಬೇರೆಬೇರೆ ರೀತಿಯ ಕರ್ತವ್ಯಗಳಿದ್ದವು. ಉದಾಹರಣೆಗೆ, ತರಗತಿಯ ಶುಚಿತ್ವ ಕಾಪಾಡುವುದು, ಇತರ ವಿದ್ಯಾರ್ಥಿಗಳಲ್ಲಿನ ಶಿಸ್ತು, ತರಗತಿಯ ಆಂತರಿಕ ಸಮಸ್ಯೆಗಳನ್ನು ಬಗೆಹರಿಸುವುದು, ಮಹತ್ವದ ವಿಷಯಗಳ ಕುರಿತು ಅಧ್ಯಾಪಕರನ್ನು ಸಂಪರ್ಕಿಸುವುದು ಇತ್ಯಾದಿ. ಜೊತೆಗೆ ಅವರಿಗೆ ಶಾಲೆಯ ಮಟ್ಟದ ಕರ್ತವ್ಯಗಳೂ ಇದ್ದವು. ಉದಾಹರಣೆಗೆ: ಮಧ್ಯಾಹ್ನದ ಬಿಸಿಯೂಟ ಬಡಿಸುವುದು, ಊಟದ ಬಳಿಕ ಪ್ರತಿ ತಟ್ಟೆಯನ್ನೂ ಸ್ವಚ್ಛವಾಗಿ ತೊಳೆದಿಡಲಾಗಿದೆಯೇ ಎಂದು ನೋಡುವುದು, ಶೂಗಳನ್ನು ಸೂಕ್ತ ಸ್ಥಳಗಳಲ್ಲಿ ಇಡಲಾಗಿದೆಯೇ ಎಂದು ನೋಡುವುದು, ತಡವಾಗಿ ಶಾಲೆಗೆ ಬಂದವರ ಹೆಸರುಗಳನ್ನು ಬರೆದಿಡುವುದು ಇತ್ಯಾದಿ.

ಇಷ್ಟಲ್ಲದೆ, ಶಾಲೆಯಲ್ಲಿ ಇನ್ನಿಬ್ಬರು ವಿದ್ಯಾರ್ಥಿಗಳು- ಒಬ್ಬ ಹುಡುಗ ಮತ್ತು ಒಬ್ಬ ಹುಡುಗಿ- ಶಾಲಾ ಪ್ರತಿನಿಧಿಗಳಾದ್ದರು. ಅಲ್ಲದೆ ಓರ್ವ ನ್ಯಾಯಾಂಗ ಅಧಿಕಾರಿಯೂ ಇದ್ದರು. ಈ ಎಲ್ಲಾ ಪ್ರತಿನಿಧಿಗಳು- ತರಗತಿ ಪ್ರತಿನಿಧಿ, ಶಾಲಾ ಪ್ರತಿನಿಧಿ ಮತ್ತು ನ್ಯಾಯಾಂಗ ಅಧಿಕಾರಿ ಪ್ರತಿ ಬುಧವಾರ ಸಭೆ ಸೇರಿ ತಮ್ಮತಮ್ಮ ಜವಾಬ್ದಾರಿ ಮತ್ತು ಕರ್ತವ್ಯಗಳ ಬಗ್ಗೆ ಚರ್ಚಿಸಿ, ತಮ್ಮತಮ್ಮ ತರಗತಿಯ ವಾತಾವರಣವನ್ನು ಬದಲಾಯಿಸಲು, ಸೌಂದರ್ಯ ಹೆಚ್ಚಿಸಲು ಯೋಜನೆಗಳನ್ನು ರೂಪಿಸುತ್ತಿದ್ದರು. ಅಲ್ಲದೆ, ಶಾಲಾ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳ ನಡುವೆ ಸಂಪರ್ಕ ಸೇತುವೆಗಳಂತೆ ಕೆಲಸ ನಿರ್ವಹಿಸುತ್ತಿದ್ದರು. ಈ ಚರ್ಚೆಗಳು ಅವರಲ್ಲಿನ ನಾಯಕತ್ವ ಗುಣವನ್ನು ಉದ್ದೀಪನಗೊಳಿಸುವ ನಿಟ್ಟಿನಲ್ಲಿ ಪಾತ್ರ ವಹಿಸಬೇಕು ಎಂಬ ಗುರಿಯನ್ನೂ ಹೊಂದಲಾಗಿತ್ತು. ಇವೆಲ್ಲವನ್ನೂ ತರಗತಿ ಪ್ರತಿನಿಧಿಗಳನ್ನು ವಿದ್ಯಾರ್ಥಿಗಳ ಮೂಲಕ ಚುನಾಯಿಸಿ, ಈ ತರಗತಿ ಪ್ರತಿನಿಧಿಗಳು ಒಟ್ಟಾರೆ ವಿದ್ಯಾರ್ಥಿ ಸಮುದಾಯದ ಏಳಿಗೆಗಾಗಿ ತೀರ್ಮಾನಗಳನ್ನು ಕೈಗೊಳ್ಳುವುದು, ಯಾವುದೇ ಸಂದರ್ಭದಲ್ಲೂ ಏಕಪಕ್ಷೀಯವಾಗಿ (ನಿರಂಕುಶ) ತೀರ್ಮಾನ ಕೈಗೊಳ್ಳದಿರುವುದು, ಇತರ ಪ್ರತಿನಿಧಿಗಳ ನಿಲುವುಗಳನ್ನೂ ಗಣನೆಗೆ ತೆಗೆದುಕೊಳ್ಳುವುದು ಹೀಗೆ ಎಲ್ಲವನ್ನು ಪ್ರಜಾಪ್ರಭುತ್ವದ ನಿಯಮಾವಳಿಯ ಆಧಾರದಲ್ಲಿಯೇ ಮಾಡಲಾಗುತ್ತಿತ್ತು. ಬಹುಮುಖ್ಯವಾಗಿ, ಈ ಪ್ರಕ್ರಿಯೆಗಳು ಅವರಿಗೆ ಸಂಸತ್ತು ಯಾವ ರೀತಿಯಲ್ಲಿ ಕೆಲಸ ಮಾಡಬಹುದು ಎಂಬ ತಿಳುವಳಿಕೆಯನ್ನು ನೀಡುತ್ತಿದ್ದವು. ಸಭೆಗಳಲ್ಲಿ ಪ್ರತಿಯೊಬ್ಬರೂ ಮತ ಚಲಾಯಿಸುತ್ತಿದ್ದರು ಹಾಗು ತಮ್ಮ ದೃಷ್ಟಿಕೋನಗಳನ್ನು ಹಂಚಿಕೊಳ್ಳುತ್ತಿದ್ದರು.

ಹಾಗಿದ್ದರೂ, ಸಂರಚನೆ ಮತ್ತು ತತ್ವಗಳ ನೆಲೆಯಲ್ಲಿ ಇದು ಮಾದರಿಯಾಗಿ ಕಂಡುಬಂದರೂ, ಯಾರೂ ಕ್ರಿಯಾಶೀಲರಾಗಿ ಸಲಹೆ ನೀಡುತ್ತಿರಲಿಲ್ಲ ಎಂಬುದನ್ನು ನಾನು ಬಹಳ ಬೇಗನೆ ಗಮನಿಸಿದೆ. ವಿದ್ಯಾರ್ಥಿಗಳು ತಮ್ಮ ಕೆಲಸಗಳನ್ನು ತಮ್ಮ ಪಾಡಿಗೆ ಯಥಾವತ್ತಾಗಿ ಮಾಡುತ್ತಿದ್ದ ಕಾರಣ ಇಡೀ ಪ್ರಕ್ರಿಯೆ ಯಾಂತ್ರಿಕವಾಗಿ ಸಾಗುತ್ತಿತ್ತೇ ವಿನಾ ತಮ್ಮ ಅಭ್ಯಾಸಗಳನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಳ್ಳುತ್ತಿರಲಿಲ್ಲ. 'ಪ್ರತಿನಿಧಿ' ಪದದ ಅರ್ಥವೇನು ಎಂದು ಸಮಾಜವಿಜ್ಞಾನ ತರಗತಿಯಲ್ಲಿ ಒಬ್ಬ ತರಗತಿ ಪ್ರತಿನಿಧಿಯ ಬಳಿ ನಾನು ಕೇಳಿದೆ. ವಿದ್ಯಾರ್ಥಿಯೂ ಸೇರಿದಂತೆ ಯಾರೊಬ್ಬರಿಗೂ ಅದಕ್ಕೆ ಉತ್ತರ ಗೊತ್ತಿರಲಿಲ್ಲ. ಅಂದರೆ, ಮಕ್ಕಳು ಇತರರ ಮತಗಳ ಮೂಲಕ ಚುನಾಯಿಸಿ ಬಂದಿರುವ ಕಾರಣ ತಮಗೊಂದು ಅಧಿಕಾರ ಸಿಕ್ಕಿದೆ ಎಂದು ಭಾವಿಸಿದ್ದರೇ ವಿನಾ, ವಿದ್ಯಾರ್ಥಿಗಳೊಂದಿಗೆ ಬೆರೆತು ಕೆಲಸ ಮಾಡಬೇಕು ಎಂಬ ಪರಿಕಲ್ಪನೆಯನ್ನು ಗ್ರಹಿಸಿರಲಿಲ್ಲ. ಈ ವಿದ್ಯಾರ್ಥಿಗಳ ಸಂದರ್ಭದಲ್ಲಿ, ತರಗತಿ ಪ್ರತಿನಿಧಿಯ ಕರ್ತವ್ಯವನ್ನು ಅವರು ಸರಿಯಾಗಿ ಗ್ರಹಿಸಿರಲಿಲ್ಲ. ಪ್ರತಿನಿಧಿಗಳು ತಮ್ಮ ಸಾಮರ್ಥ್ಯವನ್ನು ಅರ್ಥ-ಮಾಡಿಕೊಂಡಿದ್ದರೂ, ಅದನ್ನು ಹೊಣೆಗಾರಿಕೆಯಾಗಿ ಹೇಗೆ ಪರಿವರ್ತಿಸಿಕೊಳ್ಳಬೇಕೆಂದು ಅರಿತಿರಲಿಲ್ಲ. ವಿದ್ಯಾರ್ಥಿಗಳೂ ತಮ್ಮ ಪ್ರತಿನಿಧಿಗಳನ್ನು ಸಹಜವಾಗಿಯೇ ಪ್ರಶ್ನಿಸಬಹುದು ಹಾಗು ತಮ್ಮ ಬೇಡಿಕೆಗಳನ್ನು ಅವರ ಮುಂದಿಡಬಹುದು ಎಂದು ಭಾವಿಸಿಕೊಂಡಿರಲಿಲ್ಲ.

**ಶಿಕ್ಷಕರಿಂದ ಮಾದರಿ ನಡವಳಿಕೆಯ ಪ್ರದರ್ಶನ**

ಶಾಲಾ ಪ್ರಕ್ರಿಯೆಯಿಂದ ಹೊರಗೆ ನಾನು ಇತರ ಕೆಲವು ಉದಾಹರಣೆಗಳನ್ನು ಗಮನಿಸಿದೆ. ಅವು, ಶಿಕ್ಷಕರು ತೋರಿದ ಪ್ರಜಾಸತ್ತಾತ್ಮಕ ನಡವಳಿಕೆಯ ನಿದರ್ಶನಗಳಾಗಿದ್ದವು. ಒಂದು ನಿದರ್ಶನ ಹೀಗಿತ್ತು: ನಾನು ಕ್ರೀಡಾಂಗಣದಲ್ಲಿ ಕುಳಿತಿದ್ದಾಗ ಜಗಳವಾಡುತ್ತಿದ್ದ ಇಬ್ಬರು ವಿದ್ಯಾರ್ಥಿಗಳನ್ನು ಕೂರಿಸಿಕೊಂಡು ಕ್ರೀಡಾ ಶಿಕ್ಷಕರು ಮಾತನಾಡುತ್ತಿದ್ದುದನ್ನು ಗಮನಿಸಿದೆ. ಅವರಿಬ್ಬರನ್ನೂ ಒಟ್ಟಿಗೇ ಕೂರಿಸಿಕೊಂಡಿದ್ದ ಶಿಕ್ಷಕ ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದರು. ಅವರ ಪೋಷಕರು ಎಲ್ಲಿ ಕೆಲಸ ಮಾಡುತ್ತಾರೆ, ಮನೆಯಲ್ಲಿ ಏನಾದರೂ ಸಮಸ್ಯೆ ಇತ್ತೇ ಹಾಗು ಅಂತಿಮವಾಗಿ, ಇಬ್ಬರೂ ಜಗಳವಾಡಿದ್ದೇಕೆ ಎಂದು ಪ್ರಶ್ನಿಸುತ್ತಿದ್ದರು. ಇಬ್ಬರೂ ತಮ್ಮತಮ್ಮ ನಿಲುವುಗಳನ್ನು ಹೇಳಿಕೊಂಡರು. ವಾಸ್ತವವನ್ನು ಅರ್ಥ ಮಾಡಿಕೊಂಡ ಶಿಕ್ಷಕರು ವಿವರಗಳನ್ನು ಪರಿಶೀಲಿಸಿ, ಅವರಿಬ್ಬರು ತೆಗೆದುಕೊಳ್ಳಬಹುದಾಗಿದ್ದ ಇತರ ತಾರ್ಕಿಕ ಆಯ್ಕೆಗಳ ಬಗ್ಗೆ ಚರ್ಚಿಸಿದರು. ಅಲ್ಲದೆ ಇಬ್ಬರೂ ಒಂದಾಗುವಂತೆ

ಮಾಡಿದರು. ಇದನ್ನೆಲ್ಲ ಒಂದಷ್ಟು ವಿದ್ಯಾರ್ಥಿಗಳು ಕೇಳಿಸಿಕೊಳ್ಳುತ್ತಿದ್ದುದನ್ನೂ ನಾನು ಗಮನಿಸಿದೆ. ಹೀಗೆ ಗಮನಿಸುವ ಮೂಲಕ ಕಲಿಯುವ (Observational learning) ಪರಿಕಲ್ಪನೆಯ ಮತ್ತು ಸಮಸ್ಯೆ ಬಗೆಹರಿಸುವ ಉಪಾಯವನ್ನು ಅಂತರ್ಗತ–ಗೊಳಿಸಿಕೊಳ್ಳುವ ಸಾಧ್ಯತೆಯ ಮಹತ್ವವನ್ನು ಅರ್ಥ ಮಾಡಿಕೊಳ್ಳಲು ಇದರಿಂದ ನನಗೆ ಸಾಧ್ಯವಾಯಿತು. ವಿಶೇಷವಾಗಿ ಈ ಘಟನೆಯಲ್ಲಿ, ವಯಸ್ಕ ಮಧ್ಯಸ್ಥಿಕೆದಾರರೊಬ್ಬರು ಎರಡೂ ಕಡೆಯ ನಿಲುವುಗಳನ್ನು ಆಲಿಸಿ ನ್ಯಾಯಯುತವಾದ ಮತ್ತು ಪಕ್ಷಪಾತವಿಲ್ಲದ ಪರಿಹಾರವನ್ನು ಮುಂದಿಟ್ಟಿದ್ದರು.

**ಈ ಪರಿಕಲ್ಪನೆಗಳ ಕುರಿತು ಇರುವ ನಿಕಟ ಪರಿಚಯದ ಹಿಂದಿನ ಕಾರಣಗಳು**

ಸಮಾನತೆಯ ಪರಿಕಲ್ಪನೆಯೊಂದಿಗಿನ ಉನ್ನತ ಮಟ್ಟದ ನಿಕಟ ಪರಿಚಯವು ಅವರ ದೃಷ್ಟಿಕೋನದ ನೆಲೆಯಲ್ಲಿ ಸಮಾನತೆ ಮತ್ತು ಪಕ್ಷಪಾತವನ್ನು ಪರಸ್ಪರ ವಿಭಜಿಸಿ ನೋಡುವ ನೋಟದಿಂದ ಹೊರಹೊಮ್ಮಿದ್ದಾಗಿತ್ತು. ಇದು ಎಷ್ಟೋ ಕಾಲದಿಂದ ಶಾಲೆಯಲ್ಲಿ ರೂಪುಗೊಂಡು ಬೆಳೆದುದಾಗಿತ್ತು. ಶಾಲಾ ವ್ಯವಸ್ಥೆಯು – ಶಿಕ್ಷಕರು, ಪ್ರಕ್ರಿಯೆಗಳು ಮತ್ತು ಪಠ್ಯಕ್ರಮ (ಗೌಪ್ಯ ಪಠ್ಯಕ್ರಮವೂ ಒಳಗೊಂಡು) ಸಮಾನತೆಗೆ ಹೆಚ್ಚಿನ ಮೌಲ್ಯ ನೀಡಿದ್ದವು. ಸಮಾನವಾಗಿರಬೇಕು ಎಂದು ಬಯಸುವುದು ಮತ್ತು ಜನರಲ್ಲಿ ನಿಜವಾದ ಸಮಾನತೆಯನ್ನು ಕಾಣುವುದರ ನಡುವೆ ದೊಡ್ಡ ಮಟ್ಟದ ಸಾಮರಸ್ಯವಿತ್ತು. ಇದಕ್ಕೆ ಕೊಡಬಹುದಾದ ಮತ್ತೊಂದು ನಿದರ್ಶನವೆಂದರೆ, ಈ ಶಾಲೆಯ ಪ್ರಾಂಶುಪಾಲರು ಮತ್ತು ಶಿಕ್ಷಕರ ನಡುವೆ ಕಟ್ಟುನಿಟ್ಟಿನ ಶ್ರೇಣಿಯ ಸಮಸ್ಯೆ ಇರಲಿಲ್ಲ. ಅವರೆಲ್ಲರೂ ಬೆಳಗಿನ ದೈನಂದಿನ ಸಭೆಗೆ ಒಟ್ಟಾಗಿ ಕುಳಿತುಕೊಳ್ಳುತ್ತಿದ್ದರು ಮತ್ತು ಎಲ್ಲಾ ವಿಚಾರಗಳ ಬಗ್ಗೆ ತಮ್ಮ ತಮ್ಮ ಮತ ಚಲಾಯಿಸುತ್ತಿದ್ದರು. ಪ್ರತಿಯೊಬ್ಬರಿಗೂ ಅಭಿಪ್ರಾಯ ವ್ಯಕ್ತಪಡಿಸುವ ಅವಕಾಶವಿತ್ತು. ಗೌಪ್ಯ ಪಠ್ಯಕ್ರಮವು ಕೂಡ ಈ ಪ್ರಕ್ರಿಯೆಗೆ ನೆರವಾಗುವಂತಿತ್ತು. ಇತರ ಎಲ್ಲಾ ಶಾಲೆಗಳಲ್ಲಿ ಬಹುತೇಕ ಪ್ರಕ್ರಿಯೆಗಳಲ್ಲಿ ಇರುವಂತಹ ವಿದ್ಯಾರ್ಥಿ–ಶಿಕ್ಷಕ ಎಂಬ ವರ್ಗೀಕರಣಕ್ಕೆ ಹೊರತಾಗಿ ಈ ಶಾಲೆಯಲ್ಲಿ ಮಾತ್ರ ಹೆಚ್ಚಿನ ಶಿಕ್ಷಕರು ಮತ್ತು ಪ್ರಾಂಶುಪಾಲರು ಕೈಗೆಟಕುವಂತಿದ್ದರು. ಯಾವುದೇ ವಿದ್ಯಾರ್ಥಿಯೂ ಅವರ ಬಳಿ ಹೋಗಿ ತನ್ನ ಸಮಸ್ಯೆಯನ್ನು ಹೇಳಿಕೊಳ್ಳಬಹುದಾಗಿತ್ತು ಅಥವಾ ಪ್ರಶ್ನೆ ಕೇಳಬಹುದಾಗಿತ್ತು. ವಿದ್ಯಾರ್ಥಿಗಳನ್ನು ಅವರು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ನನಗೆ ಆಶ್ಚರ್ಯವಾಗಿದ್ದೇನೆಂದರೆ, ಕೆಲವೊಂದು ವಿಷಯಗಳಲ್ಲಿ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಸಾಮ್ಯತೆಯನ್ನು ಕಾಣಬಹುದಾಗಿತ್ತು. ಉದಾಹರಣೆಗೆ, ಚಳಿ ಅಧಿಕವಿದ್ದಾಗ ವಿದ್ಯಾರ್ಥಿಗಳಂತೆ ಶಿಕ್ಷಕರಿಗೂ ಹೀಟರ್ ಸೌಲಭ್ಯ ಇರಲಿಲ್ಲ. ವಿದ್ಯಾರ್ಥಿಗಳಿಗಿಲ್ಲದ ಹೀಟರ್ ವ್ಯವಸ್ಥೆಯನ್ನು ಶಿಕ್ಷಕರಿಗೆ ಮಾತ್ರ ಒದಗಿಸುವುದು ಸಮ್ಮತವಾಗಿರಲಿಲ್ಲ. ಅಲ್ಲದೆ, ಎಲ್ಲಾ ವಿದ್ಯಾರ್ಥಿಗಳಿಗೂ ಹೀಟರ್ ಸೌಕರ್ಯ ಒದಗಿಸುವುದು ಸಾಧ್ಯವಾಗದ ಮಾತಾಗಿತ್ತು. ಇದು ಆ ಶಾಲೆಯಲ್ಲಿನ ಸಮಾನತೆಯ ನೀತಿಗೆ ಪ್ರಖರವಾದ ನಿದರ್ಶನವಾಗಿತ್ತು. ಮುಖ್ಯವಾಗಿ ಇದನ್ನು ವಿದ್ಯಾರ್ಥಿಗಳು ತಾವೂ ಅಂತರ್ಗತಗೊಳಿಸಿಕೊಂಡು ಅನುಸರಿಸಲು ಅವಕಾಶವಿತ್ತು.

**ಪ್ರಜಾಪ್ರಭುತ್ವವನ್ನು ಬೋಧಿಸುವುದು**

ಈಗಾಗಲೇ ಹೇಳಿದಂತೆ ನಾನು ನನ್ನ ಸಂಶೋಧನಾ ವಿಧಾನದ ಭಾಗವಾಗಿ, ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗೆ ಪ್ರಜಾಪ್ರಭುತ್ವದ ಪರಿಕಲ್ಪನೆಗಳ ಬಗ್ಗೆ ಪಾಠ ಮಾಡಿದ್ದೆ. ಅದಕ್ಕಾಗಿ, ಪ್ರತಿನಿಧಿಗಳನ್ನು ಹೊಂದುವುದು ಮತ್ತು ಅವರ ಕೆಲಸಗಳನ್ನು ಪ್ರಶ್ನಿಸುವುದು, ಸರ್ಕಾರ, ಬದುಕಿನ ಬೇರೆಬೇರೆ ಮಜಲುಗಳಲ್ಲಿ ಸಮಾನತೆ ಮತ್ತು ಕ್ರಿಯಾಶೀಲ ನಾಗರಿಕರಾಗಿರುವುದು ಮೊದಲಾದ ಪ್ರಜಾಪ್ರಭುತ್ವದ ಸಾಮಾನ್ಯ ಚಿಂತನೆಗಳನ್ನು ಒಳಗೊಂಡಿದ್ದ ಕೆಲವು ವಿಷಯಗಳನ್ನು ನಾನು ಆರಿಸಿಕೊಂಡಿದ್ದೆ.

**ಆರನೇ ತರಗತಿ: ಪಟ್ವಾರಿ, ನಗರ ಮತ್ತು ಗ್ರಾಮೀಣ ಆಡಳಿತ**

ಗ್ರಾಮೀಣ ಪರಿಸರದಲ್ಲಿ ಕಾರ್ಯನಿರ್ವಹಿಸುವ ಗ್ರಾಮೀಣ ಆಡಳಿತದ ಬಗ್ಗೆ ಮತ್ತು ಸರ್ಕಾರದ ಪ್ರತಿನಿಧಿಗಳ (ಪಟ್ವಾರಿ) ಬಗ್ಗೆ ನಾನು ಕಲಿಸಿದಾಗ, ಪ್ರತಿನಿಧಿಗಳನ್ನು ಮಾಧ್ಯಮಗಳು ದಿನಪತ್ರಿಕೆಗಳಲ್ಲಿ ಹೇಗೆ ಹೊಗಳುತ್ತವೆ ಅಥವಾ ತೆಗಳುತ್ತವೆ ಎಂಬುದನ್ನೂ ಮುಂದಿಟ್ಟೆ. ಚುನಾಯಿತ ಪ್ರತಿನಿಧಿಗಳು ನಮ್ಮ ಹಕ್ಕು ಮತ್ತು ಬೇಡಿಕೆಗಳಿಗಾಗಿ ಲೋಕಸಭೆಯಲ್ಲಿ ಹೇಗೆ ಹೋರಾಡುತ್ತಾರೆ ಎಂದೂ ಏಳನೇ ಮತ್ತು ಎಂಟನೇ ತರಗತಿಯಲ್ಲಿ ತಿಳಿಸಿದೆ. ಹೀಗೆ ಈ ವಿಷಯವನ್ನು ವಿದ್ಯಾರ್ಥಿಗಳಿಗೆ ಬೋಧಿಸಿದಾಗ ಅವರು ತಮ್ಮ ಬದುಕಿನಲ್ಲಿ ಕಂಡ ವಾಸ್ತವ ಉದಾಹರಣೆಗಳನ್ನು ಹಂಚಿಕೊಂಡರಲ್ಲದೆ, ಎನ್‌ಸಿಇಆರ್‌ಟಿ ಪಠ್ಯದಲ್ಲಿನ ಅಂಶಗಳು ಉಪಯುಕ್ತ ಎಂಬುದನ್ನು ಕಂಡುಕೊಂಡರು. ಈ ವಿಷಯವನ್ನು ನಗರ ಆಡಳಿತದ ಕುರಿತ ಪಠ್ಯಕ್ಕೂ ವಿಸ್ತರಿಸಲಾಯಿತು. ನಾವು ಅವರ ವಾರ್ಡ್ ಸದಸ್ಯರು ಮತ್ತು ಅಧ್ಯಕ್ಷರ ಬಗ್ಗೆ ಮಾತನಾಡಿದಾಗ, ಮಕ್ಕಳಿಗೆ ಅವರ ಬಗ್ಗೆ ತಿಳಿದಿತ್ತಾದರೂ, ಅವರನ್ನು ಸರ್ಕಾರದ ಭಾಗವಾಗಿ ಕಂಡಿರಲಿಲ್ಲ. ಬದಲಾಗಿ, ಅವರು ಮತ ಯಾಚಿಸುತ್ತಾ, ಚುನಾವಣೆಗಳಲ್ಲಿ ಗೆಲ್ಲುವುದಕ್ಕಾಗಿ ಇರುವ ಜನರು ಎಂದೇ ವಿದ್ಯಾರ್ಥಿಗಳು ಭಾವಿಸಿದ್ದರು. ನಾವು 'ಉತ್ತಮ ನಗರದ ಪರಿಕಲ್ಪನೆಯನ್ನು ವಿದ್ಯಾರ್ಥಿಗಳ ಮುಂದಿಟ್ಟು, ಪ್ರಪಂಚದ ಬೇರೆಬೇರೆ ಉತ್ತಮ ನಗರಗಳನ್ನು ತೋರಿಸಿದಾಗ, ತಮ್ಮ ನಗರ ಯಾಕೆ ಸ್ವಚ್ಛವಾಗಿಲ್ಲ ಮತ್ತು ಸಮರ್ಪಕವಾಗಿ ನಿರ್ವಹಿಸಲ್ಪಡುತ್ತಿಲ್ಲ ಎಂದು ವಿದ್ಯಾರ್ಥಿಗಳು ಪ್ರಶ್ನಿಸಿದರು. ಅಲ್ಲದೆ, ತಮ್ಮ ಜನಪ್ರತಿನಿಧಿಗಳ ಪಾತ್ರದ ಬಗ್ಗೆ ಚರ್ಚಿಸಿದರು. ತಕ್ಷಣವೇ ಅವರು, ಇದರೊಂದಿಗೆ ಸ್ಥಳೀಯ ಸರ್ಕಾರದ ಪಾತ್ರವನ್ನು ಸಂಬಂಧೀಕರಿಸಿ ಜನರಿಗೆ ಉತ್ತರದಾಯಿತ್ವತೆಯಿಂದ ಇರುವ ಹೊಣೆ ತಮ್ಮ ಚುನಾಯಿತ ಪ್ರತಿನಿಧಿಗಳದ್ದು ಎಂದು ತಿಳಿಸಿದರು.

ಆರನೇ ತರಗತಿಯ ವಿದ್ಯಾರ್ಥಿಗಳನ್ನು, ಅವರ ಸುತ್ತಮುತ್ತಲಿನ ಸ್ಥಳಗಳಲ್ಲಿ ಅಷ್ಟೊಂದು ಕಸದ ತ್ಯಾಜ್ಯ ಮತ್ತು ಮಾಲಿನ್ಯ ಯಾಕೆ ಇರುತ್ತದೆ ಎಂದು ಪ್ರಶ್ನಿಸಿದೆವು. ಅದಕ್ಕೆ ಅವರು, 'ಕಸ ತೆಗೆದು ಸ್ವಚ್ಛಗೊಳಿಸಲು ಯಾರೂ ಬರುವುದಿಲ್ಲ' ಎಂದು ಉತ್ತರಿಸಿದರು. ಸ್ಥಳೀಯ ಜನಪ್ರತಿನಿಧಿಗಳನ್ನು ಈ ಬಗ್ಗೆ ಎಂದಾದರೂ ಪ್ರಶ್ನಿಸಿದ್ದೀರಾ ಎಂದು ಕೇಳಿದರೆ, ತಾವು ಪ್ರಶ್ನಿಸಲು ಮುಂದಾದರೂ ತಮ್ಮ ಮನೆಯವರು ಅವಕಾಶ ಕೊಡುವುದಿಲ್ಲ ಎಂದರು. ಅದಕ್ಕೆ ದನಿಗೂಡಿಸಿದ ಒಂದು ಮಗು, 'ಅವರು ಈಗ ಪಕ್ಕದ ಉದ್ಯಾನದಲ್ಲಿ ನಮ್ಮ ಕಸ ಎಸೆಯುತ್ತಾರೆ' ಎಂದು ಹೇಳಿತು. ತಮ್ಮ ಚುನಾಯಿತ ಜನಪ್ರತಿನಿಧಿಗಳನ್ನು ಯಾಕೆ ಪ್ರಶ್ನಿಸುತ್ತಿಲ್ಲ ಎಂಬ ಪ್ರಶ್ನೆಯಿಂದ, ತಾವು ಅವರನ್ನು ಪ್ರಶ್ನಿಸಬಹುದು ಎಂಬ ಅರಿವು ಮಕ್ಕಳಿಗಾಯಿತು. ಸ್ಥಳೀಯ ಜನಪ್ರತಿನಿಧಿಗಳ ಮೂಲಕ ಸರ್ಕಾರವನ್ನು ಪ್ರಶ್ನಿಸಬಹುದು ಎಂಬುದಕ್ಕೆ ಯಾವುದೇ ನೇರ ಉದಾಹರಣೆಯನ್ನು ಆರನೇ ತರಗತಿಯ NCERT ಪಠ್ಯಪುಸ್ತಕ ನೀಡಿರಲಿಲ್ಲ.

**ಏಳನೇ ತರಗತಿ: ಮಾಧ್ಯಮ, ಲಿಂಗ ಮತ್ತು ಸಮಾನತೆ**

ಪತ್ರಿಕಾ ಸಾಕ್ಷರತೆಯ ಕುರಿತ ತರಗತಿ ಮುಗಿದ ಒಂದು ವಾರದ ಬಳಿಕ, ಏಳನೇ ತರಗತಿಯ ಮಕ್ಕಳಿಗೆ ಐದೈದು ಗುಂಪುಗಳಲ್ಲಿ



ನಗರ ಆಡಳಿತದ ಬಗ್ಗೆ ತಿಳಿದುಕೊಳ್ಳಲು ಕೈಗೊಂಡ ಚಟುವಟಿಕೆಗಳು

ವಾರಕ್ಕೊಂದು ತಮ್ಮದೇ ಆದ ಸ್ವಂತ ಪತ್ರಿಕೆಯನ್ನು ಸಿದ್ಧಪಡಿಸುವಂತೆ ತಿಳಿಸಲಾಯಿತು. ಅಚಿತಹ ರಚನೆಯ ಭಾಗವಾಗಿ (ಕಲಿಕೆಯ ಉನ್ನತ ಹಂತ: ಬ್ಲೂಮ್ಸ್ ಟ್ಯಾಕ್ಸಾನಮಿ – (Higher order of learning: Bloom's Taxonomy) ಒಂದು ಪತ್ರಿಕೆಯಲ್ಲಿ, 'ಒಂಬತ್ತನೇ ತರಗತಿಯಲ್ಲಿ ಕ್ರೀಡಾ ಅವಧಿಯನ್ನು ಸ್ಥಗಿತಗೊಳಿಸಿದ್ದೇಕೆ?' ('ಕಕ್ಷಾ 9 ಕೇ ಸ್ಪೋರ್ಟ್ಸ್ ಕ್ಯೂಂ ಹುವಾ ಬಂದ್?') ಎಂಬ ಒಂದು ಸುದ್ದಿ ಬರೆದಿದ್ದರು. ಆದರೆ ಒಂಬತ್ತನೇ ತರಗತಿಯ ವಿದ್ಯಾರ್ಥಿಗಳು ಅದಕ್ಕೆ 'ಸುಳ್ಳು ಸುದ್ದಿ', 'ಸತ್ಯಕ್ಕೆ ದೂರವಾದುದು' ಎಂದು ಪ್ರತಿಕ್ರಿಯಿಸಿದರು. ಈ ಬಗ್ಗೆ ತನಿಖೆ ನಡೆಸಿದಾಗ ಒಂಬತ್ತನೇ ತರಗತಿಯ ವಿದ್ಯಾರ್ಥಿಗಳು ಅದು ಸತ್ಯವಾದ ಸುದ್ದಿ ಎಂದು ಒಪ್ಪಿಕೊಂಡರೂ, ಆ ಸುದ್ದಿಯು ತಮ್ಮ ಮೇಲೆ ಆಪಾದನೆ ಹೊರಿಸುವ ಧಾಟಿಯಲ್ಲಿದ್ದ ಕಾರಣ ತಮ್ಮನ್ನು ಕೀಳಾಗಿ ತೋರಿಸುವಂತಿತ್ತು ಎಂದು ವಿವರಿಸಿದರು. ಅಲ್ಲದೆ, ತಾವು ಮತ್ತು ಪ್ರಾಂಶುಪಾಲರು ಚರ್ಚಿಸಿ 'ಸಹಮತ'ದಿಂದ ಆ ನಿರ್ಧಾರ ಕೈಗೊಂಡಿದ್ದೇ ವಿನಾಹ ಯಾರಾರೂ ಹೇರಿದ್ದಲ್ಲ ಎಂದೂ ಸ್ಪಷ್ಟಪಡಿಸಿದರು. ಆ ಪತ್ರಿಕೆಯು ಇಡೀ ಶಾಲೆಗೆ ಹಂಚಿಕೆಯಾಗಿದ್ದ ಕಾರಣ ತಮ್ಮನ್ನು ತಪ್ಪಾಗಿ ಚಿತ್ರಿಸಿದಂತಾಗುತ್ತದೆ ಎಂಬ ಕಾರಣದಿಂದ ಆರಂಭದಲ್ಲಿ ತಾವೆಲ್ಲ ಭಾವೋದ್ವೇಗದಿಂದ ಅಲ್ಲಗಳೆದು ಪ್ರತಿಕ್ರಿಯಿಸಿದ್ದಾಗಿಯೂ ವಿವರಿಸಿದರು. ತಮ್ಮನ್ನು ತಪ್ಪಾಗಿ ಚಿತ್ರಿಸಿದ್ದರ ಅವರು ಧ್ವನಿಯೆತ್ತಿದ್ದರು. ಈ ಘಟನೆಯಿಂದ ವಿದ್ಯಾರ್ಥಿಗಳು ಪತ್ರಿಕೆಗಳು ಸುಳ್ಳು ಮಾಹಿತಿಯನ್ನು ಹರಡ-ಬಹುದಾದ ಸಾಧ್ಯತೆಯನ್ನು ಅರ್ಥ ಮಾಡಿಕೊಂಡರು.

ಈ ಪ್ರತಿಕ್ರಿಯೆಯನ್ನು ನಾವು ಏಳನೇ ತರಗತಿಯಲ್ಲಿ ಹಂಚಿಕೊಂಡಾಗ, ಅಪೂರ್ಣ ಸುದ್ದಿಯನ್ನು ಮುದ್ರಿಸಿದ್ದು ಅರಿವಾಗಿ ಅದನ್ನು ಹಿಂಪಡೆದರು. ಈ ಸಂಬಂಧದ ಚರ್ಚೆಯಲ್ಲೂ ಅವರು, ಸುದ್ದಿಯನ್ನು ಅಂತಿಮಗೊಳಿಸುವ ಮುನ್ನ ಮರುಪರಿಶೀಲಿಸಿರಲಿಲ್ಲ ಎಂದು ಒಪ್ಪಿಕೊಂಡರು. ಯಾವುದೇ ಸುದ್ದಿ ಸಮತೋಲಿತವಾಗಿರ-ಬೇಕಾದರೆ ಅಧ್ಯಯನ ಎಷ್ಟು ಅವಶ್ಯ, ಅದರಿಂದ ಸುದ್ದಿಯ ಎರಡೂ ಮುಖಗಳನ್ನು ವಸ್ತುನಿಷ್ಠವಾಗಿ ಬೆಂಬಲಿಸಲು ಸಾಧ್ಯ ಎಂದು ನಾನು ವಿವರಿಸಿದೆ. ಪ್ರಜಾಪ್ರಭುತ್ವದ ನಾಲ್ಕನೇ ಸ್ತಂಭವಾಗಿರುವ ಮಾಧ್ಯಮವನ್ನು ಶಾಲಾ ಸಂದರ್ಭದಲ್ಲಿ ಸೀಮಿತವಾಗಿ ನಾವು ಚರ್ಚಿಸಿದೆವು ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಅದರ ಪಾತ್ರದ ಬಗ್ಗೆಯೂ ಚರ್ಚೆ ಮುಂದುವರಿಯಿತು.

**ಎಂಟನೇ ತರಗತಿ: ಸಂಸತ್ತು–ಸಂವಿಧಾನ, ಅಂಗಗಳು, ಕಾರ್ಯಗಳು**

ಎಂಟನೇ ತರಗತಿಯ ವಿದ್ಯಾರ್ಥಿಗಳಿಗೆ ನೀಡಲಾದ ಪಠ್ಯಪುಸ್ತಕದಲ್ಲಿ ಸರ್ಕಾರದ ಬಗ್ಗೆ ಹೇಳಲಾಗಿದ್ದ ಸಂಗತಿಗಳಿಗೂ, ಅವರು ನಿಜಜೀವನದಲ್ಲಿ ಕಾಣುತ್ತಿದ್ದುದಕ್ಕೂ ನಡುವಿನ ಅಂತರವು ಗಣನೀಯವಾಗಿತ್ತು. ಅದಕ್ಕೂ ಮೊದಲು ಅವರು ಟಿ.ವಿ.ಯಲ್ಲಾಗಲಿ, ಬೇರೆ ರೀತಿಯಿಂದಾಗಲಿ ಸಂಸತ್ತನ್ನು ಕಂಡಿರಲಿಲ್ಲ. ಆದ್ದರಿಂದ, ಸರ್ಕಾರ ಎಂದರೆ ಏನು ಮತ್ತು ಏಕೆ ಎಂಬುದನ್ನು ಸಂಬಂಧೀಕರಿಸಲು ಅವರಿಗೆ ಅತ್ಯಂತ ಕಠಿಣ ಸಂಗತಿಯಾಗಿತ್ತು. ಆದರೂ, ಅದನ್ನು ಅರ್ಥೈಸಿಕೊಳ್ಳುವಲ್ಲಿ ಸ್ಥಳೀಯ ಸರ್ಕಾರ ಗಮನಾರ್ಹ ಪಾತ್ರ ವಹಿಸಿತು. ನಾನು ಪಾಠ ಮಾಡಿದ ಮೂರೂ ತರಗತಿಗಳಲ್ಲಿ ಸ್ಥಳೀಯ ಸರ್ಕಾರದ ಮೂಲಕ ಕೇಂದ್ರ ಸರ್ಕಾರದ ಕಡೆ ಸಾಗಿದ್ದು ಬಹಳ ಉಪಯುಕ್ತವೆನಿಸಿತು.

ವಿದ್ಯಾರ್ಥಿಗಳಲ್ಲಿ ಸಮಾನತೆ ಮತ್ತು ಜನಪ್ರತಿನಿಧಿಗಳ ಕುರಿತು ಇದ್ದ ತಿಳುವಳಿಕೆಯು ಇದೇ ವಿಷಯವನ್ನು ಕುರಿತು ಶೈಕ್ಷಣಿಕ ಪರಿಕಲ್ಪನೆಯನ್ನು ಸಿದ್ಧಪಡಿಸುವಲ್ಲಿ ನನಗೆ ಸಹಕಾರಿಯಾಯಿತು. ಅವರ ಶಾಲೆಯಿಂದಲೇ ಉದಾಹರಣೆಗಳನ್ನು ಎತ್ತಿಕೊಂಡು ಅವುಗಳ ಬಗ್ಗೆ ಗಂಭೀರವಾಗಿ ಪರ್ಯಾಲೋಚಿಸಲು ಅವಕಾಶವಿತ್ತು. ತಮಗೆ ಸಂಬಂಧವಿಲ್ಲದ ಸಂಗತಿಗಳೆಂದು ಅಲಕ್ಷಿಸಿ ಪ್ರತ್ಯೇಕವಾಗಿ ಕಾಣುವ ಬದಲು ತಮ್ಮ ನೈಜ ಬದುಕಿಗೆ ಅನ್ವಯಿಸಿಕೊಳ್ಳಬಹುದಾಗಿತ್ತು. ಇನ್ನು, ವಿಶೇಷವಾಗಿ ಶಾಲಾ ಹಂತದಲ್ಲಿ ಇಂತಹ ಕ್ರಮಗಳು ರೂಢಿಯಲ್ಲಿ ಎಲ್ಲಿ ವಿಫಲವಾಗುತ್ತಿವೆ ಎಂದೂ ಅವರು

ನೋಡಬಹುದಾಗಿತ್ತು. ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಮಟ್ಟದ ರಾಜಕೀಯ ಚೌಕಟ್ಟಿನಲ್ಲಿ ಏನು ನಡೆಯುತ್ತದೆ ಎಂಬ ಅರಿವಿಲ್ಲದಿದ್ದರೂ ತಮಗೆ ಕೈಗೆಟಕುವ ಸಂಗತಿಗಳ ಬಗ್ಗೆ ಅವರಿಗೆ ಸೂಕ್ತ ಜ್ಞಾನವಿತ್ತು. ಅಂದರೆ, ತಮ್ಮ ಸ್ಥಳೀಯ ನಾಯಕರು ಮತ್ತು ಶಾಲಾ ನಾಯಕರು ತಮ್ಮ ಉತ್ತಮ ಜೀವನದ ಅಭ್ಯುದಯಕ್ಕೆ ಹಾಗು ತಾವು ಅವರ ಕಾರ್ಯಶೈಲಿಯನ್ನು ಪ್ರಶ್ನಿಸಬಹುದು ಎಂಬ ಬಗ್ಗೆ ಅರಿವಿತ್ತು. ಅಲ್ಲದೆ, ತರಗತಿ ಪ್ರತಿನಿಧಿಗಳಿಗೆ ತಮ್ಮ ಅಧಿಕಾರ ಬಗ್ಗೆ ವ್ಯಾಪ್ತಿಯ ಅರಿವಿತ್ತು. ಆದರೆ ತಾವು ತಮ್ಮ ಕರ್ತವ್ಯಗಳನ್ನು ಸಮರ್ಪಕವಾಗಿ ನಿಭಾಯಿಸದೇ ಇದ್ದರೆ ಅಧಿಕಾರ ತ್ಯಜಿಸುವಂತೆ ತಾವು ಅವರನ್ನು ಹೇಳಬಹುದು ಎಂಬ ಅರಿವೂ ಅವರಿಗಿತ್ತು.

ತರಗತಿಯಲ್ಲಿ ವಿದ್ಯಾರ್ಥಿಗಳು ಸಮಾನತೆ, ಸ್ವಾತಂತ್ರ್ಯ ಮತ್ತು ನ್ಯಾಯದಂಥ ಪರಿಕಲ್ಪನೆಗಳಿಗೆ ಸಂಬಂಧಿಸಿದಂತೆಯೂ ತಮ್ಮ ಸುತ್ತಮುತ್ತಲಿನಿಂದಲೇ ಉದಾಹರಣೆಗಳನ್ನು ತರುತ್ತಿದ್ದರು. ಹೀಗೆ ಒಂದಕ್ಕೊಂದು ನಂಟು ಬೆಸೆಯುವುದರಿಂದ ಉನ್ನತ ಮಟ್ಟದ ಪರಿಕಲ್ಪನೆಗಳುಳ್ಳ ವಿಷಯಗಳನ್ನು ಇನ್ನೂ ಚೆನ್ನಾಗಿ ಅರ್ಥ ಮಾಡಿಕೊಳ್ಳಲು, ಆ ಉದಾಹರಣೆಗಳನ್ನು ಪಠ್ಯಪುಸ್ತಕದಲ್ಲಿ ನೀಡಲಾದ ಉದಾಹರಣೆಗಳೊಂದಿಗೆ ತುಲನೆ ಮಾಡಲೂ ಸಹಕಾರಿ ಆಯಿತು.

**ಗಮನಕೇಂದ್ರಿತ ಗುಂಪು ಚರ್ಚೆ**

ಈ ಶಾಲೆಯಲ್ಲಿ ಕೆಲಸ ಮಾಡುವ ವೇಳೆ ನಾನು ಒಂಬತ್ತನೇ ತರಗತಿಯ ವಿದ್ಯಾರ್ಥಿಗಳು ಮೇಲಿನ ವಿಷಯಗಳನ್ನು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡಿದ್ದಾರೆ ಎಂದು ತಿಳಿದುಕೊಳ್ಳಲು 'ಗಮನಕೇಂದ್ರಿತ ಗುಂಪು ಚರ್ಚೆ' (Focus group discussion) ಕೈಗೊಂಡೆ. ತಲಾ ಹತ್ತು ಮಕ್ಕಳನ್ನು ಒಳಗೊಂಡ ಮೂರು ಗುಂಪುಗಳನ್ನು ರಚಿಸಿದೆ. ವಿಷಯದ ಬಗೆಗಿನ ಅರಿವು ಮತ್ತು ಅಭಿಪ್ರಾಯವನ್ನು ನಿಖರವಾಗಿ ಹೇಳುವ ಮೂಲಕ ತರಗತಿಯಲ್ಲಿ ಬಹಳ ಕ್ರಿಯಾಶೀಲರಾಗಿದ್ದ ಮಕ್ಕಳು ಇದ್ದರು. ಎರಡನೇ ಗುಂಪಿನಲ್ಲಿ, ತರಗತಿಯಲ್ಲಿ ಹೆಚ್ಚು ಕ್ರಿಯಾಶೀಲರೂ ಅಲ್ಲದ ಅಥವಾ ಜಡತೆಯನ್ನೂ ಹೊಂದಿರದ ಮಕ್ಕಳು ಇದ್ದರು. ಮೂರನೇ ಗುಂಪಿನಲ್ಲಿ ತರಗತಿಯಲ್ಲಿ ಇದ್ದರು. ಎಂದೂ ಕ್ರಿಯಾಶೀಲರಾಗಿರದೇ ಇದ್ದ ಮಕ್ಕಳು ಮೂರನೇ ಗುಂಪಿನಲ್ಲಿದ್ದರು. ಪ್ರಜಾಪ್ರಭುತ್ವ ಮತ್ತು ಸರ್ಕಾರದ ಬಗೆಗಿನ ಬಹುತೇಕ ಚಿಂತನೆಗಳನ್ನು ಮೂರೂ ಗುಂಪುಗಳು ಅರ್ಥ ಮಾಡಿಕೊಂಡಿದ್ದವು. ತರಗತಿಯ ಕಾರ್ಯನಿರ್ವಹಣೆಯು ಸರ್ಕಾರ ನಡೆಯುವ ಕ್ರಮದಲ್ಲೇ ಹೇಗೆ ಜರುಗುತ್ತಿದೆ ಎಂಬ ಸ್ಪಷ್ಟ ಸಂಬಂಧವನ್ನು ಕಾಣಬಹುದಾಗಿತ್ತು.

ಇದಕ್ಕೆ ಹೊರತಾಗಿ, ಮೊದಲ ಗುಂಪಿನಲ್ಲಿದ್ದವರಲ್ಲಿ ಬಹುತೇಕ ಸದಸ್ಯರು ಶಾಲೆಯ ಪ್ರತಿನಿಧಿಗಳಾಗಿದ್ದ ಕಾರಣ ಪ್ರಜಾಪ್ರಭುತ್ವದ ಕಾರ್ಯವಿಧಾನದ ಬಗ್ಗೆ ಅವರು ಹೆಚ್ಚು ನಿಖರವಾಗಿ ತಿಳಿದು–ಕೊಂಡಿದ್ದರು. ತಮ್ಮನ್ನು ಪ್ರಶ್ನಿಸಬಹುದು ಎಂಬ ಸಂಗತಿ ಅವರಿಗೆ ಗೊತ್ತಿದ್ದುದರಿಂದ ತಮ್ಮ ನಾಯಕರನ್ನು ಅವರು ಪ್ರಶ್ನಿಸಬಹುದು ಎಂದು ಅರಿತಿದ್ದರು..

ಎರಡನೇ ಗುಂಪು ಸಾಮಾನ್ಯವಾಗಿ ಕಾಣಸಿಗುವ ಮನೋ–ಸ್ಥಿತಿಯನ್ನು ಹೊಂದಿದ್ದಂತೆ ಕಾಣುತ್ತಿತ್ತು. ಮತ ಯಾಚಿಸುವುದು ಎಂದರೆ ಬಲೆಗೆ ಬಿದ್ದಂತೆ ಎಂದೂ, ಸರ್ಕಾರವನ್ನು ಪ್ರಶ್ನಿಸುವುದೆಂದರೆ ಕೊಲೆಗೀಡಾಗುವಂತೆ ಆದೀತು ಅಥವಾ ಆಸೆಗೆ ತಣ್ಣೀರೆರಚಿ–ದಂತಾದೀತು ಎಂದು ತಿಳಿದಿದ್ದರು. ಈ ಗುಂಪು ತನ್ನನ್ನು ತೊಡಗಿಸಿಕೊಳ್ಳುವುದನ್ನು ಅಷ್ಟಾಗಿ ಇಷ್ಟಪಡುತ್ತಿರಲಿಲ್ಲ.

ಮೂರನೇ ಗುಂಪು, ಬಡವರನ್ನು ಪೋಷಿಸುವ ಪೋಷಕರ ಹಾಗೆ ಸರ್ಕಾರ ಎಂಬಂತೆ ಪರಿಭಾವಿಸಿತ್ತು. ಅದು ಭ್ರಷ್ಟಾಚಾರದಲ್ಲಿ ತೊಡಗಿದೆ ಎಂಬ ವಾಸ್ತವಾಂಶ ಅದಕ್ಕೆ ತಿಳಿದಿತ್ತು ಹಾಗು ಭ್ರಷ್ಟಾಚಾರದಲ್ಲಿ ತೊಡಗಿದವರನ್ನು ಪತ್ತೆ ಹಚ್ಚಲೂ ಅದು ಕೆಲಸ ಮಾಡುತ್ತಿತ್ತು. ಎಂದು ಅರಿತಿತ್ತು. ಈ ಪರಿಕಲ್ಪನೆಗಳನ್ನು ಆರು, ಏಳು ಮತ್ತು ಎಂಟನೇ ತರಗತಿಯ ವಿದ್ಯಾರ್ಥಿಗಳು ಸರಿಯಾಗಿ ಅರ್ಥ ಮಾಡಿಕೊಂಡು, ಇವುಗಳ ಹಿಂದಿನ ಆಲೋಚನೆಗಳನ್ನು ಅರಿತಿದ್ದಾರೆಯೇ ಎಂಬುದನ್ನು ಪರೀಕ್ಷಿಸಲು ಕೈಗೊಂಡ ಈ ಪ್ರಯತ್ನದ ಫಲಿತಾಂಶವು ಧನಾತ್ಮಕವಾಗಿತ್ತಲ್ಲದೆ, ವ್ಯಾಪಕವಾಗಿ ಸಹಕಾರಿಯೂ ಆಯಿತು. ಆದರೂ, ಸರ್ಕಾರದ ಮೂರು ಅಂಗಗಳ ಹೆಸರು ಮತ್ತು ಕಾರ್ಯಗಳ ಬಗ್ಗೆ ಎಲ್ಲಾ ಗುಂಪುಗಳು ಮಾಹಿತಿ ನೀಡಲಾಗಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ, ಕೆಲವರು ರಾಜಕೀಯವಾಗಿ ತಿಳುವಳಿಕೆಯುಳ್ಳವರಾಗಿದ್ದರೂ, ಅಪವಾದ–ವೆಂಬಂತೆ ಅವರಿಗೆ ತಮ್ಮ ವಾರ್ಡ್ ಸದಸ್ಯರ ಹೆಸರೂ ತಿಳಿದಿರಲಿಲ್ಲ.

**ಮುಕ್ತಾಯ**

ಮೇಲಿನ ಉದಾಹರಣೆಗಳಲ್ಲಿ ಗಮನಿಸಿದಂತೆ, ಪ್ರಜಾಪ್ರಭುತ್ವ ಎಂಬ ಪರಿಕಲ್ಪನೆಯನ್ನು ಪ್ರಾಯೋಗಿಕವಾಗಿಯೇ ಬದುಕಿ ನೋಡ–




ತರಗತಿಗಳು ಸಿದ್ಧಪಡಿಸಿದ ಪತ್ರಿಕೆಗಳು

ಬೇಕಾಗುತ್ತದೆ. ಮಕ್ಕಳಿಗೆ ತಮ್ಮ ನಿತ್ಯಜೀವನದಲ್ಲಿ ಸಮಾನತೆಯನ್ನು ಅನುಭವಿಸಿ ಅದರ ಸುತ್ತ ತಲೆದೋರುವ ಪ್ರಶ್ನೆ ಮತ್ತು ಅಭಿಪ್ರಾಯಗಳನ್ನು ವ್ಯಕ್ತಪಡಿಸುವಂತಹ ವಾತಾವರಣವನ್ನು ಒದಗಿಸಬಹುದು. ಮಕ್ಕಳು ಮೂರ್ತ ಸಂಗತಿಗಳೊಂದಿಗೆ ಬಹಳ ಬೇಗನೇ ಗುರುತಿಸಿಕೊಳ್ಳುತ್ತಾರೆ. ಪರಿಕಲ್ಪನೆಗಳು ನಿತ್ಯ ಜೀವನದಲ್ಲಿ ಬೆರೆತಾಗ ರೂಢಿಯಲ್ಲಿದ್ದಾಗಲೇ ಇದು ಸಾಧ್ಯವಾಗುವುದು. ಹಾಗೆಯೇ, ಈ ಘಟನೆಯಲ್ಲಿ ಶಾಲಾ ವಾತಾವರಣದಲ್ಲಿ ಪರಿಕಲ್ಪನೆಗಳನ್ನು ರೂಢಿಗತವಾಗಿ ಅರ್ಥೈಸಿಕೊಳ್ಳಲು ನಿರಂತರವಾಗಿ ನೆರವಾಗುವುದರಿಂದ ಪುಸ್ತಕದಲ್ಲಿ ನೀಡಲಾಗಿರುವ ವಿವರಗಳನ್ನು ತಿಳಿದುಕೊಳ್ಳುವುದೂ ಅವರಿಗೆ ಸುಲಭವಾಗಿದೆ ಹಾಗು ಪುಸ್ತಕದಲ್ಲಿನ ಸನ್ನಿವೇಶಗಳನ್ನು ವಾಸ್ತವದ ಸನ್ನಿವೇಶಗಳಿಗೆ ವಿಸ್ತರಿಸುವುದೂ ಅವರಿಗೆ ಸಾಧ್ಯವಾಗಿದೆ. ಅದು, ತಾವೇನು ಕಲಿಯುತ್ತಿದ್ದೇವೆ ಎಂದು ಯೋಚಿಸಿ ಮತ್ತು ಶಾಲೆಯಿಂದಾಚೆಗಿನ ತಮ್ಮ ಜೀವನದಲ್ಲಿ ಅದನ್ನು ಅಳವಡಿಸಿಕೊಳ್ಳಲೂ ಸಾಧ್ಯವಾಗಿದೆ.



ವಿವಿಧ ಸುದ್ದಿಗಳ ಬಗ್ಗೆ ಚರ್ಚೆ



**ಅಭಿಲಾಷಾ ಅವಸ್ಥಿ** ಅವರು ಪ್ರಸ್ತುತ, ಉತ್ತರಾಖಂಡದ ಪಿಥೋರಾಗಡದಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಕ್ಯಾಂಪಸ್ ಅಸೋಸಿಯೇಟ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸಮಾಜವಿಜ್ಞಾನ ಮತ್ತು ಮಕ್ಕಳಲ್ಲಿ ಭಾಷಾ ಬೆಳವಣಿಗೆ ಅವರ ಆಸಕ್ತಿಯ ಕ್ಷೇತ್ರವಾಗಿದೆ. ಕ್ರೀಡೆ ಮತ್ತು ಚಿತ್ರಕಲೆಯಲ್ಲಿ ತೊಡಗುವುದು ಅವರಿಗೆ ಇಷ್ಟ.

ಸಂಪರ್ಕಕ್ಕೆ: abhilasha.awasthi18_mae@apu.edu.in ಮೇಲ್ ಮಾಡಬಹುದು.

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಲತಾ ಕೆ.ಸಿ.**

# ಗುರುತಿಸಿಕೊಳ್ಳುವಿಕೆಯಿಂದ ಹೊಣೆಗಾರಿಕೆ ಹೊಮ್ಮುತ್ತದೆ

ಅರ್ಚನಾ ಆರ್.

ಮಕ್ಕಳು ಶಾಲೆಗೆ ಬರುವುದು ಶಿಕ್ಷಕರಂಥ ವಯಸ್ಕರಿಂದ ಬೋಧಿಸಲ್ಪಡಲಾಗಲೀ ಅಥವಾ 'ರೂಪಿಸಲ್ಪಡಲಾಗಲೀ' ಅಲ್ಲ; ಮಕ್ಕಳು ಶಾಲೆಯ ದೈನಂದಿನ ಪ್ರಕ್ರಿಯೆಗಳನ್ನು ನಿರ್ಧರಿಸುವ, ಸಂಘಟಿಸುವ ಹಾಗು ಅನುಷ್ಠಾನಕ್ಕೆ ತರುವ ಕ್ರಿಯೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕೆಂದು ನಂಬುವ ಕಾರಣಕ್ಕೆ ನಾವು ಹಾಗೆಂದು ಆಗ್ರಹಿಸುತ್ತೇವೆ. ಶಾಲೆಯಲ್ಲಿ ಮಗುವಿನ ಸ್ಥಾನವು ಓರ್ವ ವೀಕ್ಷಕ ಅಥವಾ ಸ್ವೀಕರಿಸುವವನಷ್ಟೇ ಆಗಿರದೆ ಸಕ್ರಿಯವಾಗಿ ಭಾಗವಹಿಸುವುದೂ ಆಗಿದೆ ಈ ಪಾಲ್ಗೊಳ್ಳುವಿಕೆಯು ಅಡೆ-ತಡೆಗಳಿಲ್ಲದೆ ಸಾಗಲು ಅವರ ಅಗತ್ಯಗಳನ್ನು ಮಂಡಿಸಲು ಅವರಿಗೊಂದು ಧ್ವನಿ ಹಾಗು ವೇದಿಕೆಯು ಅತ್ಯಗತ್ಯ. ಮಕ್ಕಳಿಗೆ ನಾವು ಕಲ್ಪಿಸಿಕೊಡುವ  ಇಂತಹ ವೇದಿಕೆ ಹಾಗು ಕರ್ತೃತ್ವದ ಪ್ರಮಾಣ ಶಾಲೆಯಿಂದ ಶಾಲೆಗೆ ಭಿನ್ನವಾಗಿರುತ್ತದೆ. ಉದಾಹರಣೆಗೆ, ತೆತ್ಸುಕೋ ಕುರೊಯಾನಗಿ ಅಥವಾ ತೋತೋ ಚಾನ್ (Tetsuko Kuroyanagi or Totto-chan) ಹಾಜರಾದ ಶಾಲೆಯ ಮುಖ್ಯಶಿಕ್ಷಕರು ಅಲ್ಲಿನ ಕಟ್ಟುಪಾಡುಗಳನ್ನು ರೂಪಿಸುವ ಹೊಣೆಹೊತ್ತಿದ್ದರೂ, ಅವರು ಮಕ್ಕಳಿಗೆ ಶಾಲಾ ವಾತಾವರಣದಲ್ಲಿ ತಾವು ತಾವಾಗಿರಲು ಸಂಪೂರ್ಣ ಸ್ವಾತಂತ್ರ್ಯ ನೀಡಿಯೇ ಅದನ್ನು ಸಾಧಿಸಿದ್ದರು ಎಂದು ನಮಗಿಂದು ತಿಳಿದಿದೆ. ಎ.ಎಸ್.ನೀಲ್ ii ಅವರು ನಡೆಸುತ್ತಿದ್ದ ಸಮ್ಮರ್ ಹಿಲ್‌ನಂತಹ ಶಾಲೆಯಲ್ಲಿ ಮಕ್ಕಳು ತಮ್ಮದೇ ಆದ ಪ್ರಜಾಸತ್ತಾತ್ಮಕ ನೆಲೆಯನ್ನು ರೂಪಿಸಿಕೊಳ್ಳಲು ಪಾಲ್ಗೊಳ್ಳುವ ಕಲ್ಪನೆಗೆ ಇನ್ನೂ ಹೆಚ್ಚಿನ ಔಪಚಾರಿಕ ಹಾಗು ಮಹತ್ವಪೂರ್ಣ ಶಕ್ತಿ ವಿನಿಯೋಗವಾಗಿದೆ. ಕಾಲಕಾಲಕ್ಕೆ ತಕ್ಕಂತೆ 'ಮಕ್ಕಳ ಸರ್ಕಾರ' ಎಂಬುದರ ಅರ್ಥ್ವ ಬದಲಾದರೂ, ಅವರಿಗೆ ಅದು ತಮಗೆ ಸಂಬಂಧಿಸಿದ್ದಾಗಿದೆ ಎಂಬ ಅರಿವಿರುವುದು ತುಂಬಾ ಮುಖ್ಯ ಹಾಗು ತಮಗೆ ಮುಖ್ಯವೆನಿಸಿದ ವಿಚಾರಗಳ ಬಗ್ಗೆ ತಾವು ವಾದ ಮಾಡಬಹುದು ಎಂಬುದನ್ನು ನೀಲ್ ಬಲವಾಗಿ ಪ್ರತಿಪಾದಿಸುತ್ತಾರೆ. ಮಕ್ಕಳು ತಮ್ಮ ವಿಚಾರಗಳನ್ನು ಪ್ರತಿಪಾದಿಸುವ ವಿಷಯವಾಗಿ ನೀಲ್ ಅವರು ನೀಡುವ ಉದಾಹರಣೆಗಳ ಹರಹು, ಕಳ್ಳತನಕ್ಕೆ ಸೂಕ್ತ ದಂಡನೆಯ ವಿಷಯದಿಂದ ಹಿಡಿದು 12 ವರ್ಷಗಳಿಗಿಂತ ಕೆಳಪಟ್ಟವರ ಮೇಲೆ ಹೇರಲಾಗಿದ್ದ ಧೂಮಪಾನ ನಿಷೇಧವನ್ನು ತೆರವು ಮಾಡುವಂತೆ 8-9 ವಯಸ್ಸಿನ ಮಕ್ಕಳು ಮಂಡಿಸುವ ವಾದದವರೆಗೂ ಇದೆ.

ಹೊರಜಗತ್ತು ಯಾವುದನ್ನು ನಕಾರಾತ್ಮಕ ನಡೆ ಅಥವಾ ಎಲ್ಲೆ ಮೀರಿದ ನಡತೆ ಎನ್ನುತ್ತದೆಯೋ, ಅಂಥವುಗಳ ವಿಚಾರದಲ್ಲೂ ಮಕ್ಕಳದೇ ಅಂತಿಮ ನಿರ್ಧಾರ ಎಂದು ಸಮ್ಮರ್ ಹಿಲ್‌ನಂತಹ ಶಾಲೆಯಲ್ಲಿ ಪ್ರತಿಪಾದಿಸಲಾಗುತ್ತದೆ. ಈ ಶಾಲೆಯಲ್ಲಿ ಮಕ್ಕಳಿಗೆ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳಲು  ಮುಕ್ತ ಅವಕಾಶ ನೀಡಲಾಗಿದೆ; ಚರ್ಚಿಸಬೇಕಾದ ವಿಷಯಗಳನ್ನು ಅವರೇ ಆರಿಸಿಕೊಳ್ಳುತ್ತಾರೆ; ಅವರ ನಡುವೆ (ಅಥವಾ ಮುಖ್ಯಶಿಕ್ಷಕಿ-ಶಿಕ್ಷಕರು-ವಿದ್ಯಾರ್ಥಿಗಳ) ನಡುವೆ ಮೇಲು-ಕೀಳು ಎಂಬ ಯಾವುದೇ ಶ್ರೇಣಿಗಳಿರದೆ, ಉತ್ತಮವಾದ ವಾದದ ಆಧಾರದ ಮೇಲೆಯೇ ನಿಯಮಗಳು ರೂಪಿಸಲ್ಪಡುತ್ತವೆ ಎನ್ನುವುದು ಅಲ್ಲಿನ ಘಟನಾವಳಿಗಳ ವಿವರಣೆಯಿಂದ ನಮಗೆ ತಿಳಿದುಬರುತ್ತದೆ. ಈ ಪ್ರಕ್ರಿಯೆಯು ಯಶಸ್ವಿಯಾಗುವುದಕ್ಕೆ ಕಾರಣ ಮಕ್ಕಳು ಶಾಲೆಯ ಮೂಲಭೂತ ಆಲೋಚನೆಯನ್ನು (ಅನುಭವದ ಮೂಲಕ) ಅರಿಯುವಂತೆ ಶಾಲೆಯು ನೋಡಿಕೊಂಡಿರುವುದು. ಮಕ್ಕಳು ಮುಕ್ತವಾಗಿರಲು ಅವಕಾಶ ಮಾಡಿಕೊಟ್ಟು, ಅವರ ಸ್ವಾತಂತ್ರ್ಯಕ್ಕೆ ಧಕ್ಕೆ ತರುವ ಯಾವುದೇ ವಿಷಯವು ಶಾಲೆಯ ತತ್ವಗಳಿಗೆ ವಿರುದ್ಧವಾಗಿದ್ದು, ಅದನ್ನು ಪ್ರಶ್ನಿಸಬಹುದಾಗಿದೆ ಎಂದು ಮಕ್ಕಳಿಗೆ ಇಲ್ಲಿ ಬೋಧಿಸಲಾಗಿದೆ.

**ಶಾಲೆಯ ಚುನಾವಣಾ ದಿನ**

ನನ್ನ ಅಸೋಸಿಯೇಟ್ ಕಾರ್ಯಕ್ರಮದ (Associate Programme) ಅಂಗವಾಗಿ ನಾನಾಗ ಯಾದಗಿರಿ ಜಿಲ್ಲೆಯ ಕಂಚಗರಹಳ್ಳಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಭೇಟಿ ನೀಡುತ್ತಿದ್ದೆ. ಈ ಶಾಲೆಗೆ ಹಳ್ಳಿಯ ಹಾಗು 'ತಾಂಡಾ'ದ (ಬುಡಕಟ್ಟು ಜನರ ಹಟ್ಟಿ) ವಿದ್ಯಾರ್ಥಿಗಳು ಬರುತ್ತಿದ್ದರು. ಯಾದಗಿರಿ ಜಿಲ್ಲೆಯಲ್ಲಿ ಸಾಧಾರಣವಾಗಿ ಎಲ್ಲಾ ಹಳ್ಳಿಗಳಲ್ಲಿಯೂ ಲಂಬಾಣಿ ಮಾತನಾಡುವ ಜನರ ಒಂದು ತಾಂಡಾ ಇರುತ್ತದೆ. ಇವು ಸಾಮಾನ್ಯವಾಗಿ ಹೆಚ್ಚು ಕಾಣದಂತಹ ದೂರದ ಸ್ಥಳಗಳಲ್ಲಿ, ಮುಖ್ಯರಸ್ತೆಗಳಿಂದ ಒಳಪ್ರದೇಶದಲ್ಲಿರುತ್ತದೆ.

ಶನಿವಾರ ಮಕ್ಕಳು ಶಾಲೆಯಲ್ಲಿ ಬೆಳಗಿನ ಪ್ರಾರ್ಥನೆಗೆಂದು ನೆರೆದಿದ್ದರು. ಹೊಸ ಶೈಕ್ಷಣಿಕ ವರ್ಷದ ನಾಯಕತ್ವದ ಸ್ಥಾನಗಳಿಗಾಗಿ ಚುನಾವಣೆ ನಡೆಯಬೇಕಿದ್ದು, ಶಾಲಾ ಆವರಣವನ್ನು ಸಂಪೂರ್ಣವಾಗಿ ಶುಚಿಗೊಳಿಸುವ ಕಾರ್ಯಕ್ರಮವೂ ಇತ್ತು. ಶುಚಿತ್ವ, ಕೈತೋಟ, ಗ್ರಂಥಾಲಯ, ಕ್ರೀಡೆ, ಇಂಗ್ಲಿಷ್, ಹಿಂದಿ ಮೊದಲಾದ ಶಾಲೆಯ ವಿವಿಧ ಕ್ಲಬ್‌ಗಳ ಹಾಗು ಮಧ್ಯಾಹ್ನದ ಬಿಸಿಯೂಟ, ಸಮವಸ್ತ್ರ ಪರಿಶೀಲನೆ  ಇತ್ಯಾದಿ ಕಾರ್ಯಕ್ರಮಗಳ ಮೇಲುಸ್ತುವಾರಿ ಸ್ಥಾನಗಳಿಗೆ ಚುನಾವಣೆ ನಡೆಯುವುದಿತ್ತು. ವಿದ್ಯಾರ್ಥಿಗಳು ಮತ್ತು ಮಕ್ಕಳೊಡನೆ ಮಾತನಾಡುವಾಗ ಅಂದು ಗೈರುಹಾಜರಾಗಿದ್ದ ಮಕ್ಕಳ ವಿಷಯವಾಗಿ ಮಾದರಿಯೊಂದು ನನಗೆ ಗೋಚರವಾಯಿತು:

- ಏಳು ಮತ್ತು ಎಂಟನೇ ತರಗತಿಯ ಅನೇಕ ಹೆಣ್ಣುಮಕ್ಕಳು ಹಾಜರಿರಲಿಲ್ಲ.
- ತಾಂಡಾದಿಂದ ಬರಬೇಕಿದ್ದ ಅನೇಕ ಮಕ್ಕಳು ಬಂದಿರಲಿಲ್ಲ.

ತಾಂಡಾದಿಂದ ಬರಬೇಕಿದ್ದ ವಿದ್ಯಾರ್ಥಿಗಳ ಗೈರುಹಾಜರಿ ಅಂತಹ ಅಸಾಧಾರಣ ಸಂಗತಿಯೇನೂ ಅಲ್ಲ ಎಂದು ಶಾಲಾ ಮುಖ್ಯ ಶಿಕ್ಷಕಿ ನನಗೆ ತಿಳಿಸಿದರು. ಅವರು ಶಾಲಾ ಆವರಣವನ್ನು ಶುಚಿಗೊಳಿಸುವ ದಿನಗಳಂದು ಸದಾ ಶಾಲೆಯಿಂದ ಹೊರಗುಳಿಯುತ್ತಾರೆ. ಹಾಗೆಯೇ, ವಿದ್ಯಾರ್ಥಿನಿಯರ ಗೈರುಹಾಜರಿಯು ಒಂದೇ ಗುಂಪಿನ ವಿದ್ಯಾರ್ಥಿಗಳು ನಾಯಕತ್ವದ ಸ್ಥಾನಗಳಿಗೆ

ಚುನಾಯಿತರಾಗುತ್ತಾರೆ ಎಂಬುದಕ್ಕೆ ಸಂಬಂಧಿಸಿತ್ತು ಎಂಬುದನ್ನೂ ನಾನು ಕಂಡುಕೊಂಡೆ. ಈ ನಾಯಕತ್ವದ ಸ್ಥಾನಗಳೊಂದಿಗೆ ಬರುವ ಜನಪ್ರಿಯತೆಯನ್ನು ನಿಭಾಯಿಸುವಲ್ಲಿ ಕಂಡುಬರುವ ನಾಚಿಕೆ, ಆತಂಕದ ಭಾವನೆಗಳು ಹದಿಹರೆಯದವರಲ್ಲಿ ಸಾಮಾನ್ಯವಾಗಿದ್ದರೂ, ಕೀಳರಿಮೆಗೆ ತುತ್ತಾಗುವುದು, ನಿರ್ಲಕ್ಷ್ಯಕ್ಕೆ ಒಳಗಾಗುವುದು ಹುಡುಗಿಯರೇ ಜಾಸ್ತಿ ಎಂಬುದನ್ನು ಸ್ಪಷ್ಟವಾಗಿ ನೋಡುವುದಕ್ಕೆ ಕೆಳಗಿನ ಅಂಶಗಳು ಕಾರಣವಾಗಿದ್ದವು :

ಹಲವು ಸ್ಥಾನಗಳಿಗೆ ಹುಡುಗ, ಹುಡುಗಿಯರಿಬ್ಬರನ್ನೂ ನೇಮಿಸುವುದು ಅವಶ್ಯಕವಾಗಿತ್ತು. ಆದರೆ ಇದು ನಾಮಕಾವಾಸ್ತೆ ನಿಯಮವಾಗಿತ್ತು ಎಂದು ತಿಳಿದುಬಂತು. ಸ್ಥಾನಕ್ಕೆ ಅನುಗುಣವಾಗಿ ಹೊಣೆಗಾರಿಕೆಗಳು ಹುಡುಗ ಅಥವಾ ಹುಡುಗಿಯ ಬೆನ್ನೇರುತ್ತಿದ್ದವು. ಉದಾಹರಣೆಗೆ, ಕ್ರೀಡೆ ಹಾಗು ತೋಟಗಾರಿಕೆಗೆ ಸಂಬಂಧಿಸಿದ ಕಾರ್ಯಕ್ರಮಗಳ ಆಯೋಜನೆ ಮತ್ತು ಮುಂದಾಳತ್ವಗಳು ಹುಡುಗರನ್ನು ಅರಸಿಕೊಂಡು ಬಂದರೆ, ಮಧ್ಯಾಹ್ನದ ಬಿಸಿಯೂಟ, ಶುಚಿತ್ವದಂತಹ ದಿನನಿತ್ಯದ ಕರ್ತವ್ಯಗಳ ನಿರ್ವಹಣೆ ಹೆಣ್ಣುಮಕ್ಕಳಿಗೆ ಮೀಸಲಾಗಿತ್ತು. ವಿವಿಧ ಕ್ಲಬ್‌ಗಳ ನಾಯಕತ್ವದ ಸ್ಥಾನದಂತಹ ಉಳಿದ ಸ್ಥಾನಗಳು ವಿದ್ಯಾಭ್ಯಾಸಕ್ಕೆ ಸಂಬಂಧಿಸಿದವಾಗಿದ್ದು, ಆಯ್ದ ಕೆಲವು ವಿದ್ಯಾರ್ಥಿಗಳನ್ನು ಮಾತ್ರ ಇಂತಹ ಸ್ಥಾನಗಳಿಗೆ ಆರಿಸಲಾಗುತ್ತಿತ್ತು.

ಮೈಮುರಿದು ದುಡಿಯುವ ಹುಡುಗರು ಶಾಲೆಗೆ ಗಿಡಗಳನ್ನು ತರುತ್ತಿದ್ದರು, ಕ್ರೀಡೆಯಲ್ಲಿ ಆಸಕ್ತಿ ಇದ್ದ ಹುಡುಗರು ಆ ವಿಭಾಗದ ನಾಯಕರಾಗಬಹುದಿತ್ತು. ಹುಡುಗಿಯರ ವಿಚಾರಕ್ಕೆ ಬಂದಾಗ, ಏಳು ಮತ್ತು ಎಂಟನೇ ತರಗತಿಯ ನಾಲ್ಕರಿಂದ–ಆರು ಮಕ್ಕಳ ಒಂದೇ ಗುಂಪು ಎಲ್ಲಾ ಸ್ಥಾನಗಳಿಗೂ ಸದಾ ಆಯ್ಕೆಯಾಗುತ್ತಿದ್ದರು. ಏಕೆಂದರೆ, ಪಾಠಗಳಲ್ಲಿ ಮುಂದಿದ್ದವರು ಹೊಣೆಗಾರರಾಗಲು ಸಮರ್ಥರಿದ್ದು, ಶಾಲೆಯ ದಿನನಿತ್ಯದ ಕಾರ್ಯಗಳ ಮೇಲ್ವಿಚಾರಣೆ ಮಾಡಬಲ್ಲರು ಎಂಬುದು ಶಿಕ್ಷಕರ ನಂಬುಗೆಯಾಗಿತ್ತು.

**ವಲಸಿಗ ಮಕ್ಕಳು**

ಲಂಬಾಣಿ ಮಾತನಾಡುವ ತಾಂಡಾ ವಿದ್ಯಾರ್ಥಿಗಳ ಗೈರುಹಾಜರಿ ಚಿಂತೆಯ ವಿಷಯವಾಗಿತ್ತು. ಕನ್ನಡ ಮಾಧ್ಯಮದಲ್ಲಿ ಕಲಿಯಲು ಹೆಣಗುವುದರಿಂದಾಗಿ ಅವರ ಶೈಕ್ಷಣಿಕ ಸಾಧನೆಯು ಈ ಪ್ರದೇಶದಲ್ಲಿ ಒಂದು ಸವಾಲಾಗಿ ಪರಿಣಮಿಸಿದೆ..ಆದರೆ ಅವರು ನಾಯಕತ್ವ ತೋರಬಹುದಾದ ಕೆಲವು ವಿಭಾಗಗಳಿವೆ, ಉದಾಹರಣೆಗೆ, ಹಿಂದಿ ವಿಭಾಗ (ಅವರು ಹಿಂದಿಯಲ್ಲಿ ಆರಾಮವಾಗಿ ವ್ಯವಹರಿಸಬಲ್ಲರು) ಅಥವಾ ಸಾಂಸ್ಕೃತಿಕ ಚಟುವಟಿಕೆಗಳು (ಅವರು ಹಾಡು ಮತ್ತು ನೃತ್ಯಗಳಲ್ಲಿ ಆಸಕ್ತಿ ತೋರುತ್ತಾರೆ). ಆದರೆ ಅವರ ಶೈಕ್ಷಣಿಕ ಸಾಧನೆಯು ಅವರು ಆಯ್ಕೆಯಾಗುವ ಒಟ್ಟಾರೆ ಸಾಧ್ಯತೆಗೆ ಬಾಧಕವಾಗಿದ್ದರೆ, ಅವರ ಗೈರು ಹಾಜರಿಯು ಇದ್ದ ಅಲ್ಪ ಸಾಧ್ಯತೆಯನ್ನೂ ಶೂನ್ಯವಾಗಿಸಿಬಿಟ್ಟಿತು.

ಅವರೇಕೆ ಗೈರುಹಾಜರಾಗಿದ್ದಾರೆ ಹಾಗು ಸ್ವಚ್ಛತಾ ಕೆಲಸದಿಂದ ಅವರು ಸದಾ ಏಕೆ ತಪ್ಪಿಸಿಕೊಳ್ಳುತ್ತಾರೆ ಎಂಬುದನ್ನು ಅರ್ಥಮಾಡಿ–ಕೊಳ್ಳಲು ಪ್ರಯತ್ನಿಸಿದ ನನಗೆ ಒಟ್ಟಾರೆ ಶಾಲಾ ಹಂತದಲ್ಲಿ ಅವರ ಹಾಜರಿಯನ್ನು ಗಮನಿಸಬೇಕು ಎಂದು ಅನ್ನಿಸಿತು. ಆರಂಭಿಕ ಹಂತಗಳಿಂದಲೂ ತಾಂಡಾದ ಮಕ್ಕಳು ಕನ್ನಡ ಮಾತನಾಡುವ ಮಕ್ಕಳೊಂದಿಗೆ ಬೆರೆಯಲು ಪ್ರಯಾಸಪಡುತ್ತಾರೆ. ಅವರ ಪೋಷಕರ ಕಸುಬುಗಳಲ್ಲಿನ ಭಿನ್ನತೆಯ ಕಾರಣದಿಂದಾಗಿ ಕೆಲವು ಋತುಗಳಲ್ಲಿ (ಸುಗ್ಗಿ ಕಾಲದಲ್ಲಿ, ಹಬ್ಬಗಳಲ್ಲಿ, ಇತ್ಯಾದಿಗಳಲ್ಲಿ) ಅವರು ಗೈರುಹಾಜರಾಗುವುದು ಸಾಮಾನ್ಯವಾಗಿತ್ತು. ಅವರು ತಮ್ಮ ಕುಟುಂಬದವರೊಂದಿಗೆ ಕೆಲಸದ ನಿಮಿತ್ತ ದೊಡ್ಡ ನಗರಗಳಿಗೆ ಗುಳೇ ಹೋಗುವ ಸಮಯದಲ್ಲಿ ದೀರ್ಘಕಾಲ ಗೈರುಹಾಜರಾಗುವ ಸಂಭವ ಹೆಚ್ಚಾಗಿರುತ್ತಿತ್ತು. ಈ ನಗರಗಳಲ್ಲಿ ಅವರು ತಮ್ಮ ಕಲಿಕೆಯೂ ಸೇರಿದಂತೆ, ಕನ್ನಡ ವಾತಾವರಣವನ್ನು ಕಳೆದುಕೊಳ್ಳುತ್ತಾರೆ. ಶಾಲೆಗೆ ಮರಳಿದಾಗ ಭಾಷೆಗೆ ಸಂಬಂಧಿಸಿದಂತೆ ಅವರು ಎದುರಿಸುವ ತೊಡಕಿನಿಂದಾಗಿ ಸಹಪಾಠಿಗಳೊಡನೆ, ಶಿಕ್ಷಕರೊಡನೆ ಒಡನಾಡುವ ಸವಾಲು ಇನ್ನಷ್ಟು ಬಿಗಡಾಯಿಸಿರುತ್ತದೆ. ತಮ್ಮ ಸಹಪಾಠಿಗಳ ನಡುವೆ ಹೊಂದಾಣಿಕೆಯಾಗದೆ ಹೋಗುವುದು ಮಾಮೂಲಿನ ಸಂಗತಿಯಾಗಿ, ಈ ಮಕ್ಕಳು ಒಂದೇ ಸಮನೆ ತೆಗಳಿಕೆಗೆ ಗುರಿಯಾಗುವ ಆತಂಕದಲ್ಲಿ ಇರುವಂತಾಗುತ್ತದೆ.

**ಗುರುತಿಸಿಕೊಳ್ಳುವಿಕೆಯ ಪ್ರಜ್ಞೆ**

ಹೊಣೆಗಾರಿಕೆ ಎಂಬುದು ಗುರುತಿಸಿಕೊಳ್ಳುವಿಕೆಯ ಪ್ರಜ್ಞೆಯೊಂದಿಗೆ ನಿಕಟವಾದ ಸಂಬಂಧ ಹೊಂದಿದೆ. ಸಣ್ಣ ಮಕ್ಕಳ ವಿಷಯದಲ್ಲಾದರೂ, ಅವರು ಮೊದಲು ಗುರುತಿಸಿಕೊಳ್ಳುವ ಪ್ರಜ್ಞೆಯನ್ನು ಬೆಳೆಸಿಕೊಂಡ ನಂತರವೇ ಜವಾಬ್ದಾರಿಯನ್ನು ಸೇರಿಸಬಹುದು. ಇದರ ಉದಾಹರಣೆಯನ್ನು ನೀಲ್ ಅವರ ಸಮ್ಮರ್ ಹಿಲ್ ಶಾಲೆಯ ವಿವರಣೆಯಲ್ಲಿ ಕಾಣಬಹುದು: ಕಿಟಕಿಯನ್ನು ಒಡೆದು ಹಾಕುತ್ತಿದ್ದ ಮಗುವೊಂದು ಅದನ್ನು ದುರ್ನಡತೆ ಎಂದಾಗಲೀ, ತಪ್ಪು ಎಂದಾಗಲೀ ಕಾಣಲು ನಿರಾಕರಿಸಿ, 'ಇವು ನನ್ನ ಕಿಟಕಿಗಳು' ಎಂದು ಹೇಳಿ, ತನ್ನಿಂದಾದ ನಷ್ಟವನ್ನು ತುಂಬಿ–ಕೊಡುವುದಾಗಿ ಹೇಳುತ್ತದೆ (ನೀಲ್, 1960). ಈ ಸನ್ನಿವೇಶದಲ್ಲಿ ಮಗುವಿನ ಗುರುತಿಸಿಕೊಳ್ಳುವಿಕೆಯ ಪ್ರಜ್ಞೆ ಮೊದಲು ಹೊಮ್ಮಿ, ತನ್ನ ವಯಸ್ಸಿನ ಕಾರಣದಿಂದಾಗಿ ಅದು ಒಡೆತನದ ಸ್ವಭಾವವನ್ನು ಹೊಂದಿದೆ. ತನ್ನ ನಡತೆಗೆ ಪಶ್ಚಾತ್ತಾಪಪಡುವಂತೆ ಮಾಡಲು ಅಥವಾ ತಾನು ಮಾಡಿದುದು ತಪ್ಪು ಎಂಬುದನ್ನು ಮಗು ಅರಿಯಲಾಗುವಂತೆ ಮಾಡಲು ಆಗದೇ ಇರುವುದಕ್ಕೆ ಕಾರಣ ಮಗುವಿನ ವಯಸ್ಸು. ಆದರೆ, ಮಗುವಿನಲ್ಲಿ ಜಾಗೃತವಾಗಿರುವ ಗುರುತಿಸಿಕೊಳ್ಳುವಿಕೆಯ ಪ್ರಜ್ಞೆ ತಾನು ಯಾವ ಕ್ರಿಯೆಗೆ ಹೊಣೆಗಾರನೋ ಅದನ್ನು ಅತ್ಯಂತ ಸಹಜ ರೀತಿಯಲ್ಲಿ ಒಪ್ಪಿಕೊಳ್ಳುವಂತೆ ಮಾಡುತ್ತದೆ.

ತಾಂಡಾ ವಿದ್ಯಾರ್ಥಿಗಳು ಶಾಲಾ ಸ್ವಚ್ಛತೆಯ ಕರ್ತವ್ಯದಿಂದ ಹಿಂದೆ ಸರಿಯಲು ಕಾರಣವೇನು ಎಂಬುದರ ಬಗ್ಗೆ ಚಿಂತಿಸುವಾಗ ನನಗೆ ಮೇಲೆ ಉಲ್ಲೇಖಿಸಿದ ಘಟನೆ ನೆನಪಾಯಿತು. ಶ್ರಮದಾಯಕವೆಂದು ತೋರುವಂತಹ ಕೆಲಸಗಳನ್ನು ಯಾವುದೇ ಮಗುವೂ ಖುಷಿಯಿಂದ ಮಾಡುವುದಿಲ್ಲ ಎಂಬುದು ಸಾಮಾನ್ಯ ಜ್ಞಾನ. ಮನೆಯಲ್ಲಾಗಲೀ, ಶಾಲೆಯಲ್ಲಾಗಲೀ ಅಂತಹ ಕೆಲಸ ಮಾಡಲು ಮಕ್ಕಳಿಗೆ ಬೇರೆಯೇ ಆದ ಪ್ರೇರಣೆ ಅಗತ್ಯವಾಗಿರುತ್ತದೆ. ಇದನ್ನೊಂದು ನಿಯಮವನ್ನಾಗಿಸಿ, ಬೆದರಿಕೆ ಒಡ್ಡಿ ಅಥವಾ ಇದನ್ನು ಮಾಡುವ ಅಗತ್ಯ ಇದೆ ಎಂದು ಮಕ್ಕಳು ನಂಬುವಂತೆ ಬಲವಂತ ಮಾಡಿ ಅವರಿಂದ ಇಂತಹ ಕೆಲಸಗಳನ್ನು ಮಾಡಿಸಬಹುದು. ಆದರೆ, ಮಕ್ಕಳು ಏನನ್ನಾದರೂ ಮಾಡಲು ಯಾವುದೇ ರೀತಿಯ ವೈಯಕ್ತಿಕ ಪ್ರೇರಣೆ ಇಲ್ಲದಿದ್ದಾಗ ಅವರು ಹೇಗೆ ಸ್ಪಂದಿಸುತ್ತಾರೆ ಎಂಬುದನ್ನು ತಾಂಡಾ ವಿದ್ಯಾರ್ಥಿಗಳ ಉದಾಹರಣೆ ತೋರಿಸುತ್ತದೆ. ವಿದ್ಯಾರ್ಥಿಗಳಿಗೆ ತಾವು ನಿಜವಾಗಿಯೂ ಆರರಿಂದ ಏಳು ವರ್ಷಗಳಿಂದಲೂ ಶಾಲೆಯ ಅಂಗವಾಗಿರುತ್ತೇವೆ ಎಂಬ ಭಾವನೆ ಮೂಡಿರದಿದ್ದಲ್ಲಿ ಅವರಿಗೆ ಶಾಲೆಯ ಆವರಣವನ್ನು ಸ್ವಚ್ಛಗೊಳಿಸು–ವಂತಹ ಕೆಲಸವನ್ನು ವಹಿಸಿದಾಗ ಅದಕ್ಕೆ ಹೊಣೆಗಾರರಾಗಲು ಹಿಂದೇಟು ಹಾಕುತ್ತಾರೆ. ಹೆಣ್ಣುಮಕ್ಕಳು ಆರು ವರ್ಷಗಳಿಂದಲೂ ಇದು ನಮ್ಮ ಶಾಲೆಯೆಂಬ ಭಾವವನ್ನು ಅನುಭವಿಸಿರದಿದ್ದರೆ,

ಹದಿಹರೆಯದ ಪ್ರಾಯವು ಮೇಲೆ ಹೇಳಿದಂತಹ ಭಾವನೆಯನ್ನು ಇನ್ನಷ್ಟು ತೀವ್ರಗೊಳಿಸಬಹುದು.

**ಶಿಕ್ಷಕರ ಪೂರ್ವಗ್ರಹಗಳು**

ಚುನಾವಣೆಯ ವಿಷಯಕ್ಕೆ ಬಂದರೆ, ಶಿಕ್ಷಕರಲ್ಲಿ ನಡುವೆ ಕಂಡುಬರುವ ಪೂರ್ವಗ್ರಹವನ್ನು ನಿರುತ್ಸಾಹಗೊಳಿಸಬೇಕಾದುದು ಅವಶ್ಯಕವಾದರೂ, ಅದು ಇರುವುದಂತೂ ಎಲ್ಲರಿಗೂ ತಿಳಿದ ಸಂಗತಿ. ಸರ್ಕಾರಿ ಶಾಲೆಯ ಮೆಟ್ಟಿಲು ತುಳಿದ, ಪಾಠಗಳಲ್ಲಿ ಮುಂದಿದ್ದ ಎಲ್ಲಾ ವಯಸ್ಕರೂ ಇದನ್ನು ರುಜುವಾತು ಮಾಡಬಲ್ಲರು. ತಾವು ಶಿಕ್ಷಕರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದೆ ಎಂದು ಹೇಳುವ ಅವರು, ತಾವು ವಿದ್ಯಾರ್ಥಿಗಳಾಗಿದ್ದಾಗ ಕೆಲವೇ ಕೆಲವು ಆಯ್ದ ವಿದ್ಯಾರ್ಥಿಗಳ ಕಡೆ ಗಮನ ಕೇಂದ್ರೀಕರಿಸಿದವರು ತಮ್ಮ ಶಾಲೆಯ ಅತ್ಯುತ್ತಮ ಶಿಕ್ಷಕರಾಗಿದ್ದರು ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಶಿಕ್ಷಕರೂ ಇದನ್ನು ಒಪ್ಪಿಕೊಳ್ಳುತ್ತಾರೆ; ಕಲಿಯಲು ಇಚ್ಛೆ ತೋರುವವರನ್ನು ಗುರುತಿಸುತ್ತಿದ್ದಂತೆ ಅವರನ್ನು ಶಿಕ್ಷಕರು ತಮ್ಮ ಅಚ್ಚುಮೆಚ್ಚಿನವ-ರನ್ನಾಗಿ ಮಾಡಿಕೊಂಡು, ತಮ್ಮ ಎಲ್ಲಾ ಪ್ರಯತ್ನಗಳನ್ನೂ ಅವರ ಬೆಳವಣಿಗೆಯ ಕಡೆ ತಿರುಗಿಸುತ್ತಾರೆ.

ಶಾಲೆಯ ಸರ್ಕಾರವನ್ನು ಮಕ್ಕಳು ಶಾಲೆಯ ದಿನನಿತ್ಯದ ವ್ಯವಹಾರವನ್ನು ನೋಡಿಕೊಳ್ಳಲು ರಚಿಸಿರುತ್ತಾರೆ ಎಂಬುದನ್ನು ನಾವು ಮರೆಯಲಾಗದು. ನಾಯಕತ್ವವೆಂದರೆ ಎಲ್ಲಕ್ಕಿಂತ ಮಿಗಿಲಾಗಿ ಹೊಣೆಗಾರಿಕೆಯನ್ನು ಹೊರಲು ಮುಂದೆ ಬರುವುದು ಹಾಗು ಇತರರು ತಮಗೆ ವಹಿಸಲಾದ ಕರ್ತವ್ಯಗಳನ್ನು ನಿಭಾಯಿಸಲು ಆಗುವಂತೆ ಅವರಿಗೆ ಬೆಂಬಲವಾಗಿ ನಿಲ್ಲುವುದೇ ಆಗಿದೆ. ನಿರ್ಧಾರಗಳನ್ನು ಕೈಗೊಳ್ಳುವಾಗ ಸಾಮೂಹಿಕವಾಗಿ ಎಲ್ಲಾ ಮಕ್ಕಳ ಸಮ್ಮತಿಯನ್ನೂ ಆಧರಿಸಿರಬೇಕೇ ಹೊರತು ಯಾವ ಮಕ್ಕಳನ್ನು ಹೊರಗಿಡಬೇಕು ಎನ್ನುವ ಒಪ್ಪಿಗೆಯ ಮೇಲಲ್ಲ. ಮಕ್ಕಳಿಂದ, ಮಕ್ಕಳಿಗಾಗಿ ರಚಿತವಾಗಿರುವ ಮಕ್ಕಳ ಸರ್ಕಾರವು ವಿದ್ಯಾರ್ಥಿಗಳು ಶಿಕ್ಷಕರ ಜಾಗದಲ್ಲಿ ನಿಂತು ಇತರ ವಿದ್ಯಾರ್ಥಿಗಳು ಅಂಕೆ ಮೀರದಂತೆ ನೋಡಿಕೊಳ್ಳಲು ಇರುವುದಲ್ಲ, ಬದಲಿಗೆ, ವಿದ್ಯಾರ್ಥಿಗಳೇ ತಮ್ಮ ಕೆಲಸ, ಜವಾಬ್ದಾರಿಗಳನ್ನು 'ತಮ್ಮಷ್ಟಕ್ಕೇ ತಾವೇ ನಿಭಾಯಿಸಲು' ಸಾಧ್ಯವಾಗುವ ವಾತಾವರಣವೊಂದು ನಿರ್ಮಾಣವಾಗುವಂತೆ ನೋಡಿಕೊಳ್ಳಲು ಇದೆ ಎಂಬುದು ಮುಖ್ಯವಾದ ಸಂಗತಿ.

ತಾಂಡಾ ಮಕ್ಕಳು ಅಂದು ಶಾಲೆಯಲ್ಲಿ ಕಾಣದೇ ಹೋದಾಗ ತಮ್ಮ ಸಲುವಾಗಿಯೇ ತಾವು ಶಾಲಾ ಆವರಣವನ್ನು ಸ್ವಚ್ಛಗೊಳಿಸಬೇಕು ಎಂಬ ಭಾವನೆ ಅವರಲ್ಲಿ ಕಾಣದೇ ಹೋಗಿದ್ದುದನ್ನೂ ನಾನು ಗುರುತಿಸಿದೆ.

**ಮಕ್ಕಳಿಂದ ನಿಯಮಗಳ ರಚನೆ**

ಶಾಲೆಯ ಹಂತದಲ್ಲಿ ನಾನು ಹೆಚ್ಚಿನದೇನನ್ನೂ ಮಾಡಲಾಗದಿದ್ದರೂ, ತಾವೇ ರಚಿಸಿಕೊಂಡ ಆಡಳಿತ ವ್ಯವಸ್ಥೆಯ ವಿಚಾರವಾಗಿ ಮಕ್ಕಳು ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ನನಗೆ ತಿಳಿಯುವ ಬಯಕೆಯಿತ್ತು. ಐದನೇ ತರಗತಿಯ ನನ್ನ ವಿದ್ಯಾರ್ಥಿಗಳು ಗಲಾಟೆ ಮಾಡುತ್ತಿದ್ದಾಗ ನಾನು ಓದುತ್ತಿದ್ದ ಕಥೆ ಪುಸ್ತಕವನ್ನು ಮುಚ್ಚುವುದನ್ನು ಕಂಡ ಅವರು ಮೊದಲು ತಮಗೆ ತಾವೇ 'ಶ್' ಎನ್ನುತ್ತಾ ಮಲಗಿರುವಂತೆ ಸೂಚಿಸಿಕೊಂಡರಾದರೂ, ಬಳಿಕ, ಇನ್ನೂ ಹೆಚ್ಚಿನ ಗದ್ದಲ ಹಾಗು ಪರಸ್ಪರ ಆಕ್ಷೇಪಗಳ ಮಳೆಗರೆಯಲು ಶುರುಮಾಡಿದರು. ವಾರಕ್ಕೆ ಒಂದು ಕಥೆಯನ್ನು ಮುಗಿಸಲು ಸಾಧ್ಯವಾಗುವಂತೆ ನಿಮ್ಮದೇ ಆದ ಒಂದು ನಿಯಮವನ್ನು ರೂಪಿಸಿಕೊಳ್ಳಿ ಎಂದು ನಾನು ಅವರಿಗೆ ಹೇಳಿದಾಗ (ಅವರ ಕಡೆಯಿಂದ ಯಾವುದೇ ಅಡೆತಡೆ ಇಲ್ಲದಿದ್ದರೆ ಮಾತ್ರ ಇದು ಸುಸೂತ್ರವಾಗಿ ಜರುಗಲು ಸಾಧ್ಯವಿತ್ತು ಎಂಬ ಸೂಚನೆ ಅದರಲ್ಲಿ ಸೇರಿತ್ತು.) ಅವರು ಅತ್ಯಂತ ವ್ಯಾಪಕ ನಿಯಮಗಳ ಪಟ್ಟಿಯನ್ನೇ ನನ್ನ ಎದುರು ಇಟ್ಟರು (ಜಗಳಗಳನ್ನು ತಪ್ಪಿಸಲು ಯಾರು ಯಾರೊಡನೆ ಕುಳಿತುಕೊಳ್ಳಕೂಡದು ಎಂಬುದನ್ನೂ ಒಳಗೊಂಡಿತ್ತು!). ಇದನ್ನೇ ಮಾಡಲು ನಾನು ಆರು ಮತ್ತು ಏಳನೇ ತರಗತಿಯ ಮಕ್ಕಳೊಡನೆಯೂ ಪ್ರಯತ್ನಿಸಿದಾಗ, ಅದು ಯಶಸ್ವಿಯಾಗಿ ನೆರವೇರಿತು.

ಈ ನಿಯಮುಗಳು ತರಗತಿಯಲ್ಲಿ ಒಂದು ಕರಾರುವಾಕ್ಕಾದ ವಾತಾವರಣವನ್ನು ಏರ್ಪಡಿಸುವ ಭರವಸೆಯನ್ನೇನೂ ನೀಡಲಿಲ್ಲ. ಆದರೆ, ಸಮಸ್ಯೆ ತಲೆದೋರಿದಾಗ ಮಕ್ಕಳಿಗೆ ಎಲ್ಲಿ, ಏನು ತಪ್ಪಾಗಿದೆ ಎಂದು ತಿಳಿದು ಅದನ್ನು ತಾವು ಹೇಗೆ ಸರಿಪಡಿಸಬಹುದೆಂದು ತೋರುತ್ತಿದ್ದುದರಿಂದ ಈ ಪ್ರಕ್ರಿಯೆಯು ಯಶಸ್ಸು ಕಾಣುವಂತಾಯಿತು. ಅಂದರೆ, ಬೇರೆಯೇ ಆದ ರೀತಿಗಳಲ್ಲಿ ಸಮಸ್ಯೆಗಳು ನಿರ್ವಹಿಸಬೇಕಾದ ಸಂದರ್ಭಗಳೇ ಇರಲಿಲ್ಲವೆಂದಲ್ಲ. ವಿದ್ಯಾರ್ಥಿಗಳು ಕೆಲವು ನಿರ್ದಿಷ್ಟ ಸಮಸ್ಯೆಗಳನ್ನು ನನ್ನ ಗಮನಕ್ಕೆ ತರದಿದ್ದ ಸಂದರ್ಭಗಳೂ ಇದ್ದವು; ನಾನು ಅವುಗಳನ್ನು ಬಗೆಹರಿಸುವ ವಿಧಾನ ಫಲಕಾರಿಯಾಗದು ಎಂದು ಅವರಿಗೆ ಅನಿಸಿದ್ದು ಇದಕ್ಕೆ ಕಾರಣವಾಗಿತ್ತು. ನಾನು ಈ ಶಾಲೆಯೊಂದಿಗೆ ಕಳೆದ ಅಲ್ಪಕಾಲಿಕ ಅವಧಿಯಲ್ಲಿ ಮಕ್ಕಳಿಂದ ರಚಿತವಾದ ಆಡಳಿತ ಯಂತ್ರ ಕೆಲಸ ಮಾಡಬಲ್ಲದು ಎಂದು ಹೇಳಲು ಸಾಧ್ಯವಾಯಿತು. ನನ್ನ (ಸಣ್ಣ ಪ್ರಮಾಣದ) ಪ್ರಯತ್ನದಲ್ಲಿ ಎಲ್ಲಾ ಮಕ್ಕಳ ಸೇರ್ಪಡೆಯನ್ನೂ ಆದ್ಯತೆಯನ್ನಾಗಿಸಿದ್ದೆ ಮಾತ್ರವಲ್ಲ, ಮಕ್ಕಳು ರಚಿಸಿಕೊಂಡ ನಿಯಮಗಳು ನೇರವಾಗಿ ಅವರ ನಡತೆಗಳಿಗೆ ಸಂಬಂಧಿಸಿದ್ದರಿಂದ ಎಲ್ಲಾ ಮಕ್ಕಳನ್ನೂ ಈ ಪ್ರಕ್ರಿಯೆಯಲ್ಲಿ ಒಳಗೊಳ್ಳಲು ನನಗೆ ಸಾಧ್ಯವಾಗಿತ್ತು. ಅವರ ನಡುವೆ ನಡೆಯುತ್ತಿದ್ದ ಗದ್ದಲ, ಜಗಳ ಹಾಗು ಚಡಪಡಿಕೆಗಳ. ಸಂದರ್ಭದಲ್ಲಿ ಅವರೇ ಆಯ್ಕೆ ಮಾಡಿದ ಕಥೆಯೊಂದನ್ನು ನಿರೂಪಿಸಲಾಯಿತು. ನನ್ನದು ಎಂಬ ಭಾವನೆಯನ್ನು ಉಂಟುಮಾಡಿ ಹೊಣೆಗಾರಿಕೆಯ ಭಾವವನ್ನು ಸ್ಥಾಪಿಸುವುದು (ಸುಲಭವಿರದಿದ್ದರೂ) ಸರಳವಾಗಿ ಸಾಧ್ಯವಾಗಿತ್ತು. ಇದನ್ನು ನಾನು ಐದರಿಂದ ಏಳನೇ ತರಗತಿಯ ಮಕ್ಕಳ ಹಂತದಲ್ಲಿ ಮಾತ್ರ ಸಾಧಿಸಲು ಸಾಧ್ಯವಾಯಿತು. 'ನಲಿ-ಕಲಿ' ಮಕ್ಕಳ ಹಂತದಲ್ಲಿ ನಿಯಮಗಳನ್ನು, ಅವುಗಳನ್ನು ಯಾರೇ ಮಾಡಿರಲಿ, ಮಕ್ಕಳು ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆಂದು ನಿರೀಕ್ಷಿಸಲಾಗದು. ನಿನ್ನೆ ಅವರು ಅವುಗಳನ್ನು ಒಪ್ಪಿಕೊಂಡಿದ್ದರೂ, ತಮ್ಮ ಆಟದ ಗದ್ದಲದಲ್ಲಿ ಮರುದಿನ ಅವನ್ನು ಮರೆಯುವ ಸಾಧ್ಯತೆಗಳೇ ಹೆಚ್ಚು. ಆದರೆ ಪ್ರತಿ ತರಗತಿಯಲ್ಲೂ ನಾವು ಕೆಲವು ಸಣ್ಣ-ಪುಟ್ಟ (ಕಥೆ ಕೇಳುವಾಗ ಅರ್ಧವೃತ್ತಾಕಾರದಲ್ಲಿ ಮಾತ್ರ ಕುಳಿತುಕೊಳ್ಳಬೇಕು ಎಂಬಂತಹ) ನಿಯಮಗಳನ್ನು ಪಾಲಿಸುತ್ತಿದ್ದೆವು. ಇದು ತರಗತಿಗಳಿಗೆ ಸಂರಚನೆ ಹಾಗು ಸುಸಂಗತತೆಯನ್ನು ಒದಗಿಸಿತ್ತು.

ನಾನು ಅರ್ಥಮಾಡಿಕೊಂಡಿರುವಂತೆ, ನಮ್ಮ ಸರ್ಕಾರಿ ಶಾಲೆಗಳಲ್ಲಿ ಪೌರತ್ವ ಶಿಕ್ಷಣವು ನಾಲ್ಕು ಮುಖ್ಯ ಸಂಗತಿಗಳ ಸುತ್ತ ಹೆಣೆದುಕೊಂಡಿದೆ: ಮೊದಲಿಗೆ, ಮಕ್ಕಳು ತಾವು ಶಾಲೆಯ ಪ್ರಜೆಗಳು ಎಂಬ ಭಾವನೆ ಬಲಿಯುವಂತಹ ವಾತಾವರಣದ ಅವಶ್ಯಕತೆ; ಎರಡನೆಯದು, ಶಾಲೆಯ ಪ್ರತಿ ಸದಸ್ಯನಿಗೂ ಒಂದಷ್ಟು ನಿಗದಿಪಡಿಸಲಾದ ಹಕ್ಕುಗಳಿರುವ ಕಾರಣದಿಂದ ಈ ವಾತಾವರಣವು ಅಸ್ತಿತ್ವದಲ್ಲಿರುತ್ತದೆ ಎಂಬುದನ್ನು ಮಕ್ಕಳು ಅರ್ಥಮಾಡಿಕೊಳ್ಳುವುದು; ಮೂರನೆಯದು, ಈ ಹಕ್ಕುಗಳು

ಸಕ್ರಿಯವಾಗುವಂತಹ ಪ್ರಕ್ರಿಯೆಗಳಾದ ಪಾಲನೆ, ಸಮರ್ಥನೆ ಹಾಗು ಅನುಷ್ಠಾನಗಳಲ್ಲಿ ಮಕ್ಕಳು ತಮ್ಮನ್ನು ತೊಡಗಿಸಿ–ಕೊಳ್ಳುವುದು; ಕೊನೆಯದಾಗಿ, ಪ್ರಜಾಪ್ರಭುತ್ವದ ಪರಿಕಲ್ಪನೆ–ಯನ್ನು ಅವರ ಚೌಕಟ್ಟಿಗೆ ಹೇಗೆ ಅಳವಡಿಸಲಾಗಿದೆ ಎಂಬುದರ ಅರಿವನ್ನು ಅವರ ಔಪಚಾರಿಕ ಕಲಿಕಾ ಪ್ರಕ್ರಿಯೆಗೆ (ಅವರು ತಮ್ಮ ಒದಗಿಸಿತ್ತು. ಪೌರನೀತಿ ಪಾಠಗಳಲ್ಲಿ ಭಾರತದ ಪ್ರಜಾಪ್ರಭುತ್ವದ ವಿಷಯವನ್ನು ಕಲಿಯುವಾಗ ಆಗುವಂತೆ) ತಳುಕು ಹಾಕುವುದು.

ಜವಾಬ್ದಾರಿಯುತ ಪ್ರಜೆಗಳನ್ನು ಅಥವಾ ಜವಾಬ್ದಾರಿಯುತ ವಿದ್ಯಾರ್ಥಿಗಳನ್ನು ಸೃಷ್ಟಿಸುವ ಆಲೋಚನೆಯು ಒಂದು ಸಂಕೀರ್ಣ ಸಮಸ್ಯೆಯಾಗಿ ಕಂಡು ನಾವು ಧೈರ್ಯಗೆಡಿಸುವಂತಿದ್ದರೂ ಪ್ರತಿ ಮಗುವೂ ಶಾಲೆಯು ತನ್ನದೆಂದು ಗುರುತಿಸಿಕೊಳ್ಳುವಂತೆ ಮಾಡುವುದು ನಮ್ಮೆಲ್ಲರ ಹೊಣೆಗಾರಿಕೆಯಾಗಿದೆ. ಈ ಶಾಲೆ ನಮ್ಮದೆಂದು ಭಾವಿಸುವ ಪ್ರಜೆಗಳ ಸೃಷ್ಟಿಯಲ್ಲಿ ಭಾಗವಹಿಸುವುದು ಉತ್ತಮ ಆರಂಭ ಮತ್ತು ನನ್ನ ಅಲ್ಪಕಾಲಿಕ ಅನುಭವದಲ್ಲಿ ಇದನ್ನು ನೋಡುವುದು ಕೂಡ ಅದ್ಭುತವಾದುದು!

i. ತೋತೋ ಚಾನ್, "ದ ಲಿಟಲ್ ಗರ್ಲ್ ಎಟ್ ದ ವಿಂಡೋ" (1981) ಎಂಬುದು ಜಪಾನಿನ ದೂರದರ್ಶನ ಕಲಾವಿದೆ ಹಾಗು ಯೂನಿಸೆಫ್ ಸದ್ಭಾವನಾ ರಾಯಭಾರಿಯಾದ ತೆತ್ಸುಕೋ ಕುರೊಯಾನಗಿ ಅವರ ಆತ್ಮಕಥನವಾಗಿದೆ.

ii. ಸಮ್ಮರ್ ಹಿಲ್ ಎಂಬುದು ಇಂಗ್ಲೆಂಡಿನ ಲೆಸ್ಟೋನ್‌ನ ಸಫೋಕ್‌ನಲ್ಲಿ ಇರುವ ಒಂದು ಸ್ವತಂತ್ರ ವಸತಿ ಶಾಲೆಯಾಗಿದೆ. ಈ ಶಾಲೆಯನ್ನು ಅಲೆಕ್ಸಾಂಡರ್ ಸದರ್‌ಲ್ಯಾಂಡ್ ನೀಲ್ ಅವರು, 'ಮಗುವಿಗೆ ತಕ್ಕ ಹಾಗೆ ಶಾಲೆಯನ್ನು ರೂಪಿಸಬೇಕೇ ಹೊರತು ಶಾಲೆಗೆ ತಕ್ಕ ಹಾಗೆ ಮಗುವನ್ನಲ್ಲ' ಎಂಬ ಅಚಲ ನಂಬುಗೆಯೊಂದಿಗೆ 1921ರಲ್ಲಿ ಆರಂಭಿಸಿದರು.



**ಅರ್ಚನಾ ಆರ್**. ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಕರ್ನಾಟಕದ ಯಾದಗಿರಿಯಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಇಂಗ್ಲಿಷ್ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ಕಥೆ–ಕಾದಂಬರಿಗಳನ್ನು ಓದುವುದರಲ್ಲಿ ಹಾಗು ಮಕ್ಕಳಿಗೆ ಓದಲು ರೋಚಕ ಪುಸ್ತಕಗಳ ಹುಡುಕಾಟದಲ್ಲಿ ಒಲವು ತೋರುತ್ತಾರೆ. ಅವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: archana.r@azimpremjifoundation.org

ಅನುವಾದ: **ಕುಶಾಲ್** । ಪರಿಶೀಲನೆ: **ಲತಾ ಕೆ.ಸಿ.**

# ವಿಜ್ಞಾನ ತರಗತಿಯಲ್ಲಿ ಪ್ರಜಾಪ್ರಭುತ್ವ

ಚಂದ್ರಿಕಾ ಮುರಳೀಧರ್

'ನಾಗರಿಕರಲ್ಲಿ ವೈಜ್ಞಾನಿಕ ಮನೋಭಾವ, ಮಾನವೀಯತೆ, ಅನ್ವೇಷಣೆಯ ಪ್ರಜ್ಞೆ ಮತ್ತು ಸುಧಾರಣೆಯ ಮನೋಭಾವ ಬೆಳೆಸುವುದನ್ನು' ಸಂವಿಧಾನದ 51 ಎ (ಹೆಚ್) ವಿಧಿಯು ಉತ್ತೇಜಿಸುತ್ತಿದ್ದು, ಇದು ಭಾರತದಲ್ಲಿರುವ ಒಂದು ವಿಶಿಷ್ಟ ಕರ್ತವ್ಯವಾಗಿದೆ.

ಒಬ್ಬ ವಿಜ್ಞಾನದ ಶಿಕ್ಷಕ/ಕಿ ತನ್ನ ತರಗತಿಯಲ್ಲಿ ಪ್ರಜಾಪ್ರಭುತ್ವವನ್ನು ಹೇಗೆ ಗ್ರಹಿಸುತ್ತಾರೆ? ತರಗತಿಯ ಬೋಧನೆ ಮತ್ತು ಕಲಿಕೆಯ ಧೋರಣೆ ವಿವರಿಸುವಲ್ಲಿ ಇದರ ಪಾತ್ರವೇನಾದರೂ ಇದೆಯೇ? ಡ್ಯೂಯಿಯವರ ಮಾತುಗಳಲ್ಲಿ, 'ನಾವು ವಸ್ತು ಮತ್ತು ಪದಗಳ ನಿಯಂತ್ರಣದಿಂದ ಬಿಡುಗಡೆಗೊಂಡು ಬುದ್ಧಿಮತ್ತೆಯ ನಿರ್ವಹಣೆಗೆ ಒಳಪಟ್ಟವೆಂದರೆ ನಾವು ಏನು ಮಾಡಬೇಕು, ಹೇಗೆ ಮಾಡಬೇಕು ಎನ್ನುವುದಷ್ಟೇ ಅಲ್ಲದೇ ಅತ್ಯಂತ ಸುಲಭವಾಗಿ ಮತ್ತು ಕಡಿಮೆ ಖರ್ಚಿನಲ್ಲಿ ಮಾಡುವುದು ಹೇಗೆ ಎಂದು ವಿಜ್ಞಾನ ನಮಗೆ ಏನನ್ನಾದರೂ ಹೇಳಬೇಕಾಗುತ್ತದೆ.'

'ನಾವು ವಿಜ್ಞಾನದಲ್ಲಿ ಏನು ಮಾಡುತ್ತೇವೆ' ಎನ್ನುವ ಡ್ಯೂಯಿ ಮಾತಿನ ಅರ್ಥ ಏನು? ತರಗತಿಯ ಹೊರಗೆ ನಾವು ಬದುಕುವ ಬದುಕು ಮತ್ತು ನಮ್ಮ ಬದುಕಿನ ಕುರಿತ ದೃಷ್ಟಿಕೋನಗಳನ್ನು ರೂಪಿಸುವಲ್ಲಿ ಅದರ ಪ್ರಭಾವಗಳನ್ನು ಕಡೆಗಣಿಸಲು ಸಾಧ್ಯವಿಲ್ಲ. ಓವೆನ್ಸ್, ಸಾಡ್ಲರ್ ಮತ್ತು ಝ್ಯೆಡ್ಲರ್ (2018) ತಮ್ಮ ಸಂಶೋಧನೆ-ಯೊಂದರಲ್ಲಿ ಸಮಾಜೋ-ವೈಜ್ಞಾನಿಕ ವಿಷಯಗಳು ಮುನ್ನೆಲೆಗೆ ಬರಬೇಕಾದ ಅಗತ್ಯದ ಬಗ್ಗೆ ಚರ್ಚಿಸುತ್ತಾರೆ.

ಒಂದು ವಿಜ್ಞಾನದ ತರಗತಿ ಎಂದರೆ – ವಿಶ್ವಾಸಾರ್ಹ ಮಾಹಿತಿಗಳನ್ನು ಹುಡುಕುವ ಅವಕಾಶಗಳನ್ನು ಗಳಿಸುವುದು, ವಿವಾದಾತ್ಮಕ ವಿಷಯಗಳಿಗೆ ಸಂಬಂಧಿಸಿ ಸೂಕ್ತ ನಿಲುವು ತಳೆಯುವುದು, ವೈಜ್ಞಾನಿಕ ಪುರಾವೆಗಳನ್ನು ಬಳಸಿ ಅಂತಹ ನಿಲುವುಗಳನ್ನು ಸಮರ್ಥಿಸುವುದು ಮತ್ತು ಇತರರು ಹೊಂದಿರುವ ವಿಭಿನ್ನ ನಿಲುವುಗಳನ್ನು ಗೌರವಯುತವಾಗಿ ಮೌಲ್ಯಮಾಪನ ಮಾಡುವುದು ಒಳಗೊಂಡಿರುತ್ತವೆ.

### ವೈಜ್ಞಾನಿಕ ಮನೋಭಾವಕ್ಕೆ ಉತ್ತೇಜನ

ಪುರಾವೆಗಳನ್ನು ಆಧರಿಸಿದ ವಿಜ್ಞಾನದ ಅಭ್ಯಾಸವು ವಿದ್ಯಾರ್ಥಿಗಳನ್ನು ಪ್ರಜಾಪ್ರಭುತ್ವವಾದಿ ನಾಗರಿಕತ್ವದ ಜವಾಬ್ದಾರಿಗಳಿಗೆ ಸಿದ್ಧಗೊಳಿಸಲು ನೆರವಾಗುತ್ತದೆ. ಅವು ಅವರ ವಿಷಯದ ತಿಳುವಳಿಕೆಯನ್ನು ಗಟ್ಟಿಗೊಳಿಸುತ್ತಾ, ವೈಜ್ಞಾನಿಕ ಅನ್ವೇಷಣೆಯ ಪ್ರಯೋಜನ ಮತ್ತು ಮಿತಿಗಳನ್ನು ನೋಡುವುದಕ್ಕೆ ಸಹಾಯ ಮಾಡುತ್ತದೆ. (ರೈಸ್ 2003). ಗಟ್ಟಿ ನೆಲೆಯ ಚರ್ಚೆಯ ಅಭ್ಯಾಸಕ್ಕೂ ಅವಕಾಶ ಮಾಡಿಕೊಡುತ್ತದೆ. ಪರ್ಯಾಲೋಚನಾ ತೀರ್ಮಾನದ (Reflective judgement)ದ ಗುಣವನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುತ್ತದೆ (Zeidler, 2014).

ಸಾಂಪ್ರದಾಯಿಕ ವಿಜ್ಞಾನ ಶಿಕ್ಷಣವು ಸ್ಥಾಪಿತ ಮತ್ತು ಸುರಕ್ಷಿತ ಜ್ಞಾನವನ್ನು ವಿತರಿಸುವ ಕಡೆಗೆ ಹೆಚ್ಚಾಗಿ ಗಮನ ಕೇಂದ್ರೀಕರಿಸುತ್ತದೆ ಮತ್ತು ವಿವಾದಾತ್ಮಕ ಅಥವಾ ನೈತಿಕ ವಿಷಯಗಳನ್ನು ಬದಿಗಿರಿಸುತ್ತದೆ. (ಹಾಡ್ಸನ್, 2003). ಹೀಗೆ ಮಾಡುತ್ತಾ ವಿವಾದಾತ್ಮಕ ಅಂಶಗಳನ್ನು ಪಠ್ಯಕ್ರಮದಿಂದ ನಿವಾರಿಸುವ ಮೂಲಕ ಮತ್ತು ತಮ್ಮ ನೈತಿಕ ದೃಷ್ಟಿಕೋನಗಳನ್ನು ತಮ್ಮಲ್ಲೇ ಇರಿಸಿಕೊಳ್ಳುವ ಮೂಲಕ ವಿದ್ಯಾರ್ಥಿಗಳು, ಪಾಲಕರು ಮತ್ತು ಇತರ ಭಾಗೀದಾರರ ಜೊತೆಗಿನ ಸಂಘರ್ಷವನ್ನು ತಪ್ಪಿಸುವುದಕ್ಕೆ ಅಧ್ಯಾಪಕರಿಗೆ ಸಾಧ್ಯವಾಗುತ್ತದೆ. ಹೀಗಿದ್ದರೂ ಪಾಠ ಮಾಡುವುದಕ್ಕೆ ವಿವಾದಾತ್ಮಕ ಎಂದು ಅಧ್ಯಾಪಕರು ಭಾವಿಸುವ ಈ ವಿಷಯಗಳು ವಿದ್ಯಾರ್ಥಿಗಳ ಜೀವನಕ್ಕೆ ಮತ್ತು ಪ್ರಜಾಪ್ರಭುತ್ವವಾದಿ ನಾಗರಿಕತ್ವವನ್ನು ಬೆಳೆಸುವುದಕ್ಕೆ ಅತ್ಯಂತ ಮಹತ್ವದವುಗಳಾಗಿವೆ (ಮ್ಯಾಕ್‌ಗಿನಿಸ್ ಮತ್ತು ಸಿಮ್ಮೊನ್ಸ್ 1999). ತರಗತಿಯ ಸಮುದಾಯದಲ್ಲಿ ಯೋಚಿಸಿ ಪ್ರಶ್ನಿಸುವ ಗುಣವನ್ನು ಮೂಡಿಸಲು ನೆರವಾಗುವ ವೈಜ್ಞಾನಿಕ ಪರಿಕಲ್ಪನೆಗಳ ಆಲೋಚನೆಗಳನ್ನು ವಿಮರ್ಶಿಸಲು ನೆರವಾಗುವ ಕಾರ್ಯತಂತ್ರಗಳ ಸೃಷ್ಟಿಗೆ ಓವೆನ್ಸ್, ಸಾಡ್ಲರ್ ಮತ್ತು ಝ್ಯೆಡ್ಲರ್ 2018) ಹೆಚ್ಚಿನ ಒತ್ತನ್ನು ಕೊಟ್ಟಿದ್ದಾರೆ.

ಇದು ಸಹಪಾಠಿಗಳಲ್ಲಿ ಕ್ಲಿಷ್ಟಕರ ಪ್ರಶ್ನೆಗಳನ್ನು ಕೇಳಲು ವಿದ್ಯಾರ್ಥಿಗಳಿಗೆ ಬಲತುಂಬುತ್ತದೆ. ವಿವಿಧ ಪ್ರಾಯೋಗಿಕ ಫಲಿತಗಳ ವ್ಯಾಖ್ಯಾನಗಳಿಗೆ ಸವಾಲೆಸೆಯುವ ತಾಕತ್ತು ನೀಡುತ್ತದೆ. ಪ್ರಶ್ನಿಸುವಿಕೆ ಮತ್ತು ವಿಮರ್ಶೆಗಳು ರಚನಾತ್ಮಕ ಚರ್ಚೆ ಮತ್ತು ಕಲಿಕೆಗೆ ನಮ್ಮನ್ನು ಒಚ್ಚುಗೊಳಿಸುತ್ತವೆ.

ಹೀಗಿದ್ದರೂ, ಸಮಾಜೋ ವೈಜ್ಞಾನಿಕ ವಿಷಯಗಳ ಶೋಧನೆಗೆ ಅವಕಾಶ ಕಲ್ಪಿಸುವ ಮುನ್ನ, ಕೆಲವು ಮೂಲ ಪ್ರಜಾಪ್ರಭುತ್ವವಾದಿ ಅಭ್ಯಾಸಗಳನ್ನು ತರಗತಿಯಲ್ಲಿ ಅಳವಡಿಸುವುದು ಹೇಗೆ ಎಂದು ಸೂಕ್ಷ್ಮದೃಷ್ಟಿಯಿಂದ ನೋಡುವುದರಿಂದ ವಿಜ್ಞಾನ ಶಿಕ್ಷಕನಿಗೆ ಸಹಾಯವಾಗುತ್ತದೆ. ಉದಾಹರಣೆಗೆ ಸುತ್ತಲಿನ ಪರಿಸರದಲ್ಲಿ ದೊರಕುವ ಸಾಮಾನ್ಯ ಸಂಪನ್ಮೂಲಗಳ ಬಳಕೆ. ಇದು ವಿಜ್ಞಾನದಲ್ಲಿ, ಮುಖ್ಯವಾಗಿ ಪ್ರಯೋಗಾಲಯದ ಸನ್ನಿವೇಶದಲ್ಲಿ ಇದು ಬಹಳ ಮುಖ್ಯ ಗುಣಲಕ್ಷಣ. ಯಾಕೆಂದರೆ ತರಗತಿಯ ದೈನಂದಿನ ಬಳಕೆಯಂತೆಯೇ ಪ್ರಯೋಗಾಲಯದ ಬಳಕೆಯೂ ಎಲ್ಲರಿಗೂ ಸಮಾನ ಎಂಬ ಅರಿವು ಇರಬೇಕಾಗುತ್ತದೆ. ಲಭ್ಯವಿರುವ ಆವರಣವನ್ನು ಗೌರವಿಸುತ್ತಾ ಮತ್ತು ಉಪಕರಣಗಳನ್ನು ಜವಾಬ್ದಾರಿಯಿಂದ ಬಳಸುತ್ತಾ ಈ ಅರಿವು ಮೂಡಬೇಕಾಗುತ್ತದೆ. ಈಗ ನಾವು ವಿಜ್ಞಾನ ತರಗತಿಯಲ್ಲಿರುವ ಕೆಲವು ಕಥನಗಳನ್ನು ನೋಡಬಹುದು.

### ಪ್ರಯೋಗಾಲಯದ ಕೆಲಸ ಮತ್ತು ಪ್ರಜಾಪ್ರಭುತ್ವ

8ನೇ ತರಗತಿಯ ವಿದ್ಯಾರ್ಥಿಗಳು ವಿಜ್ಞಾನ ಪ್ರಯೋಗಾಲಯಕ್ಕೆ ಬರುತ್ತಾರೆ. ಅಲ್ಲಿ ಎಲ್ಲರೂ ವ್ಯಕ್ತಿಗತವಾಗಿ ತಮ್ಮ ಪಾಡಿಗೆ ಮೊತ್ತ ಮೊದಲ ಬಾರಿಗೆ ವಿಜ್ಞಾನ ಪ್ರಯೋಗ ನಡೆಸುವುದರಿಂದ ಒಂದು

ಬಗೆಯ ಸಂಭ್ರಮ ಕಾಣಿಸಿಕೊಳ್ಳುತ್ತದೆ. ಅವರು ಇದುವರೆಗೆ ಅಧ್ಯಾಪಕರು ಮಾಡುತ್ತಿದ್ದ ಪ್ರಯೋಗಗಳನ್ನು ನೋಡುತ್ತಿದ್ದರಷ್ಟೇ. ಅಧ್ಯಾಪಕರು ಅನುಮತಿ ನೀಡಿದಾಗ ಮಾತ್ರ ಭಾಗವಹಿಸುತ್ತಿದ್ದರು. ಪ್ರಯೋಗಾಲಯ ಅವರಿಗೆ ಪರಿಚಿತ ಜಾಗವಾಗಿದ್ದರೂ ಅದು ಕೆಲಸದ ಸ್ಥಳ ಎನ್ನುವ ಜ್ಞಾನ ಇರಲಿಲ್ಲ. ತರಗತಿಗಿಂತ ಭಿನ್ನವಾಗಿದ್ದು, ಚಲನೆಯ ಸ್ವಾತಂತ್ರ್ಯ ಇಲ್ಲಿರುತ್ತದೆ, ಅಧ್ಯಾಪಕರ ಮತ್ತು ಸಹಪಾಠಿಗಳ ಜೊತೆಗೆ ಹೆಚ್ಚಿನ ಸಂಪರ್ಕ ಸಾಧ್ಯವಾಗುತ್ತದೆ. ಇದೆಲ್ಲದಕ್ಕಿಂತ ಹೆಚ್ಚಾಗಿ, ಇಲ್ಲಿ ವಿಜ್ಞಾನವನ್ನು ಕೈಯಲ್ಲಿ ಮಾಡ-ಬಹುದು ಎಂಬ ಮನೋಭಾವ ಇರುತ್ತದೆ. ಇಂತಹ ಅನುಭವಕ್ಕಾಗಿ 8ನೇ ತರಗತಿ ವಿದ್ಯಾರ್ಥಿಗಳು ಬಯಸುತ್ತಿದ್ದಾರೆ.

ಅಧ್ಯಾಪಕರು ಒಳಗೆ ಬರುತ್ತಾ ವಿದ್ಯಾರ್ಥಿಗಳ ಮಿಂಚು ಕಣ್ಣುಗಳಲ್ಲಿ ಮತ್ತು ಪ್ರಕಾಶಮಾನ ಮಂದಸ್ಮಿತಗಳಲ್ಲಿ ತುಂಬಿಕೊಂಡ ಸಂಭ್ರಮವನ್ನು ಗ್ರಹಿಸುತ್ತಾರೆ.

ಅಧ್ಯಾಪಕರು : ವಿಜ್ಞಾನದ ಪ್ರಯೋಗಾಲಯಕ್ಕೆ ನಿಮಗೆಲ್ಲ ಸ್ವಾಗತ! ನಿಮ್ಮ ಖುಷಿ ತುಂಬಿದ ಮುಖಗಳನ್ನು ನೋಡುವುದಕ್ಕೆ ಅದ್ಭುತ ಅನ್ನಿಸುತ್ತದೆ. ನಾವೆಲ್ಲ ಒಟ್ಟಿಗೆ ಈ ವರ್ಷ ಮುಂದೆ ಸಾಗೋಣ. ನಿಮ್ಮ ಸುತ್ತಮುತ್ತ ಕಾಣುವುದನ್ನು ನೀವು ಹೇಗೆ ವಿವರಿಸುತ್ತೀರಿ?

ವಿದ್ಯಾರ್ಥಿ 1: ಪ್ರಯೋಗಾಲಯದ ಮೇಜುಗಳು, ಕಪಾಟುಗಳು, ಬಾಟಲಿಗಳು ಮತ್ತು ಮಾದರಿಗಳು.

ವಿದ್ಯಾರ್ಥಿ 2 : ಪ್ರಯೋಗಕ್ಕಾಗಿ ವಿವಿಧ ವಸ್ತುಗಳನ್ನು ಅತ್ಯಂತ ಶ್ರಮವಹಿಸಿ ಜೋಡಿಸಲಾಗಿದೆ.

ವಿದ್ಯಾರ್ಥಿ 3 : ಸ್ವಚ್ಛವಾಗಿರುವ ಪ್ರಯೋಗಾಲಯದ ಮೇಜುಗಳು!

ವಿದ್ಯಾರ್ಥಿ 4 : ನಮ್ಮ ಪ್ರಯೋಗಕ್ಕಾಗಿ ಒಂದು ವ್ಯವಸ್ಥೆ ಮತ್ತು ಕಾರ್ಯವಿಧಾನಗಳು ಇವೆ.

ವಿದ್ಯಾರ್ಥಿ 1 : ಉಲ್ಲೇಖವಾಗಿ ಬಳಸುವುದಕ್ಕೆ ಅನೇಕ ಮಾಹಿತಿಪೂರ್ಣ ನಕಾಶೆಗಳಿವೆ!.

ಅಧ್ಯಾಪಕರು : ಅದ್ಭುತ! ಮುಂದಿನ ವಾರಗಳಲ್ಲಿ ನೀವು ಎಲ್ಲರೂ ಈ ಸ್ಥಳದ ಎಲ್ಲ ಬಗೆಯ ಅನುಭವಗಳನ್ನು ಪಡೆಯಲಿದ್ದೀರಿ. ನಾವು ಈಗ ಶುರು ಮಾಡೋಣ. ನಿನ್ನೆಯ ತರಗತಿಯಲ್ಲಿ ಚರ್ಚಿಸಿದ್ದಕ್ಕೆ ಸರಿಯಾಗಿ ಇಂದಿನ ಪ್ರಯೋಗದ ಕಾರ್ಯವಿಧಾನ ಟಿಪ್ಪಣಿಗಳನ್ನು ನೀವು ನೋಡುತ್ತೀರಿ. ನಾನು ನಿಮ್ಮ ಎಲ್ಲರ ಮೇಜಿನ ಹತ್ತಿರಕ್ಕೆ ಬರುತ್ತೇನೆ. ಆಗ ನೀವು ನಿಮ್ಮ ಸಂದೇಹಗಳಿಗೆ ಸ್ಪಷ್ಟೀಕರಣ ಪಡೆಯಬಹುದು.

ಅಧ್ಯಾಪಕರು ತರಗತಿಯಲ್ಲಿರುವ ವಿದ್ಯಾರ್ಥಿಗಳಿಗೆಲ್ಲ ಸ್ಪಷ್ಟೀಕರಣ ನೀಡುತ್ತಾ ಹೋಗುತ್ತಾರೆ. ಅಗತ್ಯವಿದ್ದಲ್ಲಿ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡುತ್ತಾರೆ. ಅವರನ್ನು ಸುತ್ತ ನಿಲ್ಲಿಸಿ ಪ್ರಯೋಗದ ಬಗ್ಗೆ ಚಿಕ್ಕ ಚರ್ಚೆ ನಡೆಸುತ್ತಾರೆ. ಮತ್ತು ಮನೆಗೆಲಸ ಪೂರ್ತಿಗೊಳಿಸುವಂತೆ ಮಾಡುತ್ತಾರೆ.

ಅಧ್ಯಾಪಕರು : ನೀವೆಲ್ಲಾ ಪ್ರಯೋಗದ ಮೂಲಕ ಚೆನ್ನಾಗಿ ಕೆಲಸ ಮಾಡಿದ್ದೀರಿ ಎಂದು ಭಾವಿಸುತ್ತೇನೆ. ನಿಮ್ಮ ಮನೆಗೆಲಸದ ಬಗೆಗಿನ ಪ್ರತಿಕ್ರಿಯೆಗೆ ಎದುರು ನೋಡುತ್ತಿದ್ದೇನೆ. ಒಂದು ವಿಷಯ ನಿಮ್ಮ ನಿಮ್ಮ ಮೇಜಿನ ಸುತ್ತ ನೋಡಿ. ಅಲ್ಲಿ ಏನೇನು ಕಾಣಿಸುತ್ತಿದೆ ಎಂದು ಹೇಳುತ್ತಾ ಹೋಗಿ.

ವಿದ್ಯಾರ್ಥಿಗಳು ಸುತ್ತ ನೋಡುತ್ತಾರೆ.

ಅಧ್ಯಾಪಕರು : ನಿಮಗೆ ಮೊದಲು ಕೊಟ್ಟಂತೆಯೇ ಈಗ ಇದೆಯೇ?

ವಿದ್ಯಾರ್ಥಿಗಳು 'ಇಲ್ಲ' ಎಂಬಂತೆ ತಲೆ ಅಲ್ಲಾಡಿಸಿದರು.

ಅಧ್ಯಾಪಕರು : ಇನ್ನೊಂದು ತಂಡದ ವಿದ್ಯಾರ್ಥಿಗಳು ಈಗ ಒಳ ಬರುವವರಿದ್ದಾರೆ. ಅವರಿಗೆ ನಾವು ಇದೇ ಕೊಳಕು ಮೇಜಿನಲ್ಲೇ ಪ್ರಯೋಗ ಮಾಡಿ ತೋರಿಸುವುದಾ?

ವಿದ್ಯಾರ್ಥಿಗಳು ಒಕ್ಕೊರಲಿನಿಂದ : ಇಲ್ಲ ಟೀಚರ್!

ವಿದ್ಯಾರ್ಥಿ 2: ಮೇಜು ಒರೆಸುವುದಕ್ಕೆ ನಮಗೆ ಏನಾದರೂ ಸಿಗಬಹುದಾ?

ಅಧ್ಯಾಪಕರು : ಖಂಡಿತ (ಕೊಳೆ ಒರೆಸಲು ಕೆಲ ಒಣಗಿದ ಬಟ್ಟೆಗಳನ್ನು (Duster) ಕೊಡುತ್ತಾರೆ)

ವಿದ್ಯಾರ್ಥಿಗಳು ಗುಂಪಿನಲ್ಲಿ ಸೇರಿಕೊಳ್ಳುತ್ತಾರೆ ಮತ್ತು ಮೇಜುಗಳನ್ನು ಒರೆಸಿ ಸ್ವಚ್ಛಗೊಳಿಸುತ್ತಾರೆ.

ಅಧ್ಯಾಪಕರು : ಇಲ್ಲಿಗೆ ಬರುವ ಪ್ರತಿಯೊಬ್ಬ ವಿದ್ಯಾರ್ಥಿಗೂ ಈ ವಸ್ತುಗಳೆಲ್ಲ ಸೇರಿವೆ ಎನ್ನುವಂತೆ ಈ ಸ್ಥಳವನ್ನು ಗೌರವಿಸಿದ್ದಕ್ಕಾಗಿ ನಿಮಗೆಲ್ಲರಿಗೂ ತುಂಬಾ ಧನ್ಯವಾದಗಳು.

ಅಧ್ಯಾಪಕರು ಇಲ್ಲಿ ಬಹಳ ಮುಖ್ಯವಾದ ತತ್ತ್ವವನ್ನು ಸ್ಥಾಪಿಸಿದ್ದಾರೆ. ಅದೆಂದರೆ ಹೊಣೆಗಾರಿಕೆಯಿಂದ ಕೂಡಿದ ಸ್ವಾತಂತ್ರ್ಯ, ಸಾಮಾನ್ಯ ಸ್ಥಳವನ್ನು ಗೌರವಿಸುವುದು ಮತ್ತು ತಾನು ಬಳಸಿದ ಬಳಿಕ ಅದನ್ನು ಸ್ವಚ್ಛವಾಗಿಡಬೇಕು ಎಂಬ ಬಹಳ ಮುಖ್ಯವಾದ ತತ್ತ್ವವನ್ನು ಇಲ್ಲಿ ಅಧ್ಯಾಪಕರು ಸ್ಥಾಪಿಸಿದ್ದಾರೆ. ಮಗುವಿನ ದೈನಂದಿನ ಬದುಕಿನಲ್ಲಿ ಇದರ ಮಹತ್ವ ಏನಾಗಿರಬಹುದು? ಸಾರ್ವಜನಿಕ ಜಾಗ ಬಳಸುವ ಮತ್ತು ಸ್ವಚ್ಛವಾಗಿಡುವ ಜವಾಬ್ದಾರಿ ವಿದ್ಯಾರ್ಥಿಗಳಲ್ಲಿ ಮೂಡಿಸಲು ಇದು ಸಹಕಾರಿ. ಇಂತಹ ಅವಕಾಶಗಳು ನಗರದ ಮಕ್ಕಳಿಗೆ ಹೆಚ್ಚು ಇರುತ್ತದೆ. ಆದರೆ ಗ್ರಾಮೀಣ ಮಕ್ಕಳಿಗೆ ಇಂತಹ ಅವಕಾಶಗಳು ಕಡಿಮೆ. ಆದರೂ ಅದು ಅವರಿಗೆ ಮಾತ್ರ ಸೀಮಿತವಲ್ಲ. ವಿದ್ಯಾರ್ಥಿಗಳಿಗೆ ಇಂತಹ ಅಭ್ಯಾಸಗಳನ್ನು ಪ್ರದರ್ಶಿಸುವುದಕ್ಕೆ ಶಾಲೆ, ಮಾರುಕಟ್ಟೆ, ಆರಾಧನಾಲಯ, ಸಮುದಾಯ ಕೇಂದ್ರಗಳೇ ಪ್ರದರ್ಶಿಸುವುದಕ್ಕೆ ಅವಕಾಶ ಮಾಡಿ ಕೊಡಬೇಕಾಗುತ್ತದೆ.

**ಗ್ರಹಣ ಹಿಡಿದ ದೃಷ್ಟಿ**

ಒಬ್ಬ ವಿದ್ಯಾರ್ಥಿಯು ಅವನ ತರಗತಿ ಅಧ್ಯಾಪಕರ (ವಿಜ್ಞಾನದ ಅಧ್ಯಾಪಕರಿಗೂ ಕೂಡಾ) ಹತ್ತಿರ ಒಂದು ವಿನಂತಿ ಪತ್ರ ಕೊಡುತ್ತಾನೆ. ಮರುದಿನ ಸೂರ್ಯಗ್ರಹಣ ಇರುವುದರಿಂದ ಹಿರಿಯರು ಆತನನ್ನು ಮನೆಯಲ್ಲೇ ಇರುವುದಕ್ಕೆ ಹೇಳಿದ ವಿಷಯವನ್ನು ತಿಳಿಸಿ ಶಾಲೆಗೆ ಗೈರುಹಾಜರಿಯಾಗಲು ಅನುಮತಿ ಕೋರಿರುವ ಪತ್ರ ಅದು. ಅಂತಹ ಮನವಿ ಅದೇ ಮೊದಲ ಬಾರಿ ಅಲ್ಲವಾದುದರಿಂದ ಶಿಕ್ಷಕರು ಆಶ್ಚರ್ಯಪಡುವುದಿಲ್ಲ. ಓರ್ವ ವಿಜ್ಞಾನದ ಅಧ್ಯಾಪಕರಾಗಿ ಗ್ರಹಣಗಳಂತಹ ನೈಸರ್ಗಿಕ ಘಟನಾವಳಿಗಳ ಬಗ್ಗೆ ವಿದ್ಯಾರ್ಥಿಗಳಿಗೆ ವೈಜ್ಞಾನಿಕ ದೃಷ್ಟಿಕೋನ ಒದಗಿಸುವುದು ಅಗತ್ಯವಾದರೂ, ಶಿಕ್ಷಕರು ಕೂಡಾ ಅಂಥ ಮನವಿಗಳ ಹಿಂದಿನ ಭಾವನೆಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಆಕೆಯ ಉದ್ದೇಶ ದೀರ್ಘ ಕಾಲದಿಂದ

ನಡೆಸಿಕೊಂಡು ಬಂದಿರುವ ಅಭ್ಯಾಸಗಳನ್ನು ವಿಮರ್ಶೆ ಮಾಡುವುದರ ಬದಲಾಗಿ ಅದಕ್ಕೊಂದು ವೈಜ್ಞಾನಿಕ ದೃಷ್ಟಿಕೋನ ನೀಡುವುದೂ ಮುಖ್ಯವಾಗುತ್ತದೆ.

ಅಧ್ಯಾಪಕರು : ವಿದ್ಯಾರ್ಥಿಗಳೇ, ನಾಳೆ ಸೂರ್ಯಗ್ರಹಣ ಅಂತ ನಿಮಗೆಲ್ಲ ತಿಳಿದಿದೆಯೇ? ಹಿಂದಿನ ತರಗತಿಯಲ್ಲಿ ಹೇಳಿದ ಸೂರ್ಯಗ್ರಹಣದ ಪರಿಕಲ್ಪನೆ ನೆನಪಿದೆಯಾ?

ವಿದ್ಯಾರ್ಥಿಗಳು ಒಕ್ಕೊರಲಿನಿಂದ : ಹೌದು!!

ಅಧ್ಯಾಪಕರು: ಹಾಗಾದರೆ, ನಾಳೆ ಸೂರ್ಯಗ್ರಹಣ, ಏನು ನಡೆಯಲಿಕ್ಕೆ ಇದೆ?

ವಿದ್ಯಾರ್ಥಿ 1: ಸೂರ್ಯನಿಗೆ ಗ್ರಹಣ ಹಿಡಿಯುತ್ತದೆ.

ವಿದ್ಯಾರ್ಥಿ 2: ಚಂದ್ರನಿಂದ. ಅಂದರೆ ಅದರರ್ಥ ಚಂದ್ರನು ಭೂಮಿ ಮತ್ತು ಸೂರ್ಯರ ಮಧ್ಯೆ ಬರುತ್ತಾನೆ.

ವಿದ್ಯಾರ್ಥಿ 3: ನಾವು ಮನೆಯ ಒಳಗೇ ಇರಬೇಕು. ನಾವು ಊಟ ಮಾಡುವ ಹಾಗಿಲ್ಲ. ನೀರು ಕುಡಿಯುವ ಹಾಗಿಲ್ಲ.

ವಿದ್ಯಾರ್ಥಿ 4: ನಾವು ಸೂರ್ಯನ ಕಡೆಗೆ ನೋಡಿದರೆ ಕುರುಡರಾಗಿ ಬಿಡುತ್ತೇವೆ.

ಅಧ್ಯಾಪಕರು: ಸರಿ. ಅಂದರೆ ಗ್ರಹಣ ಎಂದರೆ ಒಂದು ವಿದ್ಯಮಾನ. ಇಲ್ಲಿ ಚಂದ್ರನ ನೆರಳು ಸೂರ್ಯನ ಮೇಲೆ ಆವರಿಸುತ್ತದೆ. ಗ್ರಹಣದ ಸಮಯದಲ್ಲಿ ನಿಮ್ಮನ್ನು ಯಾಕೆ ಆಹಾರ ಸೇವಿಸಲು ಮತ್ತು ನೀರು ಕುಡಿಯಲು ಬಿಡುವುದಿಲ್ಲ ?

ವಿದ್ಯಾರ್ಥಿ : ಆಹಾರ ವಿಷವಾಗುತ್ತದೆ!

ಅಧ್ಯಾಪಕರು : ಹಾಗೋ? ಏನಾದರೂ ಸಾಕ್ಷ್ಯ ನಿಮ್ಮಲ್ಲಿ ಇದೆಯಾ?

ವಿದ್ಯಾರ್ಥಿ : ಸಾಕ್ಷ್ಯ?

ಅಧ್ಯಾಪಕರು: ಹೌದು. ವಿಜ್ಞಾನದ ವಿದ್ಯಾರ್ಥಿಗಳಾಗಿ ನೀವು ಏನೇ ಹೇಳುವುದಿದ್ದರೂ ಅದಕ್ಕೆ ಸಾಕ್ಷ್ಯ ಒದಗಿಸಿ ಸಮರ್ಥಿಸಬೇಕಾಗುತ್ತದೆ. ಗ್ರಹಣದ ಅವಧಿಯಲ್ಲಿ ಒಬ್ಬರು ಕುರುಡರಾಗುತ್ತಾರೆ ಅಂದರೆ ಅದಕ್ಕೆ ಆಧಾರ ಏನಿದೆ? ವಿಜ್ಞಾನ ಕಲಿಕೆಯಲ್ಲಿ ಅನುಮಾನಿತ ಸಿದ್ಧಾಂತವನ್ನು ಸಾಬೀತುಪಡಿಸುವುದಕ್ಕೆ ಸಾಕ್ಷ್ಯಗಳನ್ನು ಒದಗಿಸಬೇಕಾದದ್ದೂ ಮಹತ್ವದ ವಿಚಾರ. ನಾಳೆ ನಮ್ಮ ಕೆಲಸ ಎಂದರೆ ಸೂರ್ಯಗ್ರಹಣದ ಬಗೆಗೆ ನಮಗೆಷ್ಟು ಸಾಧ್ಯವೋ ಅಷ್ಟು ಹೆಚ್ಚಿನ ಮಾಹಿತಿ ಕಲೆ ಹಾಕುವುದೇ ಆಗಿದೆ. ನಂತರ ಅದನ್ನು ತರಗತಿಯ ಮುಂದಿಡಬೇಕು. ನಾನು ನಿಮ್ಮ ಜೊತೆ ಚರ್ಚೆಗಾಗಿ ಕಾಯುತ್ತಿದ್ದೇನೆ.

ತಾವುಗಳಿಸಿದ ನಂಬಿಕೆಯನ್ನು ಮೀರಿ ನೋಡುವುದಕ್ಕೆ ಮತ್ತು ಅವನ್ನು ಪ್ರಶ್ನಿಸುವುದಕ್ಕೆ ಒಂದು ವೇದಿಕೆಯನ್ನು ಇಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಒದಗಿಸಿದ್ದಾರೆ.

ಈ ಎರಡೂ ಕಥನಗಳಲ್ಲಿ ಅಧ್ಯಾಪಕರು ಬಹಳ ಸೌಮ್ಯವಾಗಿ ಮತ್ತು ಸಂವೇದನಾತ್ಮಕವಾಗಿ ಪ್ರಶ್ನೆಗಳನ್ನು ಎತ್ತಿದ್ದು, ವಿಷಯಗಳು ಮತ್ತು ಜವಾಬ್ದಾರಿಗಳ ಬಗ್ಗೆ ನಿರ್ದಿಷ್ಟ ಹಂತದವರೆಗಿನ ಜಾಗೃತಿ ಮೂಡಿಸಲು ಪ್ರಯತ್ನಿಸಿದ್ದಾರೆ. ಹಾಗೆ ಮಾಡುವುದರ ಮೂಲಕ ಅಷ್ಟೇನೂ ಗಟ್ಟಿ ವೈಜ್ಞಾನಿಕ ತಳಹದಿ ಇಲ್ಲದ ಅಭ್ಯಾಸಗಳನ್ನು ಚರ್ಚಿಸುವುದಕ್ಕೆ ಒಂದು ವಾತಾವರಣ ನಿರ್ಮಿಸಿದ ಹಾಗಾಗುತ್ತದೆ. ನಿರಂತರ ಸಂವಾದಗಳ ಅಗತ್ಯ ಮತ್ತು ವಿಜ್ಞಾನ ತರಗತಿಯಲ್ಲಿ ಅವುಗಳನ್ನು ಪ್ರತ್ಯೇಕ ಪ್ರಕರಣಗಳಲ್ಲ ಎನ್ನುವುದನ್ನು ಖಾತರಿಪಡಿಸುವ ಜರೂರತ್ತು ಇಂತಹ ಒಡನಾಟಗಳ ಮುಖ್ಯ ಭಾಗವಾಗಿದೆ. ಚಾಲ್ತಿಯಲ್ಲಿರುವ ಸಾಮಾಜಿಕ ನಂಬಿಕೆಗಳನ್ನು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ನಿರಂತರವಾಗಿ ಪ್ರಶ್ನಿಸಬೇಕಾಗಿದೆ. ಅಂತಹ ನಂಬಿಕೆಗಳ ತಳಹದಿಯನ್ನೇ ಶೋಧಿಸಿ, ಅವುಗಳಿಗೆ ಸಂಭವನೀಯ ವಿವರಣೆ ನೀಡುವ ಕೆಲಸವನ್ನು ಮಾಡಬೇಕಾಗಿದೆ.

ಒಟ್ಟಿನಲ್ಲಿ, ವಿಜ್ಞಾನ ತರಗತಿಯಲ್ಲಿ ಸಂವಾದವನ್ನು ಉತ್ತೇಜಿಸುವ, ಪ್ರಶ್ನೆಗಳಿಗೆ ಅವಕಾಶ ಕೊಡುವ, ಸಾಕ್ಷ್ಯ ಕೇಳುವುದಕ್ಕಾಗಿ ರಾಜಿಯಿಲ್ಲದ, ವೈಚಾರಿಕ ಚಿಂತನೆಯ ಮನೋಭಾವವನ್ನು ಬೆಳೆಸುವ ಅವಕಾಶವನ್ನು ಈ ತರಗತಿಯ ವಿದ್ಯಾರ್ಥಿಗಳಿಗೆ ಅಧ್ಯಾಪಕರು ಸೃಷ್ಟಿಸುವ ಆ ಮೂಲಕ ವಿದ್ಯಾರ್ಥಿಗಳನ್ನು ಪ್ರಜಾಪ್ರಭುತ್ವವಾದಿ ಪ್ರಶ್ನೆಗಳಿಗೆ ತೆರೆದುಕೊಳ್ಳುವಂತೆ ಮಾಡುತ್ತಾರೆ. ಈ ವಿದ್ಯಾರ್ಥಿಗಳು ಸಾಮಾಜಿಕ, ವೈಜ್ಞಾನಿಕ ಸಮಸ್ಯೆಗಳನ್ನು ವಸ್ತುನಿಷ್ಠ ಮತ್ತು ನಿಷ್ಪಕ್ಷಪಾತ ರೀತಿಯಲ್ಲಿ ನಿರ್ವಹಿಸುವುದನ್ನು ನಿರೀಕ್ಷೆ ಮಾಡಬಹುದಾಗಿದೆ.

**ಉಲ್ಲೇಖಗಳು**

Dewey, John (1941). Science and Democracy. *The Scientific Monthly*. American Association for the Advancement of Science

Hodson, D. (2003). Time for action: Science education for an alternative future. *International Journal of Science Education*. 25, 645-670

Reiss, M (2003). Science education for social justice. In C.Vincent (Ed). *Social justice education and identity* (pp. 153-164). London, England: Routledge Falmer

McGinnis, J.R & Simmons, P. (1999). Teachers' perspectives of teaching science-technology-society in local cultures. A sociocultural analysis. *Science Education*. 83, 189

Owens, D.C, Troy D. Sadler & Dana L. Zeidler (2018). Controversial issues in the science classroom. *Phi Delta Kappa International*. pp 45-49

---



**ಚಂದ್ರಿಕಾ ಮುರಳೀಧರ್** – ಇವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಕಂಟಿನ್ಯೂಯಿಂಗ್ ಎಜುಕೇಷನ್ ಮತ್ತು ಯೂನಿವರ್ಸಿಟಿ ರಿಸೋರ್ಸ್ ಸೆಂಟರ್‌ನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಅಧ್ಯಾಪನ ಮತ್ತು ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ತಮ್ಮದೇ ಕೊಡುಗೆ ನೀಡುತ್ತಿರುವ ಚಂದ್ರಿಕಾ ಮುರಳೀಧರ್ ಅವರು, ವಿಜ್ಞಾನ ಶಿಕ್ಷಣ, ಶಿಕ್ಷಕರ ಸಾಮರ್ಥ್ಯ ಅಭಿವೃದ್ಧಿ, ಪಠ್ಯಕ್ರಮ ಸಾಮಗ್ರಿ ಅಭಿವೃದ್ಧಿ, ಪಠ್ಯಪುಸ್ತಕರಚನೆ ಕ್ಷೇತ್ರಗಳಲ್ಲಿ ಅಷ್ಟೇ ಅಲ್ಲದೆ ವಿಶ್ವವಿದ್ಯಾಲಯದ ಪ್ರಕಟಣೆಗಳಲ್ಲಿ ಸಂಪಾದಕೀಯ ಸದಸ್ಯೆಯಾಗಿಯೂ ದುಡಿಯುತ್ತಿದ್ದಾರೆ. chandrika@azimpremjifoundation ಮೂಲಕ ಅವರನ್ನು ಸಂಪರ್ಕಿಸಬಹುದಾಗಿದೆ.

ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಪೌರತ್ವ ಶಿಕ್ಷಣದ ಮೂಲಕ ವಾಸ್ತವ ಬದುಕಿನ ಸವಾಲುಗಳ ನಿವಾರಣೆ

ನೇಹಾ ಯಾದವ್ ಮತ್ತು ಅಸ್ಮಿತಾ ತಿವಾರಿ

ಶಿಕ್ಷಣದ ಉದ್ದೇಶಗಳು (Aims of Education), ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ೨೦೦೫ (National Curriculum Framework, 2005) ರಂಥ ಶಿಕ್ಷಣ ಕ್ಷೇತ್ರದ ಮಾರ್ಗದರ್ಶಿ ದಸ್ತಾವೇಜುಗಳು ಮಾನವೀಯ ಮೌಲ್ಯಗಳ ಬಗ್ಗೆ ಅಲ್ಲದೆ ಸಾಂವಿಧಾನಿಕ ತತ್ವಗಳು, ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಜಾಗೃತಿ ಮೂಡಿಸುವ ಅಗತ್ಯತೆಯ ಬಗ್ಗೆ ನಿರಂತರವಾಗಿ ಒತ್ತಿ ಹೇಳಿವೆ. ಭಾರತೀಯ ಸಂದರ್ಭದಲ್ಲಿ ಪೌರರ ಹಕ್ಕು ಮತ್ತು ಕರ್ತವ್ಯಗಳ ಕುರಿತ ಜಾಗೃತಿಯನ್ನು ಅಂದರೆ ಪೌರತ್ವವನ್ನು ಬೆಳೆಸುವ ಜವಾಬ್ದಾರಿ ಶಾಲಾ ಶಿಕ್ಷಣದ್ದಾಗಿದೆ ಎಂಬುದಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ೨೦೦೫ (National Curriculum Framework 2005 -NCF 2005), ದೃಢವಾಗಿ ಹೇಳಿದೆ. ಅದೇ ರೀತಿಯಲ್ಲಿ, ಸಂವಿಧಾನದ ತತ್ವಗಳಿಗೆ ಬದ್ಧತೆಯನ್ನೂ ಬೆಳೆಸಬೇಕು ಎಂದು ಕೂಡ ಹೇಳಿದೆ.

ಇದನ್ನು ಸಾಧಿಸುವುದಕ್ಕೆ, ೨೦೦೫ರ ನಂತರ ಪಠ್ಯಕ್ರಮದಲ್ಲಿ ಹಲವು ಸುಧಾರಣೆಗಳನ್ನು ಮಾಡಲಾಗಿದೆ. ಆದರೆ ಇಂತಹ ಪ್ರಯತ್ನಗಳ ಹೊರತಾಗಿಯೂ, ವಿದ್ಯಾರ್ಥಿಗಳು ಮತ್ತು ಶಿಕ್ಷಕರೊಂದಿಗಿನ ನಮ್ಮ ಕೆಲಸದ ಅನುಭವ ಬೇರೆಯದನ್ನೇ ಹೇಳುತ್ತದೆ. ಪೌರನೀತಿ / ಸಾಮಾಜಿಕ ಮತ್ತು ರಾಜಕೀಯ ಜೀವನ ಪಠ್ಯವಸ್ತುವಿನ ಕುರಿತ ಅಭಿಪ್ರಾಯವು, ಇದು ಬಹುಪಾಲು ಸೈದ್ಧಾಂತಿಕವಾಗಿದೆ, 'ಪ್ರಸ್ತುತವಾಗಿಲ್ಲ' ಅಥವಾ 'ಅಭ್ಯಾಸಯೋಗ್ಯವಾಗಿಲ್ಲ' ಎನ್ನುವುದನ್ನು ಕೇಳಿಸಿಕೊಳ್ಳುತ್ತೇವೆ. ನಮ್ಮಂತಹ ದೇಶಕ್ಕೆ ಇದು ಒಳ್ಳೆಯ ಸೂಚನೆಯಲ್ಲ. ಅಂದರೆ, ಇದರಲ್ಲಿ ಅರ್ಥಮಾಡಿಕೊಳ್ಳಲು ಎರಡು ವಿಷಯಗಳಿವೆ. ಒಂದು, ನಮ್ಮ ಶಾಲೆಗಳಿಂದ ಪ್ರತಿವರ್ಷವೂ ಬಹಳ ದೊಡ್ಡ ಸಂಖ್ಯೆಯ ವಿದ್ಯಾರ್ಥಿಗಳು ಯಾವ ಬಗೆಯ ಪ್ರೇರಣೆಯೂ ಇಲ್ಲದೆ ಹೊರಬರುತ್ತಿದ್ದಾರೆ. ಅವರು ಮಾಹಿತಿ ಕೊರತೆಯನ್ನು ಮತ್ತು ಸಕ್ರಿಯ ನಾಗರಿಕರಾಗಿ ಕ್ರಿಯಾಶೀಲ ತೊಡಗಿಸಿಕೊಳ್ಳುವಿಕೆಗೆ ಬೇಕಾದ ವ್ಯಾವಹಾರಿಕ ಕೌಶಲಗಳಿಲ್ಲದವರು ಆಗಿರುತ್ತಾರೆ. ಎರಡು, ಕಳಪೆ ಆಡಳಿತದಿಂದ ಬಳಲುತ್ತಿರುವ ನಮ್ಮ ಹಳ್ಳಿ ಮತ್ತು ನಗರಗಳನ್ನು ಸರಕಾರಿ ಆಡಳಿತ ಯಂತ್ರದ ಜೊತೆ ಪೌರರ ಸಮರ್ಥ ಭಾಗವಹಿಸುವಿಕೆಯಿಂದ ಸರಿಪಡಿಸುವುದು ಸಾಧ್ಯವಿದೆ. ಆದರೆ ಈಗ ಆ ಲೋಪದ ನಿವಾರಣೆ ಮತ್ತಷ್ಟು ಮುಂದಕ್ಕೆ ಹೋಗುವಂತೆ ಆಗುತ್ತಿದೆ.

ಭಾರತದಲ್ಲಿ ತಿಳುವಳಿಕೆ, ಕ್ರಿಯಾಶೀಲತೆ ಮತ್ತು ಜವಾಬ್ದಾರಿ ಹೊಂದಿದ ನಾಗರಿಕರ ಸಂಖ್ಯೆಯನ್ನು ಹೆಚ್ಚಿಸುವ ಗುರಿಹೊಂದಿರುವ 'ವೀ ದ ಪೀಪಲ್ ಅಭಿಯಾನ್' ಎಂಬ ನಾಗರಿಕ ಸಾಮಾಜಿಕ ಸಂಘಟನೆಯು, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಸಾಮರ್ಥ್ಯಾ-ಭಿವೃದ್ಧಿಯ ಉದ್ದೇಶವಿರುವ 'ಪೌರತ್ವ ಶಿಕ್ಷಣ ಕಾರ್ಯಕ್ರಮ' (Citizenship Education Programme - CEP) ಎಂಬ ಪಠ್ಯಕ್ರಮವನ್ನು ವಿವೇಚನಾಯುಕ್ತವಾಗಿ ವಿನ್ಯಾಸಗೊಳಿಸುವ ಮೂಲಕ ಈ ಅಂತರವನ್ನು ನಿವಾರಿಸಲು ಶ್ರಮಿಸುತ್ತಿದೆ. ಜವಾಬ್ದಾರಿ ಹೊಂದಿದ ನಾಗರಿಕತ್ವವನ್ನು ಬೆಳೆಸುವುದಕ್ಕೆ ಗುಣಮಟ್ಟದ ಪೌರ ಶಿಕ್ಷಣ ಮೂಲಭೂತ ಅವಶ್ಯಕತೆಯಾಗಿದೆ. ಇದನ್ನು ಪ್ರಾಥಮಿಕ ಶಾಲಾ ಶಿಕ್ಷಣದ ಕಾಲದಿಂದಲೇ ಪ್ರಾರಂಭಿಸುವುದು ಅತ್ಯುತ್ತಮ ಎಂಬ ಅಭಿಪ್ರಾಯವಿದೆ. ಪೌರತ್ವ ಶಿಕ್ಷಣ ಕಾರ್ಯಕ್ರಮವು ಸಾಮಾಜಿಕ ಮತ್ತು ರಾಜಕೀಯ ಜೀವನವನ್ನು ಪೌರನೊಬ್ಬನ/ಳ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕಾದ ವಿಷಯವಾಗಿ ಗ್ರಹಿಸುತ್ತದೆ. ಅದು, ಪ್ರಜಾತಂತ್ರ ವ್ಯವಸ್ಥೆಯಿರುವ ದೇಶದ ಓರ್ವ ಪೌರನಾಗಿ ಸಾಮಾಜಿಕ ಮತ್ತು ರಾಜಕೀಯ ಜೀವನ ಶಿಕ್ಷಣವು ತನಗೆ ತನ್ನ ಜೀವನದಲ್ಲಿ ಹೇಗೆ ಪ್ರಸ್ತುತವಾಗುತ್ತದೆ ಎಂಬ ಪ್ರಶ್ನೆಗೆ ಉತ್ತರಿಸುವ ಪ್ರಯತ್ನವನ್ನು ಮಾಡುತ್ತದೆ. ಈ ರೀತಿಯಲ್ಲಿ ವಿದ್ಯಾರ್ಥಿಗಳು ತರಗತಿ ಕೊಠಡಿಯೊಳಗೆ ಹೊಸಹೊಸ ವಿಧಾನಗಳನ್ನು ಮತ್ತು ಅವುಗಳ ಅನುಷ್ಠಾನ ಕ್ರಮಗಳನ್ನು ಪೌರ ಕ್ರಿಯಾ ಯೋಜನೆ (Civic Action Projects) ಮತ್ತು ಅಭಿಯಾನಗಳ ಮೂಲಕ ಪರಿಚಯ ಮಾಡಿಕೊಳ್ಳುತ್ತಾರೆ. ಅವರ ಕಲಿಕೆಯ ಪ್ರಯಾಣವು ಅವರ ಮನೋಧೋರಣೆ, ಜ್ಞಾನ ಮತ್ತು ಕೌಶಲಗಳ ಚೌಕಟ್ಟನ್ನು ಗಟ್ಟಿಗೊಳಿಸುವ ಬಗೆಯಲ್ಲಿ ಇರುತ್ತದೆ.

## ನಮ್ಮ ಕಾರ್ಯವಿಧಾನ

ಈ ಕೆಳಗಿನ ಮೂರು ಮೂಲಭೂತ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವಂತೆ ನಮ್ಮ ಪಠ್ಯವಸ್ತುವನ್ನು ವಿನ್ಯಾಸಗೊಳಿಸಲಾಗಿದೆ

- ಪೌರರ ಮನೋಧೋರಣೆ / ದೃಷ್ಟಿಕೋನಗಳಲ್ಲಿ ಏನು ಬದಲಾವಣೆಗಳಾಗಬೇಕು?
- ನಾಗರಿಕ ಸಮಾಜದ ಶಿಕ್ಷಣಕ್ಕೆ ಯಾವ ಮಾಹಿತಿ ಮತ್ತು ಜ್ಞಾನಗಳ ಅವಶ್ಯಕತೆಯಿದೆ?
- ತಳಮಟ್ಟದ ಕ್ರಿಯೆಗೆ ಯಾವ ಕೌಶಲಗಳು ಮತ್ತು ಪರಿಕರಗಳ ಅವಶ್ಯಕತೆಯಿದೆ?

**ವಿಷಯವಸ್ತುವನ್ನು ಈ ಕೆಳಗಿನ ಚೌಕಟ್ಟಿನ ಸುತ್ತ ಗುರುತಿಸಲಾಗಿದೆ:**

| ಮನೋಧೋರಣೆ | ಜ್ಞಾನ | ಕೌಶಲಗಳು |
|---|---|---|
| ಒಂದು ಪರಿಕಲ್ಪನೆಯಿದ್ದರೆ ಅದು 'ಯಾಕೆ' ಇದೆ? ಉದಾಹರಣೆಗೆ ನಮಗೆ ಸ್ವಾತಂತ್ರ್ಯ ಯಾಕೆ ಬೇಕು, ಯಾಕೆ ಸಮಾನತೆ ಮಹತ್ವದ್ದಾಗುತ್ತದೆ, ಇತ್ಯಾದಿ. | ಒಂದು ಪರಿಕಲ್ಪನೆಯಿದ್ದರೆ ಅದು 'ಏನು'? ಉದಾಹರಣೆಗೆ ಮೂಲಭೂತ ಹಕ್ಕುಗಳು ಯಾವುವು, ಕಾನೂನು ಅಂದರೆ ಏನು, ರಾಜ್ಯ ವ್ಯವಸ್ಥೆಯ ಸಂರಚನೆ ಏನು, ಇತ್ಯಾದಿ. | ಕ್ರಿಯೆಯನ್ನು ಕೈಗೊಳ್ಳುವುದು 'ಹೇಗೆ'? ಉದಾಹರಣೆಗೆ, ಯಾವುದೇ ಕ್ರಿಯೆಗೆ ಬೇಕಾಗುವ ಕೌಶಲಗಳು ಅಥವಾ ಪರಿಕರಗಳು. |

ಒಬ್ಬ ಪೌರನು ಸಂವಿಧಾನದ ವಿವಿಧ ಅಂಶಗಳೊಂದಿಗೆ ಅವು ಏನು ಮತ್ತು ಯಾಕೆ ಎಂಬ ದೃಷ್ಟಿಕೋನದಿಂದ ಅವುಗಳನ್ನು ಅರ್ಥಮಾಡಿಕೊಳ್ಳುತ್ತ ತೊಡಗಬೇಕಾಗುತ್ತದೆ. ಅದರ ಜೊತೆಗೆ ಪೌರ ಸಮಾಜದ ಕ್ರಿಯೆಗೆ ವ್ಯಾವಹಾರಿಕವಾಗಿ ಅನ್ವಯಿಸಿಕೊಳ್ಳುವ ಪರಿಕರಗಳು ಕೂಡ ಸೇರಿಕೊಳ್ಳುತ್ತವೆ. ನಾವು ಪೌರತ್ವ ಶಿಕ್ಷಣ ಕಾರ್ಯಕ್ರಮವನ್ನು ಶಾಲಾ ಪಠ್ಯಕ್ರಮದ ಜೊತೆ ಸಮನ್ವಯಗೊಳಿಸುವುದಕ್ಕೆ ಪ್ರಯತ್ನಿಸುತ್ತೇವೆ. ಜೊತೆಗೆ, ಸಮಾಜ ವಿಜ್ಞಾನ ಶಿಕ್ಷಕರಿಗಾಗಿ ತರಬೇತುದಾರರ ತರಬೇತಿಯನ್ನೂ (Training of Trainer -TOT) ವಿನ್ಯಾಸಗೊಳಿಸಲಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಪಠ್ಯಕ್ರಮದ ವಿವಿಧ ಅಂಶಗಳನ್ನು ಗುರುತಿಸಿ–ಕೊಳ್ಳುವುದು ಅತ್ಯಗತ್ಯವಾದ ಒಂದು ಕ್ರಮವಾಗಿದೆ. ಅದರ ಮೂಲಕ ನಾವು ಪೌರತ್ವ ಶಿಕ್ಷಣ ಕಾರ್ಯಕ್ರಮ ಮತ್ತು ಸಾಮಾಜಿಕ ಮತ್ತು ರಾಜಕೀಯ ಜೀವನ ಪಠ್ಯಕ್ರಮಗಳ ಮಧ್ಯೆ ಬಲವಾದ ಸಂಬಂಧವನ್ನು ಸೃಷ್ಟಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

'ವಿದ್ಯಾರ್ಥಿಗಳಲ್ಲಿ ಪೌರ ನೀತಿ ವಿಷಯದಲ್ಲಿ ಆಸಕ್ತಿಯನ್ನು ಮೂಡಿಸುವುದಕ್ಕೆ ಈ ಚಟುವಟಿಕೆಗಳು ಸಹಾಯಮಾಡಿದವು. ವಿದ್ಯಾರ್ಥಿಗಳಿಗೆ ತಮ್ಮ ಪಠ್ಯವಿಷಯದ ಮೌಲಿಕತೆಯನ್ನು ಮತ್ತು ಪ್ರಸ್ತುತತೆಯನ್ನು ಕಾಣುವುದಕ್ಕೂ ಅವು ನೆರವಾದವು.

– ಮಾರ್ಗದರ್ಶಿ ಶಿಕ್ಷಕ, ಶಿಕ್ಷಣ ನಿರ್ದೇಶನಾಲಯ, ನವದೆಹಲಿ

'ಈ ಎಲ್ಲಾ ವಸ್ತು ವಿಷಯ ಮತ್ತು ವಿಧಾನಗಳು ಕೊನೆಯದಾಗಿ ತರಗತಿಯೊಳಗೆ ಎಷ್ಟು ಕಾರ್ಯರೂಪಕ್ಕೆ ಬಂದೀತು ಎಂಬುದು ನನಗೆ ತಿಳಿಯುತ್ತಿಲ್ಲ. ಆದರೆ ಎಲ್ಲರ ಪರವಾಗಿ ನಾನು ಒಂದು ಹೇಳಬಲ್ಲೆ. ನಾವು ಯಾರೂ 6 ತಿಂಗಳ ಹಿಂದೆ ಇದ್ದ ಶಿಕ್ಷಕರಾಗಿ ಈಗ ಉಳಿದಿಲ್ಲ.

– ಖಾಸಗಿ ಶಾಲೆ ಶಿಕ್ಷಕಿ, ಪುಣೆ, ಮಹಾರಾಷ್ಟ್ರ

**ಪೌರ ಕ್ರಿಯಾ ಯೋಜನೆಗಳು**

ಕ್ರಿಯೆಯೇ ಪ್ರಧಾನವಾದ ಈ ವಿಧಾನವನ್ನು ದೆಹಲಿ– ರಾಷ್ಟ್ರೀಯ ರಾಜಧಾನಿ ಪ್ರದೇಶ ಮತ್ತು ಮಹಾರಾಷ್ಟ್ರದ ಹಲವು ಶಾಲೆಗಳಲ್ಲಿ ಕಾರ್ಯರೂಪಕ್ಕೆ ತರಲಾಗಿದ್ದು, ವಿದ್ಯಾರ್ಥಿಗಳು ಮತ್ತು ಶಿಕ್ಷಕರನ್ನು ತೊಡಗಿಸಿ ಸಬಲಗೊಳಿಸುವುದು ಇದರ ಉದ್ದೇಶವಾಗಿದೆ. ವಿದ್ಯಾರ್ಥಿಗಳು ತಮ್ಮ ಪರಿಸರಕ್ಕೆ ಸಂಬಂಧಿಸಿದ ಒಂದು ಸಾರ್ವಜನಿಕ ಸಮಸ್ಯೆಯನ್ನು ಆರಿಸಿ, ಅದರ ಬಗ್ಗೆ ಮಾಹಿತಿ ಪಡೆದುಕೊಂಡು, ಸಾರ್ವಜನಿಕ ಕ್ರಿಯೆಯನ್ನು ಕೈಗೆತ್ತಿಕೊಳ್ಳಲು ಬೇಕಾದ ಅಗತ್ಯ ಜ್ಞಾನ ಮತ್ತು ಕೌಶಲಗಳನ್ನು ಗಳಿಸಿ, ನಂತರ ಸಮಸ್ಯೆಯ ಪರಿಹಾರಕ್ಕೆ ಅಧಿಕಾರಿಗಳ ಜೊತೆ ಆಪ್ತವಾಗಿ ಹೇಗೆ ಕೆಲಸ ಮಾಡಬಹುದು ಎಂದೂ ಮುಂದಾಲೋಚಿಸುತ್ತಾರೆ. ಈ ಕಾರ್ಯ ಯೋಜನೆ ವಿದ್ಯಾರ್ಥಿಗಳಿಗೆ ನಿಜ ಜೀವನದ ಸಮಸ್ಯೆಗಳನ್ನು ತಾವು ಕಲಿತ ಸಾಮರ್ಥ್ಯಗಳನ್ನು ಅನ್ವಯಿಸಿಕೊಂಡು ಪರಿಹರಿಸಿಕೊಳ್ಳುವ ಅವಕಾಶಗಳನ್ನು ಸೃಷ್ಟಿಸುತ್ತದೆ. ಆ ಮೂಲಕ ಜವಾಬ್ದಾರಿಯುತ ಮತ್ತು ಕ್ರಿಯಾಶೀಲ ಪೌರತ್ವದ ಅಂಶಗಳನ್ನು ಸ್ವತಃ ಮೈಗೂಡಿಸಿಕೊಳ್ಳುವ ಅನುಭವಗಳನ್ನು ಪಡೆಯುತ್ತಾರೆ.

ಪೌರ ಕ್ರಿಯಾ ಯೋಜನೆಯು ವಿದ್ಯಾರ್ಥಿಗಳ ಮೇಲೆ ಬೀರಿದ ಪರಿಣಾಮಗಳನ್ನು ಮೌಲ್ಯಮಾಪನ ಮಾಡಲು ನಾವು ಒಂದು ಅಧ್ಯಯನವನ್ನು ನಡೆಸಿದೆವು. ಇದನ್ನು ಮಾಡುವುದಕ್ಕೆ, ವಿದ್ಯಾರ್ಥಿಗಳ ಸಾಮರ್ಥ್ಯವನ್ನು ಅಳೆಯುವುದಕ್ಕಾಗಿ ನಾವು ವಿದ್ಯಾರ್ಥಿಗಳ ಎರಡು ಗುಂಪುಗಳನ್ನು ರಚಿಸಿದೆವು – ಒಂದು ನಿಯಂತ್ರಿತ ಗುಂಪು ಮತ್ತು ಇನ್ನೊಂದು ಪ್ರಾಯೋಗಿಕ ಗುಂಪು. ತಮ್ಮ ಯೋಜನೆಯನ್ನು ಬರವಣಿಗೆಯಲ್ಲಿ ನಿರೂಪಿಸುವುದಕ್ಕಾಗಿ ಈ ಎರಡು ಗುಂಪುಗಳು ತಮ್ಮ ಪೌರ ಜ್ಞಾನ, ಕೌಶಲಗಳು ಮತ್ತು ಮನೋಧೋರಣೆಯ ಹೇಗೆ ಬಳಸಿದವು ಎಂಬುದರ ಮೌಲ್ಯ–ಮಾಪನ ಮಾಡುವುದು ಮತ್ತು ಈ ಗುಂಪುಗಳು ತಯಾರಿಸಿದ ಯೋಜನೆಯಲ್ಲಿ ಗುಣಾತ್ಮಕವಾದ ವ್ಯತ್ಯಾಸಗಳಿದ್ದರೆ ಅವನ್ನು ದಾಖಲಿಸುವುದು ಈ ಅಧ್ಯಯನದ ಉದ್ದೇಶವಾಗಿತ್ತು.

ಈ ಅಧ್ಯಯನದ ಫಲಿತಗಳು ಹೊರಗೆಡಹಿದ ಒಳನೋಟವೆಂದರೆ: ತರಬೇತಿ ಪಡೆದ ಪ್ರಾಯೋಗಿಕ ವಿದ್ಯಾರ್ಥಿಗಳ ಪೌರ ಜ್ಞಾನ, ಕೌಶಲಗಳು ಮತ್ತು ಮನೋಧೋರಣೆಯು ನಿಯಂತ್ರಿತ ಗುಂಪಿನ ವಿದ್ಯಾರ್ಥಿಗಳಿಗೆ ಹೋಲಿಸಿದರೆ ಗಮನಾರ್ಹವಾಗಿ ಹೆಚ್ಚಿನ ಮಟ್ಟದಲ್ಲಿತ್ತು. ಪ್ರಾಯೋಗಿಕ ಗುಂಪಿನ ವಿದ್ಯಾರ್ಥಿಗಳು ರೂಪಿಸಿದ ಕ್ರಿಯಾಯೋಜನೆಯಲ್ಲಿ ಸಮಗ್ರ ಸಂಶೋಧನೆ ಮತ್ತು ವ್ಯವಸ್ಥಿತ ಅನುಷ್ಠಾನದ ಅಂಶಗಳು ಎದ್ದುಕಾಣುದ್ದವು. ಅದರಲ್ಲಿ ಸರಕಾರಿ ಅಧಿಕಾರಿಗಳ ಜೊತೆ ಕೆಲಸ ಮಾಡುವಾಗ ಲಿಖಿತ ಮೂಲಕ ಸಂವಹನ ಮಾಡುವುದು ಮೊದಲಾದ ಹಲವು ಸರಳ ತಂತ್ರಗಾರಿಕೆಗಳಿದ್ದವು. ಇದಕ್ಕೆ ವ್ಯತಿರಿಕ್ತವಾಗಿ, ನಿಯಂತ್ರಿತ ಗುಂಪಿನ ವಿದ್ಯಾರ್ಥಿಗಳ ಕ್ರಿಯಾ–ಯೋಜನೆಯನ್ನು ಗಮನಿಸಿದಾಗ, ಅವರಲ್ಲಿ ಕ್ರಿಯೆಗೆ ಇಳಿಯುವ ಮನಸ್ಸು ಮತ್ತು ಆ ಸಮಸ್ಯೆಯನ್ನು ಬಗೆಹರಿಸುವ ಕುರಿತು ಸಮರ್ಪಕ ದೃಷ್ಟಿಕೋನ ಕಂಡುಬಂದರೂ, ಅವರ ಪೌರ ಕ್ರಿಯೆಯನ್ನು ಸಮರ್ಥಿಸುವುದಕ್ಕೆ ಬೇಕಾದ ಜ್ಞಾನ ಮತ್ತು ಕೌಶಲಗಳ ಕೊರತೆಯಿಂದ ಕಷ್ಟಪಡುವುದು ಕಂಡುಬಂದಿತು.

ಪ್ರಾಯೋಗಿಕ ಗುಂಪಿನ ವಿದ್ಯಾರ್ಥಿಗಳಿಗೆ ತಮ್ಮ ತರಬೇತಿ ಯೋಜನೆಯೊಳಗೆ ಕೈಗೊಂಡಂತಹ ಚಟುವಟಿಕೆಗಳನ್ನು ಆಧರಿಸಿ ಪೌರ ಕ್ರಿಯಾ ಯೋಜನೆಯನ್ನು ರೂಪಿಸುವುದಕ್ಕೆ ಸಾಧ್ಯವಾಗಿತ್ತು. ಅಲ್ಲದೆ ಅವರು ಮೂಲಭೂತ ಹಕ್ಕುಗಳು ಮತ್ತು ಸಾಂವಿಧಾನಿಕ ಬದ್ಧತೆಗಳಂತಹ ಪಠ್ಯವಿಷಯದ ಪರಿಕಲ್ಪನೆಗಳನ್ನು ತಮ್ಮ ಯೋಜನೆಯ ಅನುಮಾನಿತ ಸಿದ್ಧಾಂತದ ವಿಷಯಗಳಿಗೆ ಜೋಡಿಸಲು ಸಮರ್ಥರಾಗಿದ್ದರು.

ತಮ್ಮ ಪೌರ ಕ್ರಿಯಾ ಯೋಜನೆಯ ಅನುಷ್ಠಾನದಿಂದ ಪ್ರಾಯೋಗಿಕ ಗುಂಪಿನ ವಿದ್ಯಾರ್ಥಿಗಳು ತಮ್ಮ ಪೌರ ಸಾಮರ್ಥ್ಯಗಳಲ್ಲಿ ಗಮನಾರ್ಹ ವೃದ್ಧಿ ಗಳಿಸಿಕೊಂಡರು ಎಂಬುದು ಸ್ಪಷ್ಟವಾಗಿದೆ. ಇನ್ನೊಂದೆಡೆ ನಿಯಂತ್ರಿತ ಗುಂಪಿನ ವಿದ್ಯಾರ್ಥಿಗಳಿಗೆ ಪೌರ ಕ್ರಿಯೆಯ ಮಹತ್ವ ಮತ್ತು ಅದಕ್ಕೆ ಮುಂದಾಗುವ ಪ್ರಬಲ ಇಚ್ಛೆ ಇದ್ದರೂ, ಅದನ್ನು ಪರಿಣಾಮಕಾರಿಯಾಗಿ ಕ್ರಿಯೆಗೆ ಇಳಿಸುವುದಕ್ಕೆ ಬೇಕಾದ ಜ್ಞಾನ ಮತ್ತು ಕೌಶಲಗಳ ಕೊರತೆ ಇತ್ತು. 'ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದಕ್ಕೆ, ಮೊದಲಿಗೆ ನಾವು, ಸಂವಿಧಾನದಲ್ಲಿ ಇದಕ್ಕೆ ಸಂಬಂಧಿಸಿ ಒದಗಿಸಲಾದ ಹಕ್ಕುಗಳು ಮತ್ತು ಅವುಗಳ ಜಾರಿಗೆ ಮಾಡಿರುವ ನಿಯಮಗಳೇನು ಎಂಬುದನ್ನು ನೋಡಬೇಕಾಗಿದೆ'.

'ನಾವು ನಗರಸಭೆ ಕಚೇರಿಗೆ ತೆರಳಿ ಒಂದು ದೂರನ್ನು ನೀಡುತ್ತೇವೆ. ನಂತರ ಅವರು ಅದನ್ನು ಕ್ರಮಬದ್ಧವಾಗಿ ದಾಖಲಿಸಿಕೊಂಡರೇ ಎಂದು ಗಮನಿಸುತ್ತೇವೆ. ಅವರು ನಮ್ಮ ದೂರನ್ನು ಸ್ವೀಕರಿಸದಿದ್ದರೆ, ಆಗ ನಾವು, ಶಾಲೆಯ ಎಲ್ಲಾ ವಿದ್ಯಾರ್ಥಿಗಳೂ ಸೇರಿ, ದೇಣಿಗೆ ಸಂಗ್ರಹಿಸಿ, ಒಳಚರಂಡಿಯ ಕೆಲಸವನ್ನು ನಾವೇ ಮಾಡಿ ಮುಗಿಸುತ್ತೇವೆ.'

– ಅಧ್ಯಯನದಲ್ಲಿ ಭಾಗಿಗಳಾದ ವಿದ್ಯಾರ್ಥಿಗಳ ಪ್ರತಿಕ್ರಿಯೆ

**ಅನುಕೂಲಗಳು ಮತ್ತು ಫಲಿತಗಳು**

ಒಂದು ಶಾಲಾ ವ್ಯವಸ್ಥೆಯೊಳಗೆ ಒಂದು ಸುಯೋಜಿತ ಪೌರ ಕ್ರಿಯಾ ಯೋಜನೆಯನ್ನು ವಿನ್ಯಾಸಗೊಳಿಸುವುದಕ್ಕೆ ಸಾಧ್ಯವಿದೆ ಎಂಬುದನ್ನು ನಮ್ಮ ಅನುಭವಗಳು ಮತ್ತು ಪರಿಣಾಮದ ಮೌಲ್ಯಮಾಪನವು ಎತ್ತಿ ತೋರಿಸುತ್ತದೆ. ಸಾಮಾಜಿಕ ಮತ್ತು ರಾಜಕೀಯ ಜೀವನವನ್ನು ಬೋಧಿಸುವ ಶಿಕ್ಷಕರಿಗೆ ಪೌರ ಕ್ರಿಯಾ ಯೋಜನೆ ಎಂಬುದು ಪ್ರತ್ಯಕ್ಷ ಅನುಭವಗಳನ್ನು ಒದಗಿಸುವುದಕ್ಕೆ ಒಂದು ದೊಡ್ಡ ಪರಿಕರವಾಗಿದೆ. ಅದು ಕಲಿಕೆಯು ಹೆಚ್ಚು ಪ್ರಾಯೋಗಿಕವಾಗುವಂತೆ ಮತ್ತು ಕೌಶಲಾಧಾರಿತವಾಗುವಂತೆ ಮಾಡುತ್ತದೆ.

**ಮಜಲ್‌ಗಾಂವ್‌ನಲ್ಲಿ ವಿದ್ಯಾರ್ಥಿಗಳು ದೊರಕಿಸಿದ ಬೀದಿ-ದೀಪಗಳು**

ಮಹಾರಾಷ್ಟ್ರದ ಬೀಡ್ ಜಿಲ್ಲೆಯ ಮಜಲ್‌ಗಾಂವ್‌ನ ಮಹಾತ್ಮಾ ಫುಲೆ ವಿದ್ಯಾಲಯದ ವಿದ್ಯಾರ್ಥಿಗಳು ತಮ್ಮ ಪೌರ ಕ್ರಿಯಾ ಯೋಜನೆಯೊಂದಿಗೆ ತೊಡಗಿದ ಒಂದು ಸಂದರ್ಭದಲ್ಲಿ ತಮ್ಮ ಶಾಲೆಯ ಸುತ್ತಲಿನ ಬೀದಿದೀಪಗಳು ಹಾಳುಬಿದ್ದಿದ್ದ ವಿಷಯವನ್ನು ಆರಿಸಿ ಕಾರ್ಯನಿರ್ವಹಿಸಿದರು. ಅವರು ಸಮಸ್ಯೆಯನ್ನು ಸರಿಯಾಗಿ ಅಧ್ಯಯನ ಮಾಡಿ, ಸಮರ್ಪಕವಾದ ಅಂಕಿಅಂಶಗಳು ಮತ್ತು ಆ ಸ್ಥಳದಲ್ಲಿ ಜಾರಿ ಮಾಡಬೇಕಿದ್ದ ಕಾರ್ಯಯೋಜನೆಯೊಂದಿಗೆ ತಮ್ಮ ಅಹವಾಲನ್ನು ಮಜಲ್‌ಗಾಂವ್‌ನ ಪುರಸಭೆಗೆ ಸಲ್ಲಿಸಿದ್ದರು. ಅದರ ನಿರಂತರ ಅನುಪಾಲನೆ ಮತ್ತು ಅಧಿಕಾರಿಗ–ಳೊಂದಿಗೆ ವಿದ್ಯಾರ್ಥಿಗಳ ಸಭೆಯ ನಂತರ ಬೀದಿದೀಪಗಳ ಸ್ಥಾಪನೆ ಆಗಿಹೋಯಿತು.

**ವಿದ್ಯಾರ್ಥಿಗಳು ಶಿಕ್ಷಣ ಹಕ್ಕು ಕಾಯ್ದೆಯನ್ನು ಬಳಸಿ ತಮ್ಮ ಶಾಲೆಗೆ ಆವರಣ ಗೋಡೆಯನ್ನು ಪಡೆದರು**

ಮಹಾರಾಷ್ಟ್ರದ ಸತಾರಾ ಜಿಲ್ಲೆಯ ಮಹಾತ್ಮಾ ಫುಲೆ ಮಾಧ್ಯಮಿಕ ಆಶ್ರಮ ಶಾಲೆಯ ವಿದ್ಯಾರ್ಥಿಗಳು ತಮ್ಮ ಶಾಲೆಯ ಸುತ್ತ ಆವರಣ ಗೋಡೆಯನ್ನು ನಿರ್ಮಿಸುವಂತೆ ಕಾಟ್‌ಗುಣ್ ಗ್ರಾಮ ಪಂಚಾಯ್ತಿಗೆ ಅರ್ಜಿ ಸಲ್ಲಿಸಿದರು. ಶಾಲೆಯ ಆವರಣವು ಪಂಚಾಯ್ತಿಗೆ ಸೇರಿದ್ದು, ಅದನ್ನು ಶಾಲೆಯು ಲೀಸ್ ಕರಾರಿನ ಮೇಲೆ ಬಳಕೆ ಮಾಡುತ್ತಿತ್ತು. ವಿದ್ಯಾರ್ಥಿಗಳು ತಮ್ಮ ಅರ್ಜಿಯ ಜೊತೆಗೆ, ಪ್ರತಿ ಶಾಲೆಯ ಸುತ್ತಲೂ ಆವರಣ ಗೋಡೆಯಿರುವುದು ಕಡ್ಡಾಯ ಎಂಬುದನ್ನು ತಿಳಿಸುವ ಶಿಕ್ಷಣ ಹಕ್ಕು ಕಾಯಿದೆ ೨೦೦೯ರ (Right to Education Act, 2009) ಪ್ರತಿಯನ್ನು ಲಗತ್ತಿಸಿದ್ದರು.

ಅರ್ಜಿಯು ಜನವರಿ ತಿಂಗಳಿನಲ್ಲಿ ಸಲ್ಲಿಕೆಯಾಗಿತ್ತು. ಮುಂದೆ ವಿದ್ಯಾರ್ಥಿಗಳು ಒಂದೆರಡು ತಿಂಗಳು ಆ ಅರ್ಜಿಯ ಪ್ರಗತಿಯ ಬಗ್ಗೆ ನಿರಂತರ ಗಮನಹರಿಸಿದರು. ಗ್ರಾಮ ಪಂಚಾಯಿತಿಯು ತನ್ನ ಆಯವ್ಯಯ ಪಟ್ಟಿಯಿಂದ ರೂಪಾಯಿ ೧,೨೧,೦೦೦/ವನ್ನು ಖರ್ಚುಮಾಡಿ, ಬಹಳ ದಿನಗಳ ಬೇಡಿಕೆಯಾಗಿದ್ದ ಆವರಣ ಗೋಡೆಯನ್ನು ನಿರ್ಮಿಸಿಕೊಟ್ಟಿತು.



**ಸಾಂವಿಧಾನಿಕ ಮೌಲ್ಯಗಳ ಬಗ್ಗೆ ಅಭಿಯಾನ**

ಇಂತಹ ಒಂದು ಸಂವಾದಕ್ಕೆ ಸರಳವಾಗಿಯಾದರೂ ಬಹು–ಮುಖ್ಯವಾದ ಸಂಪನ್ಮೂಲ ಬೇಕಾಗುತ್ತದೆ: ಅದೆಂದರೆ ವ್ಯಕ್ತಿಗಳ, ವಿಶೇಷವಾಗಿ ಭವಿಷ್ಯದ ಯುವ ಪೌರರ ನಿಜ ಅನುಭವಗಳಾಗಿವೆ. ನಾವು, ಕಳೆದ ಕೆಲವು ವರ್ಷಗಳಿಂದ ನವದೆಹಲಿಯ ಶಿಕ್ಷಣ ನಿರ್ದೇಶನಾಲಯದ ಮಾರ್ಗದರ್ಶಿ ಶಿಕ್ಷಕರ ಜೊತೆ ಕಾರ್ಯ–ನಿರ್ವಹಿಸುತ್ತಿದ್ದೇವೆ. ಅಲ್ಲದೆ ಸರಕಾರಿ ಶಾಲೆಗಳ ವಿದ್ಯಾರ್ಥಿಗಳು ಮತ್ತು ಅವರ ಎಲ್ಲಾ ವಿಷಯ ಶಿಕ್ಷಕರೊಂದಿಗೂ 'ಸಂವಿಧಾನ ೭೦ರ ಹೊಸ್ತಿಲಲ್ಲಿ' (The Constitution at 70) ಸಾಂವಿಧಾನಿಕ ಮೌಲ್ಯಗಳ ಕುರಿತಾದ ಮಾಹಿತಿ ಅಭಿಯಾನ ಎಂಬುದರ ಕುರಿತೂ ತೊಡಗಿಕೊಂಡಿದ್ದೇವೆ.

ನಾವು ನಿರಂತರ ತೊಡಗಿಕೊಂಡಿದ್ದ ವಿವಿಧ ಶಾಲೆಗಳ ಶಿಕ್ಷಕ ಮತ್ತು ವಿದ್ಯಾರ್ಥಿ ಸಮುದಾಯದ ಒಂದು ಗುಂಪಿನ ಜೊತೆ ಈ ಅಭಿಯಾನದ ಪರಿಣಾಮವನ್ನು ಅಧ್ಯಯನ ಮಾಡಿದ್ದೇವೆ. ವಿವಿಧ ಶಾಲೆಗಳ ವಿದ್ಯಾರ್ಥಿಗಳು ವಿಭಿನ್ನ ಸಾಂಸ್ಕೃತಿಕ ಮತ್ತು ಸಾಮಾಜಿಕ ಹಿನ್ನೆಲೆಗಳಿಂದ ಬಂದಿದ್ದರಾದರೂ, ಅವರ ಚಿಂತನೆ ಒಂದು ನಿರ್ಣಾಯಕ ಅಂಶದ ಸುತ್ತವೇ ಇತ್ತು – ಅದು ಸಂವಿಧಾನದ ಪ್ರಸ್ತಾವನೆಯ ಅಂಶಗಳು. ಅವರು ನಮ್ಮ ಅಭಿಯಾನದ ಭಾಗವಾಗಿ, ಅವರ ಸುತ್ತುಮುತ್ತಲಿನ ಇತರ ವ್ಯಕ್ತಿಗಳ ಗುಂಪಿನ ಜೊತೆ ಸಂವಾದ ನಡೆಸಬೇಕಿತ್ತು. ಉದಾಹರಣೆಗೆ, ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಕುಟುಂಬದ ಸದಸ್ಯರ ಜೊತೆಗೆ ಮತ್ತು ನೆರೆಹೊರೆಯ ವ್ಯಕ್ತಿಗಳ ಜೊತೆಗೆ ಸಂವಾದ ನಡೆಸಬೇಕಿತ್ತು. ಇಂತಹ ಗುಂಪುಗಳು ಎಲ್ಲರಿಗೂ ಒಂದೇ ತೆರನಾಗಿ ಇದ್ದ ಕಾರಣ, ಅದು ಎಲ್ಲರಿಗೂ ಸಮವಾಗಿ ನೆರವಾಯಿತು. ಜನರಿಗೆ ಸಾಂವಿಧಾನಿಕ ಮೌಲ್ಯಗಳು ಅಂದರೆ ಏನು ಎಂಬುದನ್ನು ಪ್ರತ್ಯಕ್ಷ ಕಾಣುವುದಕ್ಕಾಯಿತು. ಹೇಗೆ ಅವರ ದಿನನಿತ್ಯದ ಬದುಕಿನಲ್ಲಿ ಅವುಗಳ ಜೊತೆಗೇ ವ್ಯವಹರಿಸುತ್ತಾರೆ ಎಂಬುದನ್ನು ತಿಳಿಯುವುದಕ್ಕಾಯಿತು.




ಅಭಿಯಾನದ ಪರಿಣಾಮದ ಮೌಲ್ಯಮಾಪನದ ಉದಾಹರಣೆ

ಇಂತಹ ಒಂದು ಪ್ರಜ್ಞೆಯನ್ನು ಅಂತರ್ಗತಗೊಳಿಸುವುದಕ್ಕೆ ಮತ್ತು ಇಂತಹ ಒಂದು ಮೌಲ್ಯದ ದೃಷ್ಟಿಕೋನವನ್ನು ಯುವ ಪೌರರಲ್ಲಿ ಬೆಳೆಸುವುದಕ್ಕೆ ಪ್ರಯತ್ನಿಸಿದ್ದರಿಂದ ಸಂವಿಧಾನದ ಪ್ರಸ್ತಾವನೆಯ (Preamble) ಆಶಯದೊಂದಿಗೆ ಕೆಲಸವನ್ನು ಮುಂದುವರೆಸುವುದು ಸುಲಭವಾಯಿತು. ಅಷ್ಟಲ್ಲದೆ ಎಲ್ಲಾ ವಿಷಯ ಶಿಕ್ಷಕರೂ ಈ ಅಭಿಯಾನದಲ್ಲಿ ಭಾಗಿಗಳಾಗುವಂತೆ ನಾವು ಖಾತ್ರಿಪಡಿಸಿದ್ದೆವು. ಆ ಮೂಲಕ ಶಿಕ್ಷಕರೂ ಸಾಂವಿಧಾನಿಕ ಮೌಲ್ಯಗಳ ಜೊತೆ ತೊಡಗಿಕೊಳ್ಳುವುದಕ್ಕೆ ಸಾಧ್ಯವಾಯಿತು. ತಮ್ಮ ನೈಜ ಅನುಭವಗಳನ್ನು ಪಠ್ಯದ ವಿಷಯಗಳ ಜೊತೆ ಸಮೀಕರಿಸಿದ್ದರಿಂದ ಶಿಕ್ಷಕರೂ ವಿದ್ಯಾರ್ಥಿಗಳೂ ಸಮವಾಗಿಯೇ ಪ್ರಸ್ತಾವನೆಯ ಸಾರವನ್ನು (Essence of the Preamble) ಆಸಕ್ತಿ ಬೆಳೆಸಿಕೊಳ್ಳಲು ಸಾಧ್ಯವಾಯಿತು.

ಈ ಅಭಿಯಾನದಿಂದಾಗಿ ವಿದ್ಯಾರ್ಥಿಗಳ ಮನಸ್ಸಿನಲ್ಲಿದ್ದ ಮತ್ತು ಜಾತಿ ಆಧಾರಿತ ಭೇದಭಾವದ ಹಲವು ಸಿದ್ಧಮಾದರಿಗಳು ಒಡೆದುಹೋದವು. ಈ ಮೊದಲು, ಕೆಲವರು ತಮ್ಮ ಆರ್ಥಿಕ ಸ್ಥಾನಮಾನಕ್ಕೆ ಸಮನಲ್ಲದವರ ಜೊತೆ ಮಾತಾಡುತ್ತಿರಲಿಲ್ಲ. ಆದರೆ ಅದೀಗ ಹಳೆಯ ಕಥೆ ಎಂಬಂತೆ ಆತುವೆ.

– ಶಿಕ್ಷಕರು, ಸರಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆ, ನವದೆಹಲಿ

**ಮುಕ್ತಾಯ**

ಪೌರ ಶಿಕ್ಷಣವು ಅಡೆತಡೆಯಿಲ್ಲದೆ ನಡೆಯುವುದು ತೀರಾ ವಿರಳ ಎಂಬುದನ್ನು ಜಗತ್ತಿನ ವಿವಿಧ ಭಾಗಗಳಲ್ಲಿ ಕೈಗೊಂಡ ಪ್ರತಿಯೊಂದು ಅಧ್ಯಯನವೂ ಸೂಚಿಸುತ್ತವೆ. ಭಾರತೀಯ ಸಂದರ್ಭದಲ್ಲಿ, ಪೌರನೀತಿ ಶಿಕ್ಷಣವನ್ನು ಬಾಯಿಪಾಠದ ಕಲಿಕಾ ವಿಧಾನದಿಂದ ಬದಲಾಯಿಸಿ, ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಕೊಂಡು ಮಾಡುವುದೇ ಅತ್ಯಂತ ದೊಡ್ಡ ಸವಾಲಾಗಿದೆ. ಈ ಸವಾಲನ್ನು ಮನಸ್ಸಿನಲ್ಲಿರಿಸಿ, ವೀ ದ ಪೀಪಲ್ ಅಭಿಯಾನವು, ಶಾಲೆಗಳಲ್ಲಿ ಪೌರನೀತಿಯನ್ನು ಕಲಿಯುವ ವಿಧಾನಗಳಲ್ಲಿ ಬದಲಾವಣೆ–ಯಾಗುವಂತೆ ಮಾಡಲು ಪ್ರಯತ್ನಿಸಿದೆವು. ಆ ಮೂಲಕ ವಿಷಯವು ಆಸಕ್ತಿದಾಯಕವೂ, ಪ್ರಾಯೋಗಿಕವೂ ಮತ್ತು ನಮ್ಮ ಬದುಕಿಗೆ ಪ್ರಸ್ತುತವೂ ಆಗುವಂತೆ ಮಾಡಿದೆವು. ಹಾಗಿದ್ದರೂ, ಅಂತಿಮವಾಗಿ ಶಿಕ್ಷಕರ ಸಾಮರ್ಥ್ಯಾಭಿವೃದ್ಧಿ ಮತ್ತು ಪ್ರಯೋಗಕ್ಕೆ ಇಳಿಯುವ ಅವರ ಇಚ್ಛಾಶಕ್ತಿಯು ಈ ಕೆಲಸದ ಯಶಸ್ಸಿಗೆ ಅವಶ್ಯಕ ಸಂಗತಿಯಾಗುತ್ತದೆ.

**ಪರಾಮರ್ಶನ:**

For the study in Maharashtra schools, NCERT's 'Journal of Indian Education' (Volume XLV, Number 2, August 2019) https://ncert.nic.in/pdf/publication/journalsandperiodicals/journalofindianeducation/JIE_AUGUST2019.pdf

Film: https://youtu.be/u6EB6lNiJ3M



**ನೇಹಾ ಯಾದವ್** ಅವರು 'ವಿ ದ ಪೀಪಲ್ ಅಭಿಯಾನ್'ನ ಪಾಲುದಾರಿಕೆಗಳ ಮುಖ್ಯಸ್ಥರಾಗಿದ್ದಾರೆ. ಅವರು ಜನರಿಗೆ ತಮ್ಮ ಹಕ್ಕುಗಳನ್ನು ಎತ್ತಿಹಿಡಿಯುವುದು ಸಾಧ್ಯವಾಗುವಂತೆ ಸಶಕ್ತಗೊಳಿಸುವ ಬಗ್ಗೆ ಮತ್ತು ಸಂವಿಧಾನದ ಮೌಲ್ಯಗಳು ಜನರ ದಿನನಿತ್ಯದ ಬದುಕಿನ ದೃಷ್ಟಿಕೋನವಾಗುವಂತೆ ಮಾಡುವ ಬಗ್ಗೆ ತೀವ್ರ ಆಸಕ್ತಿ ಇರುವವರು. ಸಹಯೋಗ ಕೇಂದ್ರಿತ ಕಾರ್ಯಕ್ರಮದ ಮೂಲಕ ಜನರು ಪೌರರಾಗಿ ತಮ್ಮ ಪಾತ್ರಗಳನ್ನು ಅರ್ಥಮಾಡಿಕೊಳ್ಳುವಂತೆ ಸಶಕ್ತಗೊಳಿಸಲು ಬೇಕಾದ ಕಾರ್ಯತಂತ್ರ, ವಿನ್ಯಾಸ ಮತ್ತು ಅನುಷ್ಠಾನವನ್ನು ರೂಪಿಸುವುದು ಅವರ ಮುಖ್ಯ ಗಮನವಾಗಿದೆ. ನೇಹಾ ಅವರು ಕ್ಲೆಮ್‌ಸನ್ ವಿಶ್ವವಿದ್ಯಾಲಯದ ಎಂಜಿನಿಯರಿಂಗ್ ಪದವೀಧರೆಯಾಗಿದ್ದಾರೆ ಮತ್ತು ಸ್ಕೂಲ್ ಆಫ್ ಇನ್‌ಸ್ಪೈರ್ಡ್ ಲೀಡರ್‌ಶಿಪ್‌ನಲ್ಲಿ ಎಂಬಿಎ ಮಾಡಿದ್ದಾರೆ. ಅವರ ಸಂಪರ್ಕ: nyadav.ba@gmail.com



**ಅಸ್ಮಿತಾ ತಿವಾರಿ**ಯವರು ವಿ ದ ಪೀಪಲ್ ಅಭಿಯಾನದ ವಿಷಯ ಸಂರಚನೆ ವಿಭಾಗದ ಪ್ರೋಗ್ರಾಂ ಮ್ಯಾನೇಜರ್ ಆಗಿದ್ದಾರೆ. ಅವರು ಅಭಿವೃದ್ಧಿ ಕ್ಷೇತ್ರದಲ್ಲಿ ಕಳೆದ ಮೂರು ವರ್ಷಗಳಿಂದ ಸಕ್ರಿಯರಾಗಿದ್ದಾರೆ. ಅವರ ಔಪಚಾರಿಕ ಶಿಕ್ಷಣವು ರಾಜಕೀಯ ಶಾಸ್ತ್ರದಲ್ಲಿ ಎಂಎ ಮತ್ತು ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು ಒಳಗೊಂಡಿದೆ. ವಿವಿಧ ಹಿನ್ನೆಲೆಯ ಭಾಗೀದಾರರಿಗೆ ಸಾಂದರ್ಭಿಕ, ಚಿಂತನಾತ್ಮಕ ಮತ್ತು ಪ್ರತ್ಯಕ್ಷ ತೊಡಗಿಕೊಳ್ಳುವಿಕೆಗೆ ಬೇಕಾದ ಕಲಿಕಾ ವಿನ್ಯಾಸಗಳನ್ನು ಮಾಡುವುದು ಮತ್ತು ಫಲಶ್ರುತಿಯ ಅವಲೋಕನವು ಅವರ ಪಾತ್ರವಾಗಿದೆ. ಅವರ ಸಂಪರ್ಕ: asmyta.tiwari@wethepeople.com

ಅನುವಾದ: **ರಾಮಕೃಷ್ಣ ಭಟ್** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಒಳಗೊಳ್ಳುವಿಕೆ: ಒಂದು ಮೂಲಭೂತ ಹಕ್ಕು

ಅಡಿವೆಪ್ಪ ಕುರಿ



ಅವನ ಹೆಸರನ್ನು ಕೂಗಿದ ತಕ್ಷಣ ಎಲ್ಲೇ ಇದ್ದರೂ ಶಿಕ್ಷಕರೆದುರು ಹಾಜರಾಗಲು ಓಡಿ ಬರುತ್ತಾನೆ ಮಾಧವ. ಪ್ರತಿಯೊಂದು ಕೆಲಸಕ್ಕೂ ಅವನನ್ನೇ ಕರೆಯಲು ಶಿಕ್ಷಕರೂ ಇಷ್ಟಪಡುತ್ತಾರೆ. ಅವನಿಗೆ ನಿರರ್ಗಳವಾಗಿ ಮಾತನಾಡಲು ಆಗುವುದಿಲ್ಲ. ಓದುವ, ಬರೆಯುವ ನೈಪುಣ್ಯವೂ ಇಲ್ಲ. ಆದರೂ ಆತ ಇಡೀ ಶಾಲೆಗೇ ಮುಂದಾಳು.

ಒಂದನೇ ತರಗತಿಗೆ ದಾಖಲಾತಿ ಪಡೆದ ಸಮಯದಲ್ಲಿ ತನ್ನ ದೈನಂದಿನ ಕೆಲಸಕಾರ್ಯಗಳನ್ನೂ ಮಾಡಲು ಹೆಣಗಾಡುತ್ತಿದ್ದ ಈ ಮಗು, ಇಂದು ತನ್ನೆಲ್ಲ ಕೆಲಸಗಳನ್ನು ತಾನೇ ಮಾಡಿ-ಕೊಳ್ಳುವುದಲ್ಲದೇ ಇನ್ನಿತರ ಯಾವುದೇ ಮಗುವಿನಂತೆ ಎಲ್ಲರೊಂದಿಗೂ ಮುಕ್ತವಾಗಿ ಬೆರೆಯುತ್ತದೆ. ಶಾಲೆಗೆ ಭೇಟಿನೀಡುವ ಜನರೊಂದಿಗೆ ಮುಖಕ್ಕೆ ಮುಖ ಕೊಟ್ಟು ಮಾತನಾಡುವ ಆತ್ಮವಿಶ್ವಾಸವನ್ನು ಈಗ ಮಾಧವ ಹೊಂದಿದ್ದಾನೆ.ಒಳಗೊಳ್ಳುವಿಕೆಯ ಮೂಲಕ ಪರಿವರ್ತನೆ

ವಿಶೇಷ ಅಗತ್ಯವನ್ನುಳ್ಳ ಮಗು ಮಾಧವನ ಪರಿವರ್ತನೆಯಾಗಿದ್ದು ಅವನ ಶಿಕ್ಷಕರ ಪ್ರೀತಿ, ಮಮತೆಗಳಿಂದ ಮತ್ತು ಅವರು ಅವನಿಗೆ ಒದಗಿಸಿದ ಅವಕಾಶಗಳಿಂದ. ಸಮರ್ಥ ನಿರ್ವಹಣೆಗೆ ಸೂಕ್ತ ಅವಕಾಶ ಹಾಗು ನೆರವನ್ನು ಒದಗಿಸಿದರೆ, ಪ್ರತಿಯೊಂದು ಮಗುವಿನ ಒಳಗೊಳ್ಳುವಿಕೆಯೂ ಸಾಧ್ಯ ಮತ್ತು ಅನುಕಂಪಕ್ಕಿಂತಲೂ ಹೆಚ್ಚಾಗಿ ಈ ಅವಕಾಶಗಳನ್ನು ಪಡೆಯುವುದು ಅವರ ಹಕ್ಕು ಎನ್ನುವುದಕ್ಕೆ ಇದೊಂದು ಪುರಾವೆಯೂ ಆಗಿದೆ. ಕಲಿಕೆ ಮತ್ತು ದೈಹಿಕ ನ್ಯೂನತೆಗಳಿರುವ ಮಕ್ಕಳಿಗೆ, ಸಹಾನುಭೂತಿಯಷ್ಟೇ ಸಾಕಾಗುವುದಿಲ್ಲ, ಅವರಿಗೆ ಬೆಳೆಯಲು ಅವಕಾಶವನ್ನು ಒದಗಿಸಿಕೊಡಬೇಕು. ಅವರ ಕಲಿಕೆಗೆ ನೆರವಾಗುವಂತೆ ಸುದೀರ್ಘ ಕಾಲ ಅವರನ್ನು ತಾಳ್ಮೆ, ಪ್ರೀತಿ ಮತ್ತು ಗೌರವದಿಂದ ನಡೆಸಿ-ಕೊಳ್ಳಬೇಕು. ಇದು ಸಂವಿಧಾನದಲ್ಲಿ ನೀಡಿದಂತೆ ಅವರ ಸಮಾನತೆಯ ಮತ್ತು ನ್ಯಾಯದ ಹಕ್ಕಿನ ಭಾಗವೂ ಆತುದೆ.

ಕೆಲವು ವರ್ಷಗಳ ಹಿಂದೆ, ನಾವು ಸುರಪುರದಲ್ಲಿ ನ್ಯೂನತೆಗಳಿರುವ ಮಕ್ಕಳಿಗೆ ಒಂದು ಮೇಳವನ್ನು ಏರ್ಪಡಿಸಿದ್ದೆವು. ಅದನ್ನು ಯಶಸ್ವಿಗೊಳಿಸಲು ನಮ್ಮ ತಂಡವು ಎರಡು ತಿಂಗಳುಗಳ ಕಾಲ ತುಂಬ ಶ್ರಮವಹಿಸಿತ್ತು. ಸಮಾರಂಭದ ದಿನ ಪ್ರತಿಯೊಂದು ಮಗುವೂ ತನಗೆ ನೀಡಲಾದ ವಿಷಯವನ್ನು ಪ್ರಸ್ತುತಪಡಿಸಿದ ರೀತಿಗೆ ಶಿಕ್ಷಕರು ಮತ್ತು ಪೋಷಕರು ದಂಗಾಗಿಬಿಟ್ಟರು. ಮಕ್ಕಳಿಗೆ ಅಗಾಧ ಪ್ರೀತಿ ತೋರಿ, ಅವರ ಕಾರ್ಯವನ್ನು ಪ್ರಶಂಸಿಸಿದರು. ವರ್ಣಿಸಲಾಗದ ಏನೋ ಸಾಧನೆಯನ್ನು ಮಾಡಿದ ಅನುಭವ ನಮಗಾಯಿತು. ಮಕ್ಕಳು, ನಮ್ಮ ಬಗ್ಗೆಯೇ ನಮಗೆ ಹೆಮ್ಮೆಯಾಗು-ವಂತೆ ಮಾಡಿದ್ದರು!

ವಿಶೇಷ ಅಗತ್ಯಗಳಿರುವ ಮಕ್ಕಳು ಕುಟುಂಬ ಮತ್ತು ಸಮಾಜಕ್ಕೆ ಹೊರೆ ಎನ್ನುವ ಮನೋಭಾವ ಇನ್ನೂ ನಮ್ಮಲ್ಲಿ ಇದೆ. ಅವರಲ್ಲಿರುವ ಭಿನ್ನತೆಗಳನ್ನು ನೋಡುವುದಕ್ಕಿಂತ, ಅವರ ಶಿಕ್ಷಣದ ಹಕ್ಕನ್ನು ನಮ್ಮ ವ್ಯವಸ್ಥೆಯೊಳಗೇ ಅವರು ಪಡೆದುಕೊಳ್ಳುವಂತೆ ಮಾಡಲು ಹೇಗೆ ಸಾಧ್ಯ ಎನ್ನುವುದನ್ನು ನಾವು ಶೋಧಿಸಬೇಕಿದೆ. ಶಿಕ್ಷಕರು ಮನಸ್ಸು ಮಾಡಿದರೆ, ಪ್ರತಿಯೊಂದು ಮಗುವೂ ಉತ್ತಮ ಶಿಕ್ಷಣ ಪಡೆಯಬಹುದು ಎನ್ನುವುದು ನನ್ನ ನಂಬಿಕೆ. ನ್ಯೂನತೆಗಳಿರುವ 7 ವರ್ಷದ ಬೇರೊಂದು ಮಗುವಿನ ಪೋಷಕರು ಮಾಧವನ ಪ್ರಗತಿಯ ಬಗ್ಗೆ ತಿಳಿದು ತಮ್ಮ ಮಗಳನ್ನೂ ಅದೇ ಶಾಲೆಗೆ ಸೇರಿಸಿದರು. ಈಗ ಆ ಮಗುವೂ ತನ್ನ ದೈನಂದಿನ ಕೆಲಸಕಾರ್ಯಗಳನ್ನು ಸ್ವತಂತ್ರವಾಗಿ ಮಾಡಿಕೊಳ್ಳುವಷ್ಟು ಸಾಮರ್ಥ್ಯವನ್ನು ಪಡೆದಿದೆ ಮತ್ತು ಅವಳ ಪೋಷಕರಿಗೆ ಈ ಪರಿವರ್ತನೆಯಿಂದ ತುಂಬಾ ಸಂತೋಷವಾಗಿದೆ.

**ವಿಭಿನ್ನ ಸಾಮಾಜಿಕ ಗುಂಪುಗಳು**

ವಿಭಿನ್ನ ಸಾಮಾಜಿಕ ಹಿನ್ನೆಲೆಯನ್ನುಳ್ಳ ಮಕ್ಕಳು ಶಾದಿಮಹಲ್‌ನ (ಮುದಗಲ್, ಲಿಂಗಸಗೂರು ವಲಯ, ರಾಯಚೂರು ಜಿಲ್ಲೆ) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಬರುತ್ತಾರೆ. ಸದ್ಯ ಈ ಶಾಲೆಯಲ್ಲಿ 42 ಮಕ್ಕಳು ಕಲಿಯುತ್ತಿದ್ದಾರೆ. ಅವರ ಮಾತೃಭಾಷೆ ಬೇರೆಬೇರೆಯಾಗಿದ್ದು, ಹದಿನೆಂಟು ಮಕ್ಕಳು ತೆಲುಗು, ಐವರು ಮರಾಠಿ, ಎಂಟು ಜನ ಉರ್ದು ಮಾತನಾಡುತ್ತಾರೆ. ಒಂದು ಮಗುವಿನ ತಾಯ್ನುಡಿ ಕುಂಚಟಿ (ಕುಂಚಿಕೊರವರ ಭಾಷೆ). ಉಳಿದ ಮಕ್ಕಳ ತಾಯ್ನುಡಿ ಕನ್ನಡ. ಈ ಮಕ್ಕಳ ಪೋಷಕರು ನಾಟಕ ಕಲಾವಿದರು (ಹಗಲು ವೇಷಗಾರರು), ಕಲ್ಲುಕುಟಿಗರು, ಬುಟ್ಟಿ ನೇಯುವವರು, ಬಳೆ ಮಾರುವವರು, ಸಣ್ಣಪುಟ್ಟ ಪಾತ್ರೆಗಳನ್ನು ಮಾರಾಟ ಮಾಡುವವರು. ಕೆಲವು ಪೋಷಕರಂತೂ ಜೀವನೋಪಾಯಕ್ಕಾಗಿ ಭಿಕ್ಷಾಟನೆಯನ್ನೂ ಮಾಡುತ್ತಾರೆ. ಅಂಥವರು ಜೋಪಡಿಗಳಲ್ಲಿ ವಾಸಿಸುತ್ತಾರೆ. ಈ ಮಕ್ಕಳಲ್ಲಿ ಕೆಲವರು ಶಾಲೆ ಮುಗಿದ ಮೇಲೆ ಭಿಕ್ಷಾಟನೆಗೂ ಹೋಗುತ್ತಾರೆ. ಕನ್ನಡವು ಮಾತೃಭಾಷೆಯಲ್ಲದ ಮಕ್ಕಳೂ ಕೂಡ ಚೆನ್ನಾಗಿ ಕನ್ನಡ ಮಾತನಾಡುತ್ತಾರೆ. ಏಕೆಂದರೆ ಕನ್ನಡವು ಅವರ ಅನ್ನದ ಭಾಷೆಯೂ ಆಗಿದೆ. ಆದರೂ, ಶಿಕ್ಷಕರು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಮನೋಭಾವ ಹೊಂದಿರುವುದರಿಂದ ಇಂತಹ ವಿಭಿನ್ನ ಸಾಮಾಜಿಕ ಹಿನ್ನೆಲೆಗಳಿಂದ ಬಂದ ಮಕ್ಕಳು ಯಾವುದೇ ತರಹದ ಕೀಳರಿಮೆಯನ್ನು ಹೊಂದಿಲ್ಲ. ಅವರು ಪರಸ್ಪರ ಹೇಗೆ ಮುಕ್ತವಾಗಿ ಆಟವಾಡುತ್ತಾರೆ, ಆಹಾರವನ್ನು ಹಂಚಿಕೊಳ್ಳುತ್ತಾರೆ, ಒಟ್ಟಾಗಿ ಕೆಲಸ ಮಾಡುತ್ತಾರೆ ಹಾಗು ಒಬ್ಬರಿಗೊಬ್ಬರು ನೆರವಾಗುತ್ತಾರೆ ಎನ್ನುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಶಿಕ್ಷಕರಿಗೆ ಮಕ್ಕಳ ಮೇಲೆ ಪ್ರೀತಿ ಮತ್ತು ಸಹಾನುಭೂತಿಯಿದೆ.

**ಶಿಕ್ಷಕರ ಪಾತ್ರ**

ಶಾಲೆಯಲ್ಲಿ ಮಕ್ಕಳು ಒಂದನೆಯ ತರಗತಿಗೆ ದಾಖಲಾತಿ ಪಡೆದಾಗ, ಶಾಲಾ ಪ್ರಕ್ರಿಯೆಗಳಿಗೆ ಹೊಂದಿಕೊಳ್ಳಲು ಅವರಿಗೆ ಕಷ್ಟವಾಗುತ್ತದೆ. ಅವರು ಆಗಾಗ ಹೊರಗೆ ಹೋಗಲು ಬಯಸುತ್ತಾರೆ ಮತ್ತು ಇತರ ಮಕ್ಕಳೊಂದಿಗೆ ಮುಕ್ತವಾಗಿ ಬೆರೆಯಲು ಹಿಂಜರಿಯುತ್ತಾರೆ. ಶಿಕ್ಷಕಿಯರಲ್ಲೊಬ್ಬರಾದ ಪ್ರಮೀಳಾ, ಮಕ್ಕಳ ಬದುಕಿನ ರೀತಿಯನ್ನು ಗೌರವಿಸುವುದರ ಜೊತೆಗೆ, ಶಾಲಾ ಅವಧಿಯಲ್ಲಿ ಕೆಲ ಸಮಯದ

ಮಟ್ಟಿಗೆ ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಗಳೊಡನೆ ಒಡನಾಡಲು ಅನುವು ಮಾಡಿಕೊಡುತ್ತಾರೆ. ಶಿಕ್ಷಕಿಯೂ ಮಕ್ಕಳು ಮಾತನಾಡುವ ಭಾಷೆಯಲ್ಲಿ ಸಂವಹಿಸಲು ತಿಳಿದಿರುವುದರಿಂದ, ಮಕ್ಕಳು ಅವರೊಂದಿಗೆ ತಮ್ಮ ಅನಿಸಿಕೆಗಳನ್ನು ಮುಕ್ತವಾಗಿ ಹಂಚಿಕೊಳ್ಳುತ್ತಾರೆ. ಹಾಡು, ಕಥೆಗಳನ್ನು ಹೇಳುವಂತೆ ಮಕ್ಕಳನ್ನು ಉತ್ತೇಜಿಸುತ್ತಾರೆ. ಮತ್ತು ಅವನ್ನು ತಮ್ಮ ದಿನನಿತ್ಯದ ಬದುಕಿನ ಸಂದರ್ಭದಲ್ಲಿಟ್ಟು ನೋಡಲು ನೆರವಾಗುತ್ತಾರೆ. ಮಕ್ಕಳು ತಮ್ಮ ಸಾಮಾಜಿಕ ಪರಿಸರದ ಕುರಿತಾಗಿ ಅದಾಗಲೇ ಹೊಂದಿರುವ ತಿಳುವಳಿಕೆಯನ್ನು ಅವರು ಚೆನ್ನಾಗಿ ಬಳಸಿಕೊಳ್ಳುವಂತೆ ಮಾಡುತ್ತಾರೆ. ಮಕ್ಕಳು ಮಾಡಿದ ಅತಿ ಸಣ್ಣ ಕೆಲಸವನ್ನೂ ಕೂಡ ಗುರುತಿಸಿ ಬೆನ್ನುತಟ್ಟುತ್ತಾರೆ. ಶಿಕ್ಷಕಿಯು ಅನುಸರಿಸುವ ಪ್ರಜಾತಾಂತ್ರಿಕ ವಿಧಾನದಿಂದಾಗಿ ಮಕ್ಕಳಿಗೆ ತಮಗೂ ಒಂದು ಬೆಲೆ ಸ್ವಮೌಲ್ಯವಿದೆ ಎಂಬ ಭಾವನೆ ಮೂಡುತ್ತದೆ. ಶಿಕ್ಷಕಿಯು ಪ್ರತಿಯೊಂದು ಮಗುವನ್ನೂ ಚೆನ್ನಾಗಿ ಬಲ್ಲರು, ಯಾವ ಮಗು ಏನನ್ನು, ಹೇಗೆ ಕಲಿಯುತ್ತದೆ ಎನ್ನುವುದನ್ನು ತಿಳಿದಿರುವರು ಎಂಬುದು ಅವರೊಂದಿಗೆ ಮಾತನಾಡಿದಾಗ ಸ್ಪಷ್ಟವಾಗಿ ಅರಿವಿಗೆ ಬರುತ್ತದೆ.ಶಿಕ್ಷಕಿ ಪ್ರಮೀಳಾ ಅವರಿಗೆ ಈ ಮಕ್ಕಳ ಸಾಮರ್ಥ್ಯ ಏನು ಎನ್ನುವುದು ಗೊತ್ತು. ಅವರು ಮಕ್ಕಳ ನಿತ್ಯದ ಅನುಭವಕ್ಕೆ ಹೆಚ್ಚಿನದನ್ನು ಸೇರಿಸಲು ನಲಿ-ಕಲಿ ವಿಧಾನವನ್ನು ಬಳಸುತ್ತಾರೆ. ಅವರು ಮಕ್ಕಳಿಗೆ ಮಾತನಾಡಲು, ಪರಸ್ಪರ ಚರ್ಚಿಸಲು, ತಾವು ಮುಕ್ತವಾಗಿ ಅಭಿವ್ಯಕ್ತಿಸಲು ಅವಕಾಶವನ್ನು ನೀಡುತ್ತಾರೆ.

ಬಹುಪಾಲು ಮಕ್ಕಳು ಕಥೆ ಹೇಳುವುದು, ಚಿತ್ರ ರಚನೆ ಮತ್ತು ಜೇಡಿಮಣ್ಣಿನಿಂದ ಆಟಿಕೆ ತಯಾರಿಸುವುದನ್ನು ತುಂಬಾ ಇಷ್ಟಪಡುತ್ತಾರೆ. ಏಕೆಂದರೆ, ಇವರಲ್ಲಿ ಅನೇಕ ಮಕ್ಕಳು ಶಾಲೆಗೆ ಬರುವುದಕ್ಕಿಂತಲೂ ಮೊದಲೇ ಅಕ್ಕಪಕ್ಕದ ಹಳ್ಳಿಗಳಲ್ಲಿ ನಡೆಯುವ ಸ್ಥಳೀಯ ಸಂತೆ ಜಾತ್ರೆಗಳ ಸಂದರ್ಭದಲ್ಲಿ ತಮ್ಮ ತಂದೆ – ತಾಯಂದಿರೊಡನೆ ಆಟಿಕೆ, ಪಾತ್ರಗಳನ್ನು ಮಾರಿದ ಅನುಭವವನ್ನು ಹೊಂದಿದ್ದಾರೆ. ಆದ್ದರಿಂದ ಈ ಶಾಲೆಯ ಮಕ್ಕಳು ಪ್ರತೀ ವರ್ಷ ಆಯೋಜಿಸಲಾಗುವ ಪ್ರತಿಭಾ ಕಾರಂಜಿ ಕಾರ್ಯಕ್ರಮದಲ್ಲಿ ನಡೆಯುವ ಚಿತ್ರರಚನೆ ಮತ್ತು ಕಥೆ ಹೇಳುವ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ.ಒಟ್ಟಾರೆ ಹೇಳಬೇಕೆಂದರೆ, ಈ ಶಾಲೆಯಲ್ಲಿ ಮಕ್ಕಳು ಅಕ್ಷರ ಜ್ಞಾನವನ್ನು ಪಡೆದುಕೊಳ್ಳುವುದರ ಜೊತೆಗೆ ಬದುಕಿನ ಕುರಿತಾಗಿಯೂ ಕಲಿಯುತ್ತಾರೆ. ಮಕ್ಕಳು ಪ್ರತಿದಿನ ಶಾಲೆಗೆ ಸ್ವಇಚ್ಛೆಯಿಂದಲೇ ಬರುತ್ತಾರೆ. ಶಾಲೆಯು ಒಂದು ಕುಟುಂಬ-ದಂತೆಯೇ ಇದ್ದು ಕಲಿಕೆಯೆನ್ನುವುದು ಮಕ್ಕಳು ಶಾಲೆಯಲ್ಲಿ ಮಾಡುವ ಎಲ್ಲ ಕೆಲಸಕಾರ್ಯಗಳ ಭಾಗವೇ ಆಗಿದೆ. ಮಕ್ಕಳು ಮುಕ್ತವಾಗಿ ಮಾತನಾಡಬಲ್ಲರು, ಅವರ ಪ್ರತಿಭೆಗಳನ್ನು ಉತ್ತೇಜಿಸಲಾಗುತ್ತದೆ ಎನ್ನುವ ಸಂಗತಿಯು ಸಂವಿಧಾನದ ನೀತಿ-ನಿಯಮಗಳನ್ನು ಅನುಷ್ಠಾನಗೊಳಿಸಲು ಹಾಗು ಅದು ಪ್ರತಿಯೊಂದು ಶಾಲೆಯ ವಿಷಯದಲ್ಲಿಯೂ ವಾಸ್ತವವಾಗಲು ಸಾಧ್ಯ ಎನ್ನುವುದನ್ನು ತೋರಿಸುತ್ತದೆ.

* ಮಕ್ಕಳ ಗುರುತನ್ನು ರಕ್ಷಿಸಲು ಹೆಸರುಗಳನ್ನು ಬದಲಾಯಿಸಲಾಗಿದೆ.



**ಅಡಿವೆಪ್ಪ ಕುರಿ** ಅವರು ಕಳೆದ ಹತ್ತು ವರ್ಷಗಳಿಂದ ರಾಯಚೂರಿನ, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಬೆಂಗಳೂರಿನ ಡಿಎಸ್‌ಇಆರ್‌ಟಿಸಿ ಆಯೋಜಿಸಿದ ಗುರುಚೇತನ ಕಾರ್ಯಕ್ರಮಕ್ಕೆ ಇವರು ಬೆಂಬಲ ನೀಡಿದ್ದಾರೆ. ಅವರನ್ನು adiveppa.kuri@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಮಕ್ಕಳಿಗೆ ಜವಾಬ್ದಾರಿಯನ್ನು ವಹಿಸುವುದು

ಅನಿಲ್ ಎಸ್. ಅಂಗಡಿಕಿ

ನಮ್ಮ ಹೆಚ್ಚಿನ ಶೈಕ್ಷಣಿಕ ಗುರಿಗಳು ಅಥವಾ ಪಠ್ಯಕ್ರಮದ ಮಾರ್ಗಸೂಚಿಗಳು, ಶಿಕ್ಷಣದ ಮೂಲಕ ವ್ಯಕ್ತಿಗಳ ತಾರ್ಕಿಕ ಚಿಂತನೆಯ ಬೆಳವಣಿಗೆಯತ್ತ ಬೆರಳು ತೋರಿಸುತ್ತವೆ. ಈ ಕುರಿತ ಜವಾಬ್ದಾರಿಯು ದೊಡ್ಡ ಮಟ್ಟದಲ್ಲಿ ಶಾಲೆಗಳು ಮತ್ತು ಸಂಬಂಧಿಸಿದ ಎಲ್ಲಾ ಪಾಲುದಾರರ ಹೆಗಲ ಮೇಲಿದೆ ಎನ್ನುವುದು ಸ್ಪಷ್ಟ. ಈಗಾಗಲೇ ಬಹುತೇಕ ಶಿಕ್ಷಕರ ಅನುಭವಕ್ಕೆ ಬಂದಂತೆ, ಈ ಕಲ್ಪನೆಯನ್ನು ಕಾರ್ಯರೂಪಕ್ಕೆ ತರುವುದು ಅಷ್ಟು ಸುಲಭವಲ್ಲ. ಮಕ್ಕಳ ಚಿಂತನೆಗಳನ್ನು ರೂಪಿಸುವ ಹಲವು ವಿಧಾನಗಳನ್ನು ಕಲ್ಪಿಸುವಲ್ಲಿ ಶಿಕ್ಷಕರ ಪಾತ್ರ ದೊಡ್ಡದು ಎಂಬುದನ್ನು ಬಹುತೇಕ ನಾವೆಲ್ಲ ಒಪ್ಪಿಕೊಳ್ಳುತ್ತೇವೆ. ಆರೈಕೆ ಒದಗಿಸುವವರು ಮತ್ತು ಸಮಾನಮನಸಸ್ಕರು ಸಹ ನಿರ್ಣಾಯಕ ಪಾತ್ರವನ್ನು ವಹಿಸಿದರೂ, ಅವರ ಜೊತೆಗಿನ ನಿರಂತರ ಸಂವಾದದ ಮೂಲಕ ಶಿಕ್ಷಕರು ಹೆಚ್ಚಿನ ಪ್ರಭಾವ ಬೀರುತ್ತಾರೆ. ಸಾಮಾನ್ಯವಾಗಿ ಶಾಲೆಗಳು ಸಮಗ್ರ ಯೋಜನೆಯನ್ನು ಹೊಂದಿರುತ್ತವೆ ಹಾಗು ಇದನ್ನು ಕಾರ್ಯರೂಪಕ್ಕೆ ತರಲು ವಿವಿಧ ಪ್ರಕ್ರಿಯೆಗಳು ಮತ್ತು ಕಾರ್ಯಕ್ರಮಗಳನ್ನು ನಡೆಸುತ್ತವೆ.

ಯಾದಗಿರಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ, ನನ್ನ ಅಭಿಪ್ರಾಯದಲ್ಲಿ, ವಿವಿಧ ಇತರ ವಿಧಾನಗಳು ಬೆಂಬಲಿಸಿದ ಒಂದು ವಿಧಾನವನ್ನು ಪ್ರಯತ್ನಿಸಿದೆವು. ನಾವು ಮಕ್ಕಳಿಗೆ ಮುಕ್ತ ಮತ್ತು ಭೀತಿರಹಿತ ಪರಿಸರವನ್ನು ಕಲ್ಪಿಸಿದಾಗ, ಅವರ ಜೊತೆಗೆ ಉತ್ತಮ ಸಂಬಂಧ ರೂಪಿಸುವುದು; ಮುಕ್ತವಾಗಿ ಮತ್ತು ದೃಢವಾಗಿ ತಮ್ಮನ್ನು ತಾವು ಅಭಿವ್ಯಕ್ತಿಗೊಳಿಸುವ ಹಾಗು ತರಗತಿಯಲ್ಲಿ ತಮಗೆ ಅರ್ಥವಾಗದ ವಿಷಯಗಳ ಕುರಿತು ಪ್ರಶ್ನೆಗಳನ್ನು ಕೇಳುವ ಮೂಲಕ ವಿದ್ಯಾರ್ಥಿಗಳು ಆತ್ಮವಿಶ್ವಾಸಗಳಿಸುವುದು – ಮುಂತಾದ ಪ್ರಯೋಜನಗಳು ಉಂಟಾದವು. ಆದರೆ ಕ್ರಮೇಣ ಮಕ್ಕಳ ವರ್ತನೆಯ ನಿರ್ವಹಣೆಯಲ್ಲಿ ನಾವು ಸವಾಲುಗಳನ್ನು ಎದುರಿಸಬೇಕಾಯಿತು. ಕೆಲವೊಂದು ಸಂದರ್ಭಗಳಲ್ಲಿ ಮಕ್ಕಳು ತಮ್ಮ ಸಮಾನಮನಸ್ಕರು ಅಥವಾ ಅವರ ಕೆಲಸವನ್ನು ಗೌರವಿಸುತ್ತಿರಲಿಲ್ಲ. ಪೋಷಕರಿಗೆ ಸರಿಯಾಗಿ ಪ್ರತಿಕ್ರಿಯಿಸದೆ ಇರುವುದು, ತರಗತಿಯ ಕೆಲಸವನ್ನು ಪೂರ್ಣಗೊಳಿಸದೆ ಇರುವುದು, ತರಗತಿ ಅಥವಾ ಬೆಳಗ್ಗಿನ ಸಭೆಯ ವೇಳೆ ತೊಂದರೆ ಉಂಟು ಮಾಡುವುದು, ಶಾಲೆಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಆಸಕ್ತಿ ತೋರದೆ ಇರುವುದು ಅಥವಾ ಇತರರಿಗೆ ಸಹಕಾರ ನೀಡದೆ ಇರುವುದು – ಮುಂತಾದ ಸವಾಲುಗಳು ಉಂಟಾದವು. ಈ ಸವಾಲುಗಳ ಕುರಿತು ನಮ್ಮ ನಡುವೆಯೇ ಚರ್ಚೆ ನಡೆಸಿ, ಇತರ ಶಾಲೆಗಳ ಅವಲೋಕನ ಮತ್ತು ಪರಿಣತಿಯ ಮೂಲಕ, ಚಾಲ್ತಿಯಲ್ಲಿರುವ ಸಂವಾದದ ವಿಧಾನವನ್ನು ವೃದ್ಧಿಸಲು ಮತ್ತು ಸುಧಾರಿಸಲು ಪ್ರಾರಂಭಿಸಿದೆವು. ಮಕ್ಕಳ ಜೊತೆ ಪ್ರತ್ಯೇಕವಾಗಿ, ಅವರ ಪೋಷಕರ ಜೊತೆ, ಸಮಾನಮನಸ್ಕರ ಜೊತೆ, ಕೆಲವೊಮ್ಮೆ ಗುಂಪಿನಲ್ಲಿ ವಿವಿಧ ವಿಧಾನಗಳನ್ನು ಅನ್ವೇಷಿಸಲಾಯಿತು. ಕೆಲ ಹಂತದವರೆಗೆ ಇವು ಸಹಕಾರಿ ಎನಿಸಿದವು. ಆದರೆ, ತರಗತಿಗಳಲ್ಲಿ, ಸಭೆ ಅಥವಾ ಕಾರ್ಯಕ್ರಮಗಳಲ್ಲಿ ಇವುಗಳಿಗೆ ಒಂದಷ್ಟು ಸಮಯ ಬೇಕಾಯಿತು. ಅಲ್ಲದೆ ಮಕ್ಕಳು ಈ ಸಂವಾದವನ್ನು ಲಘುವಾಗಿ ಪರಿಗಣಿಸಿದಾಗ, ಮಕ್ಕಳಲ್ಲಿ ತರಗತಿಯ ಶಿಸ್ತನ್ನು ಜಾರಿಗೊಳಿಸುವುದು, ಅಂತಹ ಮಕ್ಕಳ ಮೇಲೆ ನಿರಂತರ ಫಾಲೋ–ಅಪ್ ಮಾಡುವುದು – ಹೀಗೆ ಇನ್ನೂ ಕೆಲವು ಕ್ರಮಗಳನ್ನು ತೆಗೆದುಕೊಳ್ಳಲಾಯಿತು. ಮಕ್ಕಳ ಪ್ರತಿಕ್ರಿಯೆ ಮತ್ತು ಶಿಕ್ಷೆಯ (ಇದನ್ನು ಇವರು ತಮ್ಮ ಮನೆಯಲ್ಲಿ ಹೆಚ್ಚಿನದಾಗಿ ಅನುಸರಿಸುತ್ತಾರೆ) ಮೂಲಕ ಮಕ್ಕಳ ವರ್ತನೆಯನ್ನು ಸರಿಪಡಿಸಲು ಕಷ್ಟಪಡುತ್ತಿರುವ ಪೋಷಕರ ಪ್ರತಿಕ್ರಿಯೆ ಹಾಗು ತರಗತಿ ಮತ್ತು ಇತರ ಶಾಲಾ ಅಭ್ಯಾಸಗಳ ವೇಳೆ ಅಮೂಲ್ಯ ಸಮಯವನ್ನು ಕಳೆದುಕೊಂಡ ನಮ್ಮ ಅನುಭವವನ್ನು ಆಧರಿಸಿ, ನಮ್ಮ ಸಮಯವನ್ನು ಉಳಿಸಬೇಕಾದರೆ ಸಂವಾದದ ಜೊತೆಗೆ, ಮಕ್ಕಳನ್ನು ಇನ್ನೂ ಹೆಚ್ಚು ಜವಾಬ್ದಾರರನ್ನಾಗಿಸಲು ಹಾಗು ಅದಕ್ಕೂ ಮಿಗಿಲಾಗಿ ಅವರಲ್ಲಿ ಜವಾಬ್ದಾರಿಯ ಪ್ರಜ್ಞೆಯನ್ನು ಮೂಡಿಸಲು ಇನ್ನೂ ಏನಾದರೂ ಮಾಡಬೇಕು ಎಂದು ನಾವು ಭಾವಿಸಿದೆವು.

ಕೆಲ ಇತರ ಶಾಲೆಗಳು ಪ್ರಜಾತಾಂತ್ರಿಕ ಪ್ರಕ್ರಿಯೆಯ ಮೂಲಕ ಈ ಸವಾಲುಗಳಿಗೆ ಉತ್ತರ ಕಂಡುಕೊಂಡಿರುವುದು ನಮ್ಮಲ್ಲಿ ಕೆಲ ಆಲೋಚನೆಗಳನ್ನು ಉಂಟು ಮಾಡಿದವು. ಯಶಸ್ವಿಯಾಗಿ ಚುನಾವಣೆಗಳನ್ನು ನಡೆಸಿ ಎಲ್ಲಾ ತರಗತಿಗಳಿಂದ ಪ್ರತಿನಿಧಿಗಳನ್ನು ಆರಿಸುವುದು ಮತ್ತು ಚುನಾಯಿತ ಸಮಿತಿಯ ಸಭೆಗಳ ಮೂಲಕ ಶಾಸನಸಭೆಗಳನ್ನು ರೂಪಿಸುವುದು. ಶಾಲೆಯ ದಿನಚರಿ, ಸವಾಲುಗಳು (ಹೆಚ್ಚಿನದಾಗಿ ವರ್ತನೆಗೆ ಸಂಬಂಧಿಸಿದ ವಿಷಯಗಳು) ಮುಂತಾದವುಗಳನ್ನು ಸಮಿತಿಯು ಚರ್ಚಿಸಬಹುದು. ಶಾಲೆಯಲ್ಲಿ ಅಭ್ಯಾಸಗಳು ಮತ್ತು ಶಿಸ್ತನ್ನು ಜಾರಿಗೊಳಿಸುವ ಜವಾಬ್ದಾರಿಯುತ ಪಾತ್ರವನ್ನು ವಹಿಸಲು ಮಕ್ಕಳಿಗೆ ಅನುವು ಮಾಡಿಕೊಡುವುದು ಉತ್ತಮವಾದ ಅಭ್ಯಾಸವಾಗಿದೆ ಹಾಗು ಇದನ್ನು ಬಳಸಿ ಅನೇಕ ಶಾಲೆಗಳು ಮಕ್ಕಳಲ್ಲಿ ಪ್ರಜಾತಾಂತ್ರಿಕ ಮೌಲ್ಯಗಳನ್ನು ಬಿತ್ತುವಲ್ಲಿ ಯಶಸ್ವಿಯಾಗುತ್ತಿತ್ತು. ಶಾಲಾ ಆಡಳಿತದ ಈ ಮಾದರಿಯು ಅನೇಕ ಅನುಕೂಲತೆಗಳನ್ನು ಹೊಂದಿದೆ. ಈ ಮಾದರಿಯನ್ನು ಅನುಸರಿಸಿ ಅನೇಕ ವಿಚಾರಗಳನ್ನು ಯಶಸ್ವಿಯಾಗಿ ಬಗೆಹರಿಸುವ ಬಗ್ಗೆ ನಾವು ಚರ್ಚಿಸಲು ಪ್ರಾರಂಭಿಸಿದೆವು. ಹೇಗೆ ಶಾಲೆಯ ಪ್ರತಿ ವ್ಯಕ್ತಿಯೂ ದಿನನಿತ್ಯದ ಶಾಲಾ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ಹೇಗೆನ್ನುವುದು ಮೊದಲ ಪ್ರಮುಖ ಗುರಿ. ಚುನಾವಣಾ ವಿಧಾನಕ್ಕಿಂತಲೂ ಇದು ಹೆಚ್ಚು ಪರಿಣಾಮಕಾರಿಯಾಗಿ ಕಂಡು–ಬಂದಿತು. ಏಕೆಂದರೆ, ಚುನಾವಣಾ ವಿಧಾನದಲ್ಲಿ, ಮತ ಚಲಾಯಿಸಿ ಪ್ರತಿನಿಧಿಗಳನ್ನು ಆರಿಸಿದ ನಂತರ ಉಳಿದವರು ಹೆಚ್ಚಿನ ಮಟ್ಟಿಗೆ ನಿಷ್ಕ್ರಿಯರಾಗಿ ಬಿಡುತ್ತಾರೆ.

ಪ್ರಜಾಪ್ರಭುತ್ವ ಒಂದು ಜೀವನ ಮಾರ್ಗವಾಗಿದ್ದು, ಮನುಷ್ಯರಲ್ಲಿ, ಇತರರ ಜೊತೆಗಿನ ಕೆಲಸಕಾರ್ಯಗಳಲ್ಲಿ, ಮಾನವ ಸ್ವಭಾವದ ಮೇಲಿನ ನಂಬಿಕೆಯ ಮೂಲಕ ಒಂದು ಅನುಭವವು ರೂಪುಗೊಳ್ಳುತ್ತದೆ. ಇದು ಜನರಿಂದ ಪರಿಶ್ರಮವನ್ನು ಬಯಸುವ ಒಂದು ನೈತಿಕ ಮಾದರಿಯಾಗಿದೆ. ಇದು ನಮ್ಮಿಂದ ಹೊರಗಿರುವ ಒಂದು ಸಾಂಸ್ಥಿಕ ಪರಿಕಲ್ಪನೆಯಲ್ಲ. ಪ್ರಜಾಪ್ರಭುತ್ವದ ಕಾರ್ಯವು ನಿರಂತರವಾದುದಾಗಿದ್ದು, ಎಲ್ಲರೂ ಹಂಚಿಕೊಳ್ಳುವ ಮತ್ತು ಎಲ್ಲರೂ

ತಮ್ಮ ಕೊಡುಗೆ ನೀಡುವಂಥ ಮುಕ್ತವಾದ ಸೃಷ್ಟಿ ಮತ್ತು ಹೆಚ್ಚು ಮಾನವೀಯ ಅನುಭವವಾಗಿದೆ (ಜಾನ್ ಡ್ಯೂವಿ, ಕ್ರಿಯೇಟಿವ್ ಡೆಮಾಕ್ರಸಿ)

ಇದನ್ನು ಸಾಧಿಸುವುದಕ್ಕಾಗಿ ನಾವು ಶಾಲಾ ಕಾರ್ಯನಿರ್ವಹಣೆಯ ಎಲ್ಲಾ ಕ್ಷೇತ್ರಗಳನ್ನು ಒಳಗೊಂಡು, ಶಾಲೆಯ ಪ್ರತಿ ಸದಸ್ಯನನ್ನು ಪ್ರತಿನಿಧಿಸುವ ಸಮಿತಿಗಳನ್ನು ರೂಪಿಸಲು ನಿರ್ಧರಿಸಿದೆವು. ಸಂತಸದ ವಿಚಾರವೇನೆಂದರೆ, ಸುಮಾರು ಆರು ವರ್ಷಗಳ ಹಿಂದೆ ನಾವು ಇದನ್ನು ರೂಪಿಸಿದಾಗ, ಪ್ರತಿ ಮಗು ಮತ್ತು ಶಿಕ್ಷಕ ಯಾವುದಾದರೂ ಒಂದು ಸಮಿತಿಯ ಭಾಗ ಎನಿಸುವಂತೆ ಪ್ರತಿ ಸಮಿತಿಯು ಪ್ರತಿ ತರಗತಿಯಿಂದ ಪ್ರತಿನಿಧಿಗಳನ್ನು ಹೊಂದಿತ್ತು. ಶಾಲಾ ಪ್ರಕ್ರಿಯೆಗಳ ಪರಿಣಾಮಕಾರಿ ಕಾರ್ಯನಿರ್ವಹಣೆ ಮತ್ತು ಎಲ್ಲರೂ ಪಾಲಿಸ-ಬೇಕಾದ ನಿಯಮಗಳನ್ನು ರೂಪಿಸುವ ಸಲುವಾಗಿ ಚರ್ಚೆ ನಡೆಸಲು, ಸದಸ್ಯರ ಪಾತ್ರ ಮತ್ತು ಜವಾಬ್ದಾರಿಯನ್ನು ಅರ್ಥ ಮಾಡಿಕೊಳ್ಳಲು ಈ ಸಮಿತಿಗಳು ಪ್ರತಿ ವಾರ ಸಭೆ ಸೇರಿದವು. ಶಿಕ್ಷಕರು ಸಹ ಈ ಸಮಿತಿಯಲ್ಲಿದ್ದರು. ಆದರೆ ಇವರು ಚಾಲಕನ ಪಾತ್ರ ವಹಿಸಲಿಲ್ಲ. ಬದಲಾಗಿ ಸಭೆಯ ವೇಳೆ ಚರ್ಚೆಗೆ ಮಾರ್ಗದರ್ಶನ ನೀಡಿದರು. ಸಮಿತಿಯ ಸದಸ್ಯರ ನಡುವೆ ಜವಾಬ್ದಾರಿಗಳನ್ನು ಹಂಚಿದರು ಮತ್ತು ಶಾಲಾ ಸಭೆಗಳಲ್ಲಿ ತೆಗೆದುಕೊಂಡ ನಿರ್ಧಾರಗಳು ಮತ್ತು ಬೆಳವಣಿಗೆಗಳನ್ನು ಸಂವಹಿಸುವ ಕೆಲಸವನ್ನು ಮಾಡಿದರು. ಆರಂಭದಲ್ಲಿ, ಕಾರ್ಯರೂಪಕ್ಕೆ ತರಲು, ಈ ಕಲ್ಪನೆಯು ಕಷ್ಟದ ಕೆಲಸವಾಗಿ ಕಂಡುಬಂದಿತು. ಏಕೆಂದರೆ, ಈ ಸಮಿತಿಗಳನ್ನು ರೂಪಿಸಲು ಮತ್ತು ಇವುಗಳ ಕಾರ್ಯನಿರ್ವಹಣೆಗೆ ಮಕ್ಕಳು ಪ್ರಜಾತಾಂತ್ರಿಕ ಪಥದಲ್ಲಿ ಸಾಗುವಂತೆ ಅವರನ್ನು ಮನವೊಲಿ-ಸುವುದು ಅಥವಾ ಅದರ ಬಗ್ಗೆ ಅರಿವು ಮೂಡಿಸಲು ಸಾಕಷ್ಟು ಪ್ರಯತ್ನ ಬೇಕಿತ್ತು. ಈ ಪ್ರಕ್ರಿಯೆಯನ್ನು ಪಾರದರ್ಶಕ ರೀತಿಯಲ್ಲಿ ನಡೆಸಲು ಹಾಗು ಪ್ರತಿಯೊಬ್ಬನು ಪ್ರತಿ ಕ್ಷೇತ್ರದಲ್ಲಿ ದುಡಿದ ಅನುಭವವನ್ನು ಪಡೆಯಲು, ಲಾಟರಿ ವಿಧಾನವನ್ನು ಅಳವಡಿಸಲಾಯಿತು. ಹತ್ತು ಕಾರ್ಯಗಳನ್ನು ಆಧರಿಸಿ ತಂಡಗಳನ್ನು ರೂಪಿಸಲಾಯಿತು ಮತ್ತು ಈ ತಂಡಕ್ಕೆ ಸಮಿತಿಯನ್ನು ರೂಪಿಸಲು ಲಾಟರಿ ವಿಧಾನವನ್ನು ಬಳಸಿಕೊಳ್ಳಲಾಯಿತು. ಮಾಸಿಕ ಶಾಲಾ ಸಭೆಯಲ್ಲಿ, ಕಾರ್ಯಗಳನ್ನು ತಂಡಗಳ ನಡುವೆ ಅದಲುಬದಲು ಮಾಡಲಾಯಿತು. ಹೀಗೆ, ವರ್ಷದ ಕೊನೆಗೆ, ಪ್ರತಿಯೊಬ್ಬರಿಗೂ ಎಲ್ಲಾ ಹತ್ತು ಸಮಿತಿಗಳಲ್ಲಿ ಕೆಲಸ ಮಾಡುವ ಅವಕಾಶ ದೊರೆಯಿತು. ಸಮಿತಿಯ ಹೆಸರಿನಲ್ಲಿ ನಿರ್ದಿಷ್ಟ ಜವಾಬ್ದಾರಿಯನ್ನು ಹೊತ್ತುಕೊಂಡು ಸಣ್ಣ ಪಂಗಡಗಳಲ್ಲಿ ಕುಳಿತುಕೊಳ್ಳುವುದು ಮತ್ತು ಈ ನಿಟ್ಟಿನಲ್ಲಿ ಸುಗಮ ಕಾರ್ಯನಿರ್ವಹಣೆಗಾಗಿ ಕೆಲಸ ಮಾಡುವುದು ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಪಾಲಿಗೆ ತುಂಬಾ ರೋಮಾಂಚಕ ಅನುಭವವೆನಿಸಿತು.ಶಾಲೆಯ ವಿವಿಧ ವಿಭಾಗಗಳ ಮೇಲೆ ಬೆಳಕು ಹರಿಸುವುದಕ್ಕಾಗಿ ಈ ಸಮಿತಿಗಳನ್ನು ರೂಪಿಸಲಾಗಿತ್ತು. ಹೊಸ ವಿಚಾರಗಳೊಂದಿಗೆ ದಕ್ಷತೆಯನ್ನು ತರುವುದು, ಎಲ್ಲಾ ವಿದ್ಯಾರ್ಥಿಗಳ ಪಾಲ್ಗೊಳ್ಳುವಿಕೆ (ಎಲ್ಲಾ ವರ್ಗಗಳಿಂದ) ಮತ್ತು ಅವರು ವಿಷಯ ವಿನ್ಯಾಸಗೊಳಿಸಿದಂತೆಯೇ ಹೆಚ್ಚು ಜವಾಬ್ದಾರರಾಗುವುದು – ಇದು ವಿವಿಧ ವಲಯಗಳನ್ನು ಆರಿಸುವುದರ ಹಿಂದಿನ ಉದ್ದೇಶವಾಗಿತ್ತು. ಈ ಕೆಳಗೆ ಹತ್ತು ಸಮಿತಿಗಳು ಮತ್ತು ಅವುಗಳ ಕಾರ್ಯಗಳನ್ನು ಪಟ್ಟಿ ಮಾಡಲಾಗಿದೆ.

1. ಅಸೆಂಬ್ಲಿ ಸಮಿತಿ: ಶಾಲೆಯ ಪ್ರತಿನಿತ್ಯದ ಸಭೆಗಳಿಗೆ ಹೊಣೆಗಾರಿಕೆ – ಬೆಳಗ್ಗಿನ ಸಭೆ, ತರಗತಿಯೊಳಗಿನ ಸಭೆ, ಶಿಕ್ಷಕರ ಸಭೆ, ಸಂಜೆಯ ಸಭೆ.
2. ಆಹಾರ ಸಮಿತಿ: ಮಕ್ಕಳ ಮಧ್ಯಾಹ್ನದ ಊಟ (ಎಂ.ಡಿ.ಎಂ) ಮತ್ತು ಹಾಲು/ಮೊಟ್ಟೆಯ ಜವಾಬ್ದಾರಿ.
3. ಗ್ರಂಥಾಲಯ ಸಮಿತಿ: ಶಾಲೆಯ ಮತ್ತು ತರಗತಿ ಕೊಠಡಿಯ ಗ್ರಂಥಾಲಯದ ನಿರ್ವಹಣೆ.
4. ಶಾಲಾ ಉದ್ಯಾನವನ ಸಮಿತಿ: ಗಿಡಗಳನ್ನು ನೆಡುವುದು ಮತ್ತು ಕಿಚನ್ ಗಾರ್ಡನ್‌ನ ನಿರ್ವಹಣೆ.
5. ಕ್ರೀಡಾ ಸಮಿತಿ: ಆಟಗಳು ಮತ್ತು ಕ್ರೀಡೆಗಳಿಗೆ ಜವಾಬ್ದಾರಿ.
6. ಸ್ವಚ್ಛತೆ ಮತ್ತು ನೈರ್ಮಲ್ಯ ಸಮಿತಿ: ತರಗತಿ ಕೊಠಡಿಗಳು, ಶೌಚಾಲಯ ಮತ್ತು ವಠಾರದ ಇತರ ಪ್ರದೇಶಗಳ ಸ್ವಚ್ಛತೆ ಮತ್ತು ವೈಯಕ್ತಿಕ ನೈರ್ಮಲ್ಯದ ಹೊಣೆಗಾರಿಕೆ.
7. ಕಾರ್ಯಕ್ರಮ ಮತ್ತು ಆಚರಣೆ ಸಮಿತಿ: ರಾಷ್ಟ್ರೀಯ ಹಬ್ಬಗಳು, ಬಾಲಶೋಧ ಮೇಳಗಳು, ಸಬ್ಜೆಕ್ಟ್ ವೀಕ್ ಮುಂತಾದ ಶಾಲಾ ಕಾರ್ಯಕ್ರಮಗಳ ನಿರ್ವಹಣೆ.
8. ಸುರಕ್ಷಾ ಸಮಿತಿ: ಮಕ್ಕಳ ದೈಹಿಕ ಸುರಕ್ಷತೆಯ (ಉದಾಹರಣೆಗೆ, ಕಾರಿಡಾರ್‌ನಲ್ಲಿ ಹೋಗುವಾಗ) ಜವಾಬ್ದಾರಿ.
9. ಶಾಲಾ ನಿಯಮಗಳ ಸಮಿತಿ: ಶಾಲೆ ಮತ್ತು ತರಗತಿ ಕೊಠಡಿಗಳಲ್ಲಿ ನಿಯಮಗಳನ್ನು ಜಾರಿಗೊಳಿಸುವ ಹಾಗು ಜಾರಿಯ ಕುರಿತು ನಿಗಾ ವಹಿಸುವ ಜವಾಬ್ದಾರಿ ಹೊಂದಿರುವ ಸಮಿತಿ.
10. ಶಾಲಾ ಪರಿಸರ ಸಮಿತಿ: ತರಗತಿ ಕೊಠಡಿಗಳು ಮತ್ತು ಹೊರ ಆವರಣದಲ್ಲಿ ಸೌಂದರ್ಯ ಮತ್ತು ಅಚ್ಚುಕಟ್ಟನ್ನು ಪಾಲಿಸುವ ಜವಾಬ್ದಾರಿ ಹೊಂದಿರುವ ಸಮಿತಿ.

ಕಳೆದ ವರ್ಷ, ಬಹುತೇಕ ಸಮಾನ ಕಾರ್ಯಗಳಿದ್ದ 9 ಮತ್ತು 10ನೇ ಸಂಖ್ಯೆಯ ಸಮಿತಿಗಳನ್ನು ವಿಲೀನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳಲಾಯಿತು. ಹೀಗಾಗಿ, ಪ್ರಸ್ತುತ ಒಂಬತ್ತು ಕಾರ್ಯಗಳು ಅಥವಾ ಸಮಿತಿಗಳು ಚಾಲ್ತಿಯಲ್ಲಿವೆ.

**ನಮಗೆ ಹೇಗೆ ಪ್ರಯೋಜನಕಾರಿಯಾಯಿತು?**

ಶಾಲೆಯ ಕೆಲಸವು ಸುಗಮವಾಗಿ ನಡೆಯಲು ಶುರುವಾಯಿತು. ಉದಾಹರಣೆಗೆ, ಶಾಲೆಯ ವಾತಾವರಣವನ್ನು ಸ್ವಚ್ಛವಾಗಿಡಲು ಮತ್ತು ಉತ್ತಮವಾಗಿ ಕಾಪಾಡಲು, ಎಲ್ಲಾ ತರಗತಿಗಳಿಂದ ಪ್ರಾತಿನಿಧಿತ್ವ ಹೊಂದಿದ್ದ ಸಮಿತಿಯ ಸದಸ್ಯರು, 'ಪೆನ್ಸಿಲ್ ಮೊನಚುಗೊಳಿಸುವಾಗ ಕಸದ ಡಬ್ಬಿ ಬಳಸಿ' – ಹೀಗೆ ಇತರರಿಗೆ ಸ್ವಚ್ಛತೆಯನ್ನು ಕಾಪಾಡಲು ಹೇಳಿದರು.

ಎಂ.ಡಿ.ಎಂ ಸಮಿತಿಯ ಸದಸ್ಯರು, ಅಚ್ಚುಕಟ್ಟಾಗಿ ಕುಳಿತುಕೊಳ್ಳುವ ವ್ಯವಸ್ಥೆಯನ್ನು ಮಾಡುವುದು, ಮೇಲ್ವಿಚಾರಣೆ, ಆಹಾರವನ್ನು ಹಾಳುಮಾಡುವ ಮಕ್ಕಳ ಜೊತೆ ಚರ್ಚೆ ಮಾಡುವುದು, ತರಕಾರಿಗಳನ್ನು ತಿನ್ನಲು ಅವರನ್ನು ಪ್ರೇರೇಪಿಸುವುದು ಮುಂತಾದ ಕೆಲಸಗಳನ್ನು ಮಾಡಲು ಪ್ರಾರಂಭಿಸಿದರು. ಸಣ್ಣ ತರಗತಿಗಳ ಮಕ್ಕಳು ಹಿರಿಯ ಪ್ರಾಥಮಿಕ ಮಕ್ಕಳು ಹಾಗು ಶಿಕ್ಷಕರು ಸಹ ತರಕಾರಿಗಳನ್ನು ಹಾಳುಮಾಡದಂತೆ ನಿಗಾ ವಹಿಸುತ್ತಿದ್ದುದು ಆಸಕ್ತಿಕರವಾಗಿತ್ತು. ಮೆನು ಮತ್ತು ಪ್ರಮಾಣದ ಆಧಾರದಲ್ಲಿ ಬಳಸಿದ ವಸ್ತುಗಳು, ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳ ಹಾಜರಾತಿ ಹಾಗು ಆ ದಿನ ಹಾಳು ಮಾಡಿದ ಆಹಾರದ ಪ್ರಮಾಣವನ್ನು ಪ್ರದರ್ಶಿಸುವುದು ಜಾಗೃತಿಯನ್ನು ರೂಪಿಸಿತು.

ಕಾರ್ಯಕ್ರಮಗಳು ಮತ್ತು ಸಂಭ್ರಮಾಚರಣೆಗಳನ್ನು ಎಷ್ಟು ಅರ್ಥಪೂರ್ಣವಾಗಿ ಆಚರಿಸಬಹುದು ಎಂಬುದಾಗಿ ಕಾರ್ಯಕ್ರಮದ ಮೊದಲೇ ಚರ್ಚೆ ನಡೆಸುವುದು, ದಿನನಿತ್ಯದ ಸಭೆಗಳಲ್ಲಿ ವಿವಿಧ ಚಟುವಟಿಕೆಗಳನ್ನು ಅಳವಡಿಸಿಕೊಳ್ಳುವುದು, ಸುರಕ್ಷತೆಯ ಕುರಿತು ಅನುಸರಿಸಬೇಕಾದ ವಿಧಾನಗಳನ್ನು ಚರ್ಚಿಸುವುದು ಮತ್ತು

ನಿರ್ಧರಿಸುವುದು ಮುಂತಾದ ವಿಚಾರಗಳು ಅತ್ಯಂತ ಉಪಯುಕ್ತವೆನಿಸಿದವು. ಶಾಲೆಯು ಎದುರಿಸುತ್ತಿರುವ ಪ್ರಸ್ತುತ ಸವಾಲುಗಳನ್ನು ಚರ್ಚಿಸಲು ಮತ್ತು ಪರಿಹಾರ ಕಂಡು–ಹಿಡಿಯುವುದಕ್ಕಾಗಿ ಶಾಲಾ ನಿಯಮಗಳ ಸಮಿತಿಯು ಸಂಯೋಜಿಸುವ 'ಮಹಾಸಭಾ' ಎನ್ನುವ ಮಾಸಿಕ ಸಭೆಗಳನ್ನು ನಡೆಸಲಾಯಿತು. ಈ ಸಭೆಗಳಲ್ಲಿ, ಮಕ್ಕಳ ವರ್ತನೆಯ ದೂರುಗಳ ಜೊತೆಗೆ, ಕೆಲವು ಆಸಕ್ತಿಕರ ಚರ್ಚೆಗಳು ಮತ್ತು ಮಕ್ಕಳ ಕೆಲವು ಬೇಡಿಕೆಗಳು ಸಹ ಕೇಳಿಬಂದವು. ಉದಾಹರಣೆಗೆ, ಗುರುವಾರದಂದು ನೀಡುವ ಬಿಸಿ ಬೇಳೆ ಬಾತ್ ಅನ್ನು ಹೆಚ್ಚಿನ ಮಕ್ಕಳು ಇಷ್ಟಪಡದೆ ಇರುವುದರಿಂದ ಅದನ್ನು ಮೆನುವಿನಿಂದ ತೆಗೆದು ಹಾಕಲು, ಚಪ್ಪಲಿಗಳ ಬದಲಿಗೆ ಶೂಗಳನ್ನು ಏಕೆ ನೀಡಲಾಗಿಲ್ಲ, ಆರನೇ ತರಗತಿಯಿಂದ ಮಾತ್ರವೇ ಮಕ್ಕಳಿಗೆ ಹಿಂದಿಯನ್ನು ಕಲಿಸಲಾಗುತ್ತಿದ್ದು, ಇದಕ್ಕಿಂತ ಕೆಳಗಿನ ವರ್ಗದವರಿಗೆ ಯಾಕೆ ಈ ಭಾಷೆಯನ್ನು ಕಲಿಸಲಾಗುತ್ತಿಲ್ಲ, ವಾರದಲ್ಲಿ ಗ್ರಂಥಾಲಯ ಅಥವಾ ಕ್ರೀಡಾ ಅವಧಿಗಳನ್ನು ಹೆಚ್ಚಿಸಲು ಬೇಡಿಕೆ ಇತ್ಯಾದಿ.

ಒಬ್ಬ ಜವಾಬ್ದಾರಿಯುತ ನಾಗರಿಕನಿಂದ ನಾವು ಬಯಸುವ ಸ್ವಭಾವಗಳಾದ ಸಹಕಾರ, ಸಂಯೋಜನೆ, ಮಾಲೀಕತ್ವ, ಜವಾಬ್ದಾರಿ, ಪಾಲ್ಗೊಳ್ಳುವಿಕೆ ಮತ್ತು ಬದ್ಧತೆಗೆ ಸಂಬಂಧಿಸಿದಂತೆ ಧನಾತ್ಮಕ ಬದಲಾವಣೆಗಳು ಉಂಟಾಗಿರುವುದನ್ನು ನಾವು ಗಮನಿಸಿದೆವು. ಇತ್ತೀಚೆಗೆ ನಮ್ಮ ಶಾಲೆಯಲ್ಲಿ ಗಣರಾಜ್ಯೋತ್ಸವ ದಿನಾಚರಣೆ–ಯಂದು ಒಬ್ಬ ವಿದ್ಯಾರ್ಥಿಯ ಭಾಷಣವನ್ನು ಕೇಳಿ ನನಗೆ ನಿಜಕ್ಕೂ ಸಂತೋಷವಾಯಿತು. ಆತ ಭಾರತದ ಸಂವಿಧಾನವನ್ನು ನಮ್ಮ ಶಾಲೆಯ ನೀತಿ ಸಂಪ್ರದಾಯಗಳ ಜಾರಿ ಮತ್ತು ಸಮಿತಿಗಳ ಕಾರ್ಯನಿರ್ವಹಣೆಗೆ ಹೋಲಿಸಿದ್ದನು. ನಮ್ಮ ಪ್ರಯತ್ನಗಳು ಸರಿಯಾದ ದಿಸೆಯಲ್ಲಿಯೇ ಸಾಗಿದೆ ಎಂಬುದನ್ನು ಇದು ಸೂಚಿಸುತ್ತದೆ.

---



**ಅನಿಲ್ ಎಸ್. ಅಂಗಡಿಕಿ** ಅವರು 2012ರಿಂದ ಅಜೀಂ ಪ್ರೇಮ್‌ಜಿ ಫೌಂಡೇಷನ್ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಯಾದಗಿರಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು anil.angadiki@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೊನ್ಸಾ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

**ಪೌರತ್ವ ಶಿಕ್ಷಣವನ್ನು ಅಲ್ಪಕಾಲೀನವಾಗಿ ನೀಡಲಾಗದು. ಇದನ್ನು ದೀರ್ಘಕಾಲೀನವಾಗಿ, ಸ್ಥಿರವಾಗಿ ಮತ್ತು ಪುನರಾವರ್ತಿತವಾಗಿ ಮಾಡಬೇಕು. ಬೇರೆ ಬೇರೆ ಪಂಗಡಗಳಲ್ಲಿ ಬೇರೆ ಬೇರೆ ವಿಚಾರಗಳು/ಪರಿಕಲ್ಪನೆಗಳು ಯಶಸ್ಸು ಸಾಧಿಸುತ್ತವೆ. ಯಾವುದು ಯಶಸ್ವಿಯಾಗುತ್ತದೆ ಅಥವಾ ಯಾವುದು ಯಶಸ್ವಿಯಾಗುವುದಿಲ್ಲ ಎಂದು ಹೇಳಲು ನಿರ್ದಿಷ್ಟವಾದ ಮಾದರಿ ಎನ್ನುವುದು ಇಲ್ಲ.**

**– ಉಮಾಶಂಕರ್ ಪೆರಿಯೋಡಿ, ಸೃಜನಶೀಲ ಕಾರ್ಯಾಗಾರಗಳ ಮೂಲಕ ಪೌರತ್ವ ಪು 105**

# ಶಾಲೆಯಲ್ಲಿ ಪ್ರಜೆಗಳು | ಪರಿಪಾಠ ಮತ್ತು ಪರ್ಯಾಲೋಚನೆ

ಅನಿಲ್ ಔಷಾ ಮತ್ತು ಸಂಜಯ್ ಡೇನಿಯಲ್

'ಭಾರತವನ್ನು ಎಲ್ಲಿಯವರೆಗೆ ಒಗ್ಗೂಡಿಸಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ಅದೊಂದು ರಾಷ್ಟ್ರವಾಗಲು ಸಾಧ್ಯವಿಲ್ಲ' – ಹೀಗೆಂದು ಆಧುನಿಕ ಭಾರತದ ನಿರ್ಮಾತೃಗಳಾದ ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ರವೀಂದ್ರನಾಥ್ ಟಾಗೋರ್ ಅವರಂಥವರು ಬಲವಾಗಿ ನಂಬಿದ್ದರು. ಇನ್ನೊಂದು ಅರ್ಥದಲ್ಲಿ ಹೇಳಬೇಕೆಂದರೆ ಭಾರತವು ನಿರ್ಮಾಣ ಹಂತದಲ್ಲಿರುವ ರಾಷ್ಟ್ರ ಎಂಬುದು ಅವರ ನಂಬಿಕೆಯಾಗಿತ್ತು. ಇದರ ನಿಜಾರ್ಥವೇನೆಂದರೆ ರಾಷ್ಟ್ರಗಳೆಂದರೆ ಕೇವಲ ಭೌಗೋಳಿಕವಾದ ಗಡಿಗಳಿಂದ, ಕಾವಲು ನಿಂತಿರುವ ಸೇನೆಗಳಿಂದ ಅಥವಾ ಚುನಾಯಿತ ಪ್ರತಿನಿಧಿಗಳಿಂದ ರೂಪುಗೊಂಡಿರುವುದಲ್ಲ. ಬದಲಾಗಿ ಅದು ರೂಪುಗೊಂಡಿರುವುದು ಪ್ರಜೆಗಳಿಂದ: ತಮ್ಮ ಯೋಚನೆ ಮತ್ತು ಚೈತನ್ಯದಲ್ಲಿ ಶ್ರೇಷ್ಠತೆ ಹಾಗು ವಿವೇಚನೆಯಿಂದ ಕೂಡಿರುವ ಪ್ರಜೆಗಳನ್ನು ರೂಪಿಸಲಾಗುತ್ತದೆಯೇ ಹೊರತು ಅವರು ಕೇವಲ ಒಂದು ರಾಷ್ಟ್ರದಲ್ಲಿ ಹುಟ್ಟಿದ್ದಾರೆ ಎಂದಲ್ಲ. ಕುಟುಂಬ, ಧರ್ಮ, ಶಾಲೆಗಳು, ಸಮಾನಮನಸ್ಕ ಗುಂಪುಗಳು, ರಾಜಕೀಯ ಸಂಘಟನೆಗಳು, ಮಾಧ್ಯಮ ಇತ್ಯಾದಿ ಕೆಲವು ಸಂಸ್ಥೆಗಳು ನಮ್ಮ ದಿನನಿತ್ಯದ ಬದುಕಿನ ಮೇಲೆ ಪ್ರಭಾವವನ್ನು ಬೀರುತ್ತವೆ. ನಾವು ಸಾಮಾನ್ಯವಾಗಿ ರಾಷ್ಟ್ರೀಯತೆ, ಸಾರ್ವತ್ರಿಕ ವಯಸ್ಕ ಪೌರತ್ವ ಮತ್ತು ಚುನಾವಣೆಗಳು ಇತ್ಯಾದಿ ವಿಶಾಲ ರಾಜಕೀಯ ಚಿಂತನೆಗಳೊಂದಿಗೆ ಪೌರತ್ವದ ಪರಿಕಲ್ಪನೆಯನ್ನು ಕಾಣುತ್ತೇವೆ; ಆದರೆ ನಿಜಾರ್ಥದಲ್ಲಿ ನಾವು ನಮ್ಮ ಕುಟುಂಬಗಳಲ್ಲಿ ಮತ್ತು ನಮ್ಮ ಶಾಲೆಗಳಲ್ಲಿ ಜವಾಬ್ದಾರಿಯುತ ಸದಸ್ಯರಾಗುವುದನ್ನೇ ಮರೆಯುತ್ತೇವೆ. ಶಾಲೆಗಳಲ್ಲಿ ಅನುಸರಿಸುವ ಕೆಲವು ಪರಿಪಾಠಗಳಿಂದ ಉತ್ತಮ ಪ್ರಜೆಯ ಗುಣಗಳನ್ನು ಹೇಗೆ ಪೋಷಿಸಬಹುದು ಎಂಬುದರ ಮೇಲೆ ಈ ಲೇಖನವು ಬೆಳಕು ಚೆಲ್ಲುತ್ತದೆ.

**ಪ್ರಜೆಗಳಾಗಿ ಮಕ್ಕಳ ವಿಕಸನ**

ಇದು ಬಳ್ಳಾರಿ ಜಿಲ್ಲೆಯ ಸರ್ಕಾರಿ ಶಾಲೆಗಳ ಕಥೆ. ಇಲ್ಲಿ ಶಾಲಾ ಸಂಸತ್ತನ್ನು ರಚಿಸುವುದು ಸಾಮಾನ್ಯ ಪದ್ಧತಿಯಾಗಿದೆ. ಪ್ರತಿ ಮಗುವಿಗೆ ಇಲ್ಲೊಂದು ಪಾತ್ರವನ್ನು ನಿಯೋಜಿಸಲಾಗುತ್ತದೆ. ಅದರಂತೆ ಅವರು ಚರ್ಚೆ ಮಾಡಬಹುದು, ಸಂವಾದ ನಡೆಸಬಹುದು ಮತ್ತು ಶಾಲೆಗೆ ಸಂಬಂಧಿಸಿದ ಕೆಲಸಗಳನ್ನು ಜಾರಿಗೆ ತರಬಹುದು. ಆರೋಗ್ಯ ಸುರಕ್ಷಾ ಅಭಿಯಾನ ಎಂಬ ಯೋಜನೆಯ ಅಡಿಯಲ್ಲಿ ಇಲ್ಲಿನ ಶಾಲೆಗಳು ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಜೊತೆಗೆ ಕೆಲಸ ಮಾಡುತ್ತವೆ. ಇದರಿಂದಾಗಿ ಗ್ರಾಮ ಪಂಚಾಯತ್ ಗ್ರಂಥಾಲಯಗಳು ಈ ಯೋಜನೆಯಲ್ಲಿ ಕೈಜೋಡಿಸುವಂತಾಗಿದೆ. ಇದರ ಫಲವಾಗಿ ಗ್ರಾಮೀಣಾಭಿವೃದ್ಧಿ ಇಲಾಖೆ ಮತ್ತು ಗ್ರಾಮ ಪಂಚಾಯತಿಗಳು ಆರಂಭಿಸಿದ ಜಂಟಿ ಕಾರ್ಯಕ್ರಮ ಓದುವ ಬೆಳಕು. ಗ್ರಾಮೀಣ ಕರ್ನಾಟಕದ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಮಕ್ಕಳನ್ನು ಓದು ಮತ್ತು ಕಲಿಕೆಯಲ್ಲಿ ತೊಡಗಿಸುವಂತೆ ಮಾಡುವುದು ಈ ಕಾರ್ಯಕ್ರಮದ ಉದ್ದೇಶ. ಇಂತಹ ಒಂದು ಕಾರ್ಯಕ್ರಮವು ನಮ್ಮ ಸಂವಿಧಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಪಂಚಾಯತಿಗಳಿಗೆ ಒದಗಿಸುವ ಅವಕಾಶವನ್ನು ನಮಗೆ ನೀಡಿತು. ಇಂತಹ ಒಂದು ಕ್ರಮವು ನಮ್ಮ ಅನೇಕ ಮಂದಿ ಶಿಕ್ಷಕರಿಗೆ ಉತ್ತೇಜನಕಾರಿಯಾಗಿತ್ತು. ಹಾಗಾಗಿ ತಮ್ಮ ವಿದ್ಯಾರ್ಥಿಗಳಲ್ಲಿ ಪೌರತ್ವದ ಮೌಲ್ಯಗಳನ್ನು ತಿಳಿಸುವ ಅಂಶಗಳನ್ನು ಒಳಗೊಂಡ ಹೊಸ ಬೋಧನಾ ವಿಧಾನಗಳನ್ನು ವಿನ್ಯಾಸ ಮಾಡುವ ಅಪರೂಪದ ಅವಕಾಶವನ್ನು ಒದಗಿಸಿತು.

ಹೊಸಪೇಟೆಯ ಹೊಸೂರು ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರಾದ ಮಂಜಪ್ಪ ಅವರು ಶಾಲಾ ಪಂಚಾಯತಿ ರಚಿಸುವ ಹೊಸ ಕಾರ್ಯಕ್ರಮವನ್ನು ಆರಂಭಿಸಿದರು. ವಿನೋಬಾ ಭಾವೆ ಕ್ಲಸ್ಟರ್‌ಗೆ ಸೇರಿದ ನಾನಾ ಶಾಲೆಗಳ ಮಕ್ಕಳನ್ನು ಒಳಗೊಂಡ ತಂಡವನ್ನು ರಚಿಸುವಲ್ಲಿ ಸಮರ್ಥರಾದ ಅವರು, ತಮ್ಮ ಸುತ್ತಮುತ್ತಲಿನ ಪ್ರದೇಶಗಳಲ್ಲಿ ತೆರೆದ ಚರಂಡಿ, ಸೋರುತ್ತಿರುವ ನಲ್ಲಿಗಳು, ಸಾರ್ವಜನಿಕ ಸ್ಥಳಗಳಲ್ಲಿ ಕಸಗಳನ್ನು ಸುರಿಯುತ್ತಿರುವುದು ಇತ್ಯಾದಿ ಅಂಶಗಳನ್ನು ಗಮನಿಸುವಂತೆ ಮಕ್ಕಳಿಗೆ ತಿಳಿಸಿದರು. ಮಕ್ಕಳು ಸಮುದಾಯದಿಂದ ಮಾಹಿತಿಯನ್ನು ಸಂಗ್ರಹಿಸಿದರು. ಇದು ಮಕ್ಕಳು, ಶಿಕ್ಷಕರು ಮತ್ತು ಪಂಚಾಯತಿ ಅಧಿಕಾರಿಗಳ ನಡುವೆ ಮಾತುಕತೆಗೆ, ಚರ್ಚೆಗೆ ದಾರಿ ಮಾಡಿಕೊಟ್ಟಿತು. ಇದು ಅವರಿಗೆ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಲು ಅವಕಾಶವನ್ನು ನೀಡಿದ್ದು ಮಾತ್ರವಲ್ಲದೆ, ತಮ್ಮ ಸುತ್ತ ಇರುವ ಸಮಸ್ಯೆಗಳನ್ನು ಅರಿತುಕೊಳ್ಳಲೂ ಸಾಧ್ಯವಾಯಿತು. ಪ್ರತಿಯೊಂದು ಮಗುವಿನ ಅಭಿಪ್ರಾಯವನ್ನು ಗೌರವ ಮತ್ತು ಘನತೆಯಿಂದ ಕಂಡಿದ್ದು ಬಹುಮುಖ್ಯ ಸಂಗತಿಯಾಗಿತ್ತು. ಬಳಿಕ ಅಧಿಕಾರಿಗಳ ಸಹಕಾರದೊಂದಿಗೆ ಶಾಲಾ ಆವರಣವನ್ನು ಸ್ವಚ್ಛ ಮಾಡಲು ಮತ್ತು ಸೋರುತ್ತಿರುವ ನಲ್ಲಿಗಳನ್ನು ದುರಸ್ತಿ ಮಾಡಲು ಮಕ್ಕಳು ತಮ್ಮಲ್ಲಿಯೇ ಸಂಘಟಿತರಾದರು.

**ಚಿಂತನಶೀಲ ವೃತ್ತಿಪರರಾಗಿ ಮಕ್ಕಳು**

ಕೂಡ್ಲಿಗಿ ತಾಲೂಕಿನ ಕೊಟ್ಟೂರಿನಲ್ಲಿರುವ ಅಂಬೇಡ್ಕರ್ ಕಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರಾದ ಶಿವಕುಮಾರ್ ಮತ್ತು ಅಕ್ಕಮಹಾದೇವಿ ಅವರು ಒಂದು ಕಿರು ನಾಟಕವನ್ನು ರಚಿಸಿದರು. ಈ ನಾಟಕದಲ್ಲಿ ಮಕ್ಕಳನ್ನು ರೈಲ್ವೆ ನಿಲ್ದಾಣದ ಹಾಗು ಅಂಚೆ ಕಚೇರಿಯ ನೌಕರರಾಗಿ ಮತ್ತು ಸರ್ಕಾರಿ ಆಸ್ಪತ್ರೆಯಲ್ಲಿನ ವೈದ್ಯರಾಗಿ ಚಿತ್ರಿಸಲಾಗಿತ್ತು. ಈ ನಾಟಕವನ್ನು ಸಿದ್ಧಪಡಿಸುವಾಗ ಮಕ್ಕಳು ಆಸ್ಪತ್ರೆಯಲ್ಲಿನ ಸ್ವಚ್ಛತೆಯ ಅಂಶಗಳ ಬಗ್ಗೆ ಹೆಚ್ಚು ಗಮನ ಹರಿಸಿದರು. ಇದನ್ನು ಅಭಿನಯಿಸಿ ತೋರಿಸಿದ ಮಕ್ಕಳು ಆಸ್ಪತ್ರೆಗಳು ಸದಾ ಜನರಿಗೆ ಸಹಾಯ ಮಾಡಬೇಕು ಎಂಬ ಬಲವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಬಳಿಕ ಶಿಕ್ಷಕರು ಮಕ್ಕಳನ್ನು ಸ್ಥಳೀಯ ಆಸ್ಪತ್ರೆ ಮತ್ತು ರೈಲ್ವೆ ನಿಲ್ದಾಣಗಳಿಗೆ ಕರೆದುಕೊಂಡು ಹೋದರು ಮತ್ತು ತರಗತಿಯಲ್ಲಿ ತಾವು ಅಂದುಕೊಂಡಂತೆ ಈ ಸ್ಥಳಗಳು ಸ್ವಚ್ಛತೆಯಿಂದ ಕೂಡಿರದೇ ಇರುವುದನ್ನು ಕಂಡು ಮಕ್ಕಳು ಆಘಾತಕ್ಕೆ ಒಳಗಾದರು. ಈ ತಾಣಗಳನ್ನು ಸರಿಯಾಗಿ ಗಮನಿಸಿ ಇವುಗಳನ್ನು ಯಾಕೆ ಸ್ವಚ್ಛವಾಗಿ

ಇಡಲಾಗಿಲ್ಲ ಎಂಬುದನ್ನು ಯೋಚನೆ ಮಾಡುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಿದರು. ಶಾಲೆಗೆ ಮರಳಿದ ವಿದ್ಯಾರ್ಥಿಗಳು ಕಂಡುಕೊಂಡ ಸತ್ಯ ಗಮನಾರ್ಹವಾಗಿತ್ತು; ಈ ಸ್ಥಳಗಳು ಯಾಕೆ ಸ್ವಚ್ಛವಾಗಿಲ್ಲ ಎಂದರೆ ಜನರಿಗೆ ಇವು ತಮ್ಮ ಸ್ವಂತದ್ದು ಎಂಬ ಜವಾಬ್ದಾರಿಯೇ ಬಂದಿಲ್ಲ, ಆಸ್ಪತ್ರೆ ಮತ್ತು ನಿಲ್ದಾಣ ತಮಗೆ ಸೇರಿದ್ದಲ್ಲ ಎಂದು ಜನರು ಭಾವಿಸಿದ್ದು ಕಾರಣವಾಗಿತ್ತು. ಇದು ಶಿಕ್ಷಕರಾದ ಶಿವಕುಮಾರ್ ಮತ್ತು ಅಕ್ಕಮಹಾದೇವಿ ಅವರಲ್ಲಿ ಹೊಸ ಚಿಂತನೆಯನ್ನು ಹುಟ್ಟು ಹಾಕಿತು. ಮಕ್ಕಳಿಗೆ ಈ ಶಾಲೆ ತಮ್ಮದು ಎನ್ನುವಂತೆ ಮಾಡಬೇಕು ಎಂಬ ಯೋಚನೆಗೆ ಅವರು ಚಾಲನೆಯನ್ನು ನೀಡಿದರು. ಮಕ್ಕಳು ಈ ಪರಿಕಲ್ಪನೆಯನ್ನು ಅರ್ಥ ಮಾಡಿಕೊಂಡಾಗ ನಿಜಕ್ಕೂ ಅಚ್ಚರಿ ಕಾದಿತ್ತು; ಅವರು ತಮ್ಮ ಶಾಲಾ ಆವರಣಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲು ಆರಂಭಿಸಿದರು. ಅಷ್ಟು ಮಾತ್ರವಲ್ಲದೆ ತಮ್ಮ ಶಾಲಾ ಆವರಣದೊಳಗೆ ಕಸಗಳನ್ನು ಹಾಕದಿರುವಂತೆ ಹಿರಿಯರಿಗೂ ತಾಕೀತು ಮಾಡಿದರು. ಇಂತಹ ಮಾಲೀಕತ್ವದ ಪ್ರಜ್ಞೆ ಅವರನ್ನು ಅವರ ಶಾಲೆಗಳ ನಿಜವಾದ 'ನಾಗರಿಕ'ರನ್ನಾಗಿ ಮಾಡಿತು ಎಂಬುದು ವಿಶೇಷ.

**ಕ್ಷೇತ್ರದಲ್ಲಿ ಪರಿಣಾಮಕಾರಿಯಾಗುವ ಬಗೆ**

ಅಜೀಂ ಪ್ರೇಮ್‌ಜಿ ಫೌಂಡೇಷನ್ ನಡೆಸಿದ ಸಾಮಾಜಿಕ ವಿಜ್ಞಾನ ಕಾರ್ಯಾಗಾರದಲ್ಲಿ ಪಾಲ್ಗೊಂಡ ಬಳಿಕ, ನಾವು 'ಪೌರತ್ವ'ದ ಪರಿಕಲ್ಪನೆಯ ಬಗ್ಗೆ ಚರ್ಚೆ ಮಾಡುವ ಸಾಮರ್ಥ್ಯವನ್ನು ಪಡೆದೆವು. ಪೌರತ್ವದ ವಿಷಯದ ಬಗ್ಗೆ ಸ್ವಯಂಸೇವಕ ಶಿಕ್ಷಕ ವೇದಿಕೆ (Volunteer Teacher Forums (VTFs) ಇದನ್ನು ಏರ್ಪಡಿಸಿತ್ತು. ಬೇವೂರು ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕ ರವೀಂದ್ರ ಬಿ. ಅವರು ತರಗತಿಯಲ್ಲಿ ತಮ್ಮ ಬೋಧನಾ ವಿಧಾನದ ಬಗ್ಗೆ ಚರ್ಚಿಸುವುದನ್ನು ಆಯ್ಕೆ ಮಾಡಿಕೊಂಡರು. ಆರು ಮತ್ತು ಏಳನೇ ತರಗತಿಯ ಪೌರನೀತಿ ಪಠ್ಯಪುಸ್ತಕದಿಂದ ಸಾರ್ವಜನಿಕ ಆಸ್ತಿ ಕುರಿತ ಪಾಠವನ್ನು ಬೋಧಿಸುವ ಸಂದರ್ಭದಲ್ಲಿ ಅವರು ಕೆಲವು ಪ್ರಶ್ನೆಗಳನ್ನು ಕೇಳಿದರು; ಸಾರ್ವಜನಿಕರನ್ನು ಯಾರು ರೂಪಿಸುತ್ತಾರೆ? ಸಾರ್ವಜನಿಕ ಆಸ್ತಿ ಎಂದರೆ ಏನು? ತೆರಿಗೆದಾರ ಎಂದರೆ ಯಾರು? ಮಕ್ಕಳು ಈ ಎಲ್ಲ ಪ್ರಶ್ನೆಗಳ ಬಗ್ಗೆ ಚರ್ಚೆ ಮಾಡಿ ಈ ರೀತಿ ಉತ್ತರವನ್ನು ನೀಡಿದರು; ಎಲ್ಲರನ್ನೂ ಸೇರಿಸಿದರೆ ಮಾತ್ರ ಸಾರ್ವಜನಿಕರಾಗುತ್ತಾರೆ ಮತ್ತು ಎಲ್ಲರೂ ತೆರಿಗೆಯನ್ನು ಪಾವತಿ ಮಾಡಿದಾಗ ಅಂತಹ ಆಸ್ತಿಯು ಸಹಜವಾಗಿ ಎಲ್ಲರಿಗೆ ಸೇರಿದ್ದಾಗುತ್ತದೆ.

ಮರುದಿನ ಮಕ್ಕಳು ತಮ್ಮ ಶಿಕ್ಷಕರೊಡಗೂಡಿ ಶಾಲೆಯ ಸನಿಹದಲ್ಲಿಯೇ ಇರುವ ಸಾರ್ವಜನಿಕ ಬಸ್ ನಿಲ್ದಾಣಕ್ಕೆ ತೆರಳಿ ಸ್ವಚ್ಛತೆಯಲ್ಲಿ ಪಾಲ್ಗೊಂಡರು. ಅಷ್ಟು ಮಾತ್ರವಲ್ಲದೆ ಈ ಸ್ಥಳವು ಸಾರ್ವಜನಿಕರಿಗೆ ಸೇರಿದ್ದರಿಂದ ಇದನ್ನು ಸ್ವಚ್ಛವಾಗಿಟ್ಟುಕೊಳ್ಳುವಂತೆ ಅಲ್ಲಿದ್ದ ಜನರಲ್ಲಿಯೂ ಮನವಿ ಮಾಡಿಕೊಂಡರು. ಗ್ರಾಮದಲ್ಲಿ ಜನರು ಬೇವೂರು ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಹಸುಗಳನ್ನು ಮೇಯಲು ಬಿಡುವುದು ಸಾಮಾನ್ಯವಾಗಿತ್ತು. ಇದರಿಂದಾಗಿ ಶಾಲೆಯ ಆವರಣದಲ್ಲಿ ಬೆಳೆದ ಗಿಡಗಳು ಮತ್ತು ಮರಗಳು ನಾಶವಾಗುತ್ತಿದ್ದವು. ಆದರೆ ಈ ಬಗ್ಗೆ ಒಳನೋಟಗಳು ದಕ್ಕಿದ ಬಳಿಕ ಶಾಲಾ ಅವಧಿಯ ಬಳಿಕವೂ ಶಾಲೆಯಲ್ಲಿಯೇ ಉಳಿದ ಮಕ್ಕಳು ಶಿಕ್ಷಕರ ಸಹಾಯದೊಂದಿಗೆ ಮರಗಳಿಗೆ ಬೇಲಿಯನ್ನು ಕಟ್ಟಿ ಮತ್ತು ಗೇಟಿಗೆ ಬೀಗ ಹಾಕಿ ಆಸ್ತಿಯನ್ನು ಸುಭದ್ರಗೊಳಿಸಿದರು. ಗ್ರಾಮಸ್ಥರು ತಮ್ಮ ಜಾನುವಾರುಗಳನ್ನು ಶಾಲಾ ಆವರಣದೊಳಕ್ಕೆ ಬಿಡುವುದನ್ನು ನಿಲ್ಲಿಸಿದರು.

ಓದುವ ಬೆಳಕು ಕಾರ್ಯಕ್ರಮದ ಅಂಗವಾಗಿ ಇದೇ ಶಿಕ್ಷಕರು ಮಕ್ಕಳನ್ನು ಸೇರಿಸಿ ಮಕ್ಕಳ ಗ್ರಾಮಸಭೆಯಲ್ಲಿ ಪಾಲಕರನ್ನು ಸೇರಿಸುವಲ್ಲಿ ಯಶಸ್ವಿಯಾದರು ಮತ್ತು ಮಕ್ಕಳ ಹಕ್ಕುಗಳ ಮಹತ್ವವನ್ನು ಪಾಲಕರಿಗೆ ವಿವರಿಸಿದರು. ಕುಟುಂಬದಲ್ಲಿ ನಿರ್ಧಾರಗಳನ್ನು ಕೈಗೊಳ್ಳುವಾಗ ಮಕ್ಕಳ ಜೊತೆ ಸಮಾಲೋಚನೆ ನಡೆಸುವ ಮಹತ್ವವನ್ನೂ ವಿವರಿಸಿದರು. ತಮ್ಮ ಮಕ್ಕಳ ಅನುಭವಗಳನ್ನು ಕೇಳುವಂತೆಯೂ ಅವರಿಗೆ ತಿಳಿಸಲಾಯಿತು. ಸಭೆಯಲ್ಲಿ ಸೇರಿದ್ದ ಪಾಲಕರು ಇದಕ್ಕೆ ಪೂರ್ಣ ಸಹಮತವನ್ನು ವ್ಯಕ್ತಪಡಿಸಿದರು ಮತ್ತು ತಮ್ಮ ಮಕ್ಕಳನ್ನು ಸಾರ್ವಜನಿಕ ಸಂಸ್ಥೆಗಳಾದ ಬ್ಯಾಂಕುಗಳು, ಪೊಲೀಸ್ ಠಾಣೆಗಳು ಮತ್ತು ಗ್ರಾಮ ಪಂಚಾಯತ್‌ಗಳಿಗೆ ಕರೆದೊಯ್ಯುವುದಾಗಿಯೂ ತಿಳಿಸಿದರು.

**ಉಪಸಂಹಾರ**

ಮಕ್ಕಳು ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಯೋಚನೆ ಮಾಡಿ ನಿರ್ವಹಿಸುವಂತೆ ಅವರನ್ನು ಸಮರ್ಥರನ್ನಾಗಿಸುವುದು ಪ್ರತಿಯೊಂದು ಶೈಕ್ಷಣಿಕ ಸಂಸ್ಥೆಗಳ ಗುರಿಯಾಗಬೇಕು. ನಮ್ಮ ಸಂವಿಧಾನವು ಪ್ರತಿಷ್ಠಾಪಿಸಿರುವ ಮೌಲ್ಯಗಳನ್ನು ಬೆಳೆಸಲು ಪ್ರತಿಯೊಂದು ಶಾಲೆಯೂ ಕೂಡ ಈ ರೀತಿಯ ಚಟುವಟಿಕೆಗಳನ್ನು ವಿನ್ಯಾಸಗೊಳಿಸಬೇಕು ಎಂಬುದು ನಮ್ಮ ಆಶಯವಾಗಿದೆ. ಇದು ಉತ್ತಮ ನಾಗರಿಕರನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಸಹಾಯ–ಮಾಡುತ್ತದೆ ಮತ್ತು ಆಧುನಿಕ, ಪ್ರಜಾಸತ್ತಾತ್ಮಕ ರಾಷ್ಟ್ರದ ಸ್ಥಾಪಕರ ದೃಷ್ಟಿಕೋನಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತದೆ. ಆರಂಭದಲ್ಲಿ ಪ್ರಸ್ತಾಪಿಸಿದಂತೆ ರಾಷ್ಟ್ರಗಳನ್ನು ಕೇವಲ ರಚಿಸುವುದಲ್ಲ ಅವುಗಳನ್ನು ಕಟ್ಟಬೇಕಾಗುತ್ತದೆ. ಅದೇ ರೀತಿ ಉತ್ತಮ ನಾಗರಿಕರನ್ನು ನಾವು ರೂಪಿಸಬೇಕಾಗುತ್ತದೆ. ಸಮರ್ಪಕವಾದ ಮಾಹಿತಿಯೊಂದಿಗೆ ಅವರನ್ನು ಸಶಕ್ತಗೊಳಿಸುವುದು ಮತ್ತು ಆಧುನಿಕ, ಸಹಾನುಭೂತಿಯುಳ್ಳ ಹಾಗೂ ಉದಾರ ಮನೋಭಾವದ ನಾಗರಿಕನಾಗುವುದರಿಂದ ಇರುವ ಅನೇಕ ದೃಷ್ಟಿಕೋನಗಳ ಬಗ್ಗೆ ಶಿಕ್ಷಣ ನೀಡುವುದು ಸರ್ಕಾರಿ ಶಾಲೆಯ ಬಹುಮುಖ್ಯ ಗುರಿಗಳಲ್ಲಿ ಒಂದಾಗಬೇಕು.





**ಅನಿಲ್ ಔಷಾ** ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಭಿವೃದ್ಧಿ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಪಡೆದಿದ್ದಾರೆ. ಓದುವುದು, ಅಡುಗೆ ಮಾಡುವುದು ಮತ್ತು ಸಿನಿಮಾಗಳನ್ನು ವೀಕ್ಷಿಸುವುದು ಅವರ ಹವ್ಯಾಸ. ಅವರನ್ನು ಈ ಮಿಂಚಂಚೆ ಮೂಲಕ ಸಂಪರ್ಕಿಸಬಹುದು: anil.ausha@azimpremjifoundation.org



**ಸಂಜಯ್ ಡೇನಿಯಲ್** ಪುರಾತತ್ವಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅವರು 2016ರಿಂದ ಸಹಾಯಕರಾಗಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು: sanjaydaniel1993@gmail.com

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ನಾಗಮಣಿ ಎಸ್.ಎನ್.**

# ಚಟುವಟಿಕೆಗಳ ಮೂಲಕ ಸಂವಿಧಾನದ ಮೌಲ್ಯಗಳ ಕಲಿಕೆ

ಅಂಕಿತ್ ಶುಕ್ಲಾ

ಪೌರತ್ವ ಎನ್ನುವುದು ಪ್ರಜಾಪ್ರಭುತ್ವದಲ್ಲಿ ಒಬ್ಬ ನಾಗರಿಕನ ಅತ್ಯಂತ ಸವಾಲಿನ ಹಾಗೂ ಕಷ್ಟಕರವಾದ ಜವಾಬ್ದಾರಿ ಏಕೆಂದರೆ, ನಾಗರಿಕರ ಮೇಲೆ ಸರ್ಕಾರವನ್ನು ಆಯ್ಕೆ ಮಾಡುವ ಜವಾಬ್ದಾರಿ ಇರುತ್ತದೆ ಮತ್ತು ವ್ಯಕ್ತಿ ಈ ಹಕ್ಕು ಚಲಾಯಿಸಲು ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರಬೇಕು. ಹೊಸ ಆಲೋಚನೆಗಳನ್ನು ಗ್ರಹಿಸುವ ಹಾಗು ಸ್ಪಷ್ಟವಾಗಿ ಆಲೋಚನೆ ಮಾಡುವ ಸಾಮರ್ಥ್ಯವನ್ನು ಬೆಳೆಸುವ ಮೂಲಕ ಇಂಥ ಸ್ಪರ್ಧಾತ್ಮಕತೆಯನ್ನು ಮೈಗೂಡಿಸುವಲ್ಲಿ ಶಿಕ್ಷಣವು ನಮಗೆ ನೆರವಾಗುತ್ತದೆ.

ಒಂದು ತಾರ್ಕಿಕ ಮತ್ತು ಮಾದರಿ ಸಾರ್ವಜನಿಕ ಸಂವಾದಕ್ಕೆ ಎಲ್ಲ ನಾಗರಿಕರು ಆಸಕ್ತಿ ತೋರಿಸಬೇಕಿದ್ದು, ಎಲ್ಲರಿಗೂ ಅಗತ್ಯ ಮಾಹಿತಿ ಹಾಗು ಎಲ್ಲರಲ್ಲೂ ಚೆನ್ನಾಗಿ ಅಭಿವೃದ್ಧಿ ಹೊಂದಿದ ವಿಮರ್ಶಾತ್ಮಕ ಚಿಂತನಾ ಸಾಮರ್ಥ್ಯ ಇರಬೇಕಾಗುತ್ತದೆ. ಶಿಕ್ಷಣವು ನಾಗರಿಕರಲ್ಲಿ ಇಂಥ ವಿಮರ್ಶಾತ್ಮಕ ಚಿಂತನಾ ಸಾಮರ್ಥ್ಯವನ್ನು ಬೆಳೆಸುವ ಗುರಿ ಹೊಂದಿದೆ; ಎಲ್ಲ ನಾಗರಿಕರು ನಿರ್ಧಾರಗಳನ್ನು ತಾರ್ಕಿಕವಾಗಿ ತೆಗೆದುಕೊಳ್ಳುವ, ಬೌದ್ಧಿಕ ಸಮಗ್ರತೆಯನ್ನು ಅರ್ಥ ಮಾಡಿಕೊಳ್ಳುವ, ವಾಸ್ತವದಿಂದ ಪ್ರಚಾರಾಂದೋಲನವನ್ನು ಪ್ರತ್ಯೇಕಿಸಬಲ್ಲ ಹಾಗು ಸುಳ್ಳಿನಿಂದ ಸತ್ಯವನ್ನು ಶೋಧಿಸುವ ಮತ್ತು ಪಕ್ಷಪಾತ, ತೀವ್ರಗಾಮಿತ್ವವನ್ನು ತಿರಸ್ಕರಿಸುವ ಸಾಮರ್ಥ್ಯ ಹೊಂದಿರುತ್ತಾರೆ. ಶಿಕ್ಷಿತ ಮನಸ್ಸು ವೈಜ್ಞಾನಿಕ ಮನೋಭಾವವನ್ನು ಹೊಂದಿರುತ್ತದೆ ಹಾಗು ಮಾಹಿತಿಯನ್ನು ಆಧರಿಸಿದ ಫಲಿತಾಂಶದಲ್ಲಿ ವಿಶ್ವಾಸ ಇರಿಸಿರುತ್ತದೆ. ಹೊಸ ಆಲೋಚನೆಗಳನ್ನು ಗ್ರಹಿಸುವ, ಸ್ವೀಕರಿಸುವ ಸಾಮರ್ಥ್ಯ ಹೊಂದಿರುತ್ತದೆ.

**ಚಟುವಟಿಕೆ 1 : ಪರಿಸ್ಥಿತಿಯ ವಿಶ್ಲೇಷಣೆ ಮತ್ತು ಎಲ್ಲರ ಒಳಿತು**

ನಾಗರಿಕತ್ವ ಮತ್ತು ಪ್ರಜಾಪ್ರಭುತ್ವ ಕುರಿತ ನನ್ನ ಜ್ಞಾನವನ್ನು ಆಧರಿಸಿ, ನನ್ನನ್ನು ಆಹ್ವಾನಿಸಿದ್ದ ಶಾಲೆಯಲ್ಲಿ ಚಟುವಟಿಕೆಯೊಂದನ್ನು ಹಮ್ಮಿಕೊಂಡೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆ ಚರ್ಚಿಸಿದ ಬಳಿಕ, ಸಂವಿಧಾನ'ದ ಮೌಲ್ಯಗಳ ಬಗ್ಗೆ ಉಪನ್ಯಾಸ ನೀಡುವ ಬದಲು ವಿದ್ಯಾರ್ಥಿಗಳು ಮೂಲಭೂತ ಸಾಂವಿಧಾನಿಕ ಮೌಲ್ಯಗಳನ್ನು ಅರ್ಥ ಮಾಡಿಕೊಳ್ಳಲು ನೆರವಾಗುವ ಚಟುವಟಿಕೆಯೊಂದನ್ನು ಪ್ರಸ್ತಾಪಿಸಿದೆ. ಅವರಿಗೆ ಕೆಲವು ಪ್ರಶ್ನೆಗಳನ್ನು ನೀಡಿದೆ. ಅದರಲ್ಲಿ ಎರಡನ್ನು ಈ ಕೆಳಗೆ ಚರ್ಚಿಸಲಾಗಿದೆ. ವಿದ್ಯಾರ್ಥಿಗಳು ಇದನ್ನು ವಿಶ್ಲೇಷಿಸಿ, ಉತ್ತರ ಕೊಡಬೇಕಿತ್ತು.

ಸನ್ನಿವೇಶ 1: ಸುತ್ತಲಿನ ಐದು ಗ್ರಾಮಗಳ ಮುನ್ನೂರು ರೈತ ಕುಟುಂಬಗಳಿಗೆ ನೀರು ಪೂರೈಸಬಲ್ಲ ಸಾರ್ವಜನಿಕ ಕೊಳವೆ ಬಾವಿ ಇದೆ ಎಂದುಕೊಳ್ಳೋಣ. ಎಲ್ಲ ರೈತ ಕುಟುಂಬಗಳಿಗೂ ಕೃಷಿಗೆ ನೀರಿನ ಹಂಚಿಕೆ ಹಾಗೂ ಪೂರೈಕೆ ಸಾಧ್ಯವಾಗುವಂತೆ ಯಾವ ರೀತಿ ವ್ಯವಸ್ಥೆ ಮಾಡುತ್ತೀರಿ?

ಸನ್ನಿವೇಶ 2: ಗ್ರಾಮದ ಸರಪಂಚನಾಗಿ ಯಾರನ್ನು ಆಯ್ಕೆ ಮಾಡುತ್ತೀರಿ?

ವಿದ್ಯಾರ್ಥಿಗಳು ತಮಗೆ ನಿಗದಿಪಡಿಸಿದ ಗುಂಪಿನಲ್ಲಿ ಕಾರ್ಯ ನಿರ್ವಹಿಸಿದರು ಹಾಗು ಪರಿಹಾರಗಳನ್ನು ವಿಶಾಲ ಗುಂಪಿಗೆ ಸಲ್ಲಿಸಿದರು. ಒಂದು ಗುಂಪು ಮೇಲಿನ ಸನ್ನಿವೇಶಗಳಿಗೆ ತನ್ನ ಪರಿಹಾರವನ್ನು ಕೆಳಕಂಡಂತೆ ಸೂಚಿಸಿತು. ಅದು ಹೀಗಿದೆ:

ಉತ್ತರ 1: ನಾವು ಬಾವಿ, ಕೆರೆಗಳು ಹಾಗೂ ಇನ್ನಿತರ ಜಲಸಂಗ್ರಹ ವ್ಯವಸ್ಥೆಗಳನ್ನು ನಿರ್ಮಿಸುತ್ತೇವೆ ಹಾಗು ಕೊಳವೆ ಬಾವಿಯನ್ನು ನೀರು ಸಂಗ್ರಹಿಸಲು ಬಳಸುತ್ತೇವೆ. ನೀರು ಎನ್ನುವ ಸಂಪನ್ಮೂಲವನ್ನು ಬಡವ ಹಾಗು ಶ್ರೀಮಂತರು ಎನ್ನದೆ ಎಲ್ಲರಿಗೂ ಸರಿಯಾಗಿ ಹಂಚಿಕೆ ಮಾಡುತ್ತೇವೆ.

ಉತ್ತರ 2: ಸರಪಂಚರ ಆಯ್ಕೆಗಾಗಿ ಮತದಾನ; ಗ್ರಾಮದಲ್ಲಿ ವ್ಯಕ್ತಿಗಳು ಮಾಡಿದ ಕೆಲಸ ನೋಡಿ ಇಲ್ಲವೇ ಅಗತ್ಯವಿರುವ ಕೆಲಸಗಳನ್ನು ಮಾಡುತ್ತೇನೆ ಎಂಬ ಭರವಸೆ ಒದಗಿಸುವ ಸರಪಂಚನನ್ನು ಆಯ್ಕೆ ಮಾಡುತ್ತೇವೆ.

**ಚಟುವಟಿಕೆ 2: ಸಕಲರ ಒಳಿತು**

ಪ್ರಜಾಪ್ರಭುತ್ವವು ಎಲ್ಲರ ಒಳಿತು ಎನ್ನುವ ಆಲೋಚನೆಯನ್ನು, ಅಂದರೆ, ಎಲ್ಲ ನಾಗರಿಕರ ಸಾಮಾನ್ಯ ಒಳಿತನ್ನು ಆಧರಿಸಿದೆ. ಯಾವುದೇ ನಿರ್ಧಾರ ಕೈಗೊಳ್ಳುವಾಗ ಆಲೋಚನೆಯ ಮಟ್ಟದಲ್ಲಿ ಜನಸಾಮಾನ್ಯರ ಒಳಿತನ್ನು ಖಾತ್ರಿ ಮಾಡಬಹುದು. ಆದರೆ, ಅದು ಆಚರಣೆಯಾಗಿ ಬದಲಾಗುವುದನ್ನು ಖಾತ್ರಿಗೊಳಿಸಲು ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳುವ ಮುನ್ನ ಪ್ರತಿಯೊಬ್ಬ ನಾಗರಿಕರು ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಅರ್ಥ ಮಾಡಿಕೊಂಡಿರ–ಬೇಕು. ನಾವು ನಾಗರಿಕತ್ವದ ಬೀಜವನ್ನು ಬಹಳ ಸಣ್ಣ ವಯಸ್ಸಿನಲ್ಲೇ ಬಿತ್ತಲು ಪ್ರಯತ್ನಿಸಬೇಕು. ಇದು ನಾನು ಮಕ್ಕಳೊಂದಿಗೆ ಹ್ಯಾರಿ ಪಾಟರ್ ಅಂಡ್ ದ ಸಾರ್ಸೆರರ್ಸ್ ಸ್ಟೋನ್ ಚಲನಚಿತ್ರವನ್ನು ವೀಕ್ಷಿಸಿದ ಬಳಿಕ ನಡೆಸಿದ ಚರ್ಚೆಯಿಂದ ನನಗೆ ಗೊತ್ತಾಯಿತು. ಚಲನಚಿತ್ರದ ವೀಕ್ಷಣೆ ಬಳಿಕ ನಾನು ಮಕ್ಕಳನ್ನು ಕೇಳಿದೆ– 'ಹ್ಯಾರಿ ಪಾಟರ್‌ಗೆ ಇದ್ದಂಥ ಶಕ್ತಿ ನಿಮಗೆ ಇದ್ದಿದ್ದರೆ ಏನು ಮಾಡುತ್ತಿದ್ದಿರಿ?'

ಮಕ್ಕಳ ಉತ್ತರಗಳು ವೈವಿಧ್ಯಮಯವಾಗಿದ್ದವು. ಮೊದಲಿನ ಹೆಚ್ಚಿನ ಪ್ರತಿಕ್ರಿಯೆಗಳು, ತುಂಬ ಹಣ ಗಳಿಸಿ ಶ್ರೀಮಂತರಾಗುತ್ತೇವೆ ಎಂದಾಗಿತ್ತು. ಅವರೆಲ್ಲರ ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಿದರೆ, ಅದು ಸಹಜವೂ ಆಗಿತ್ತು. ನಾವು ನಮ್ಮ ಬಳಿ ಇಲ್ಲದೆ ಇರುವುದರ ಗಳಿಕೆಯನ್ನು ಗುರಿಯಾಗಿಸಿಕೊಂಡಿರುತ್ತೇವೆ ಹಾಗು ಅವರೆಲ್ಲರೂ ತಮ್ಮ ದೈನಂದಿನ ಬದುಕಿನ ಎಲ್ಲ ಸಮಸ್ಯೆಗಳನ್ನು ದುಡ್ಡು ತೀರಿಸಬಲ್ಲದು ಎಂದು ಭಾವಿಸಿದ್ದರಿಂದ, ಹೆಚ್ಚು ಹಣ ಮಾಡಬೇಕೆಂಬ ಅವರ ಆಸೆ ಸಹಜವೇ ಆಗಿತ್ತು. ಆದರೆ, ಇನ್ನಷ್ಟು ಕೆದಕಿದಾಗ, ತಮ್ಮ ಸುತ್ತಮುತ್ತಲಿನ ಜನರು ಮತ್ತು ಗ್ರಾಮದ ಒಳಿತಿಗಾಗಿ ಅವರಿಗೆ ಹಣ ಬೇಕಿತ್ತೇ ಹೊರತು ಅವರ ಸ್ವಂತಕ್ಕೆ ಮಾತ್ರವಲ್ಲ ಎಂಬುದನ್ನು ನಾವು ಕಂಡುಕೊಂಡೆವು. ಇದು ನನ್ನ ಮನಸ್ಸನ್ನು ತಟ್ಟಿತು. ಮಕ್ಕಳ ಕೆಲವು ಪ್ರತಿಕ್ರಿಯೆಗಳು ಹೀಗಿದ್ದವು:

- ಗ್ರಾಮವನ್ನು ಸ್ವಚ್ಛಗೊಳಿಸುವುದು
- ಎಲ್ಲರಿಗೂ ನೀರು ಪೂರೈಸುವುದು
- ಅರಮನೆಯನ್ನು ನಿರ್ಮಿಸುವುದು
- ಹಣ ಗಳಿಸಿ ಸರ್ಕಾರಕ್ಕೆ ನೀಡುವುದು; ಸರ್ಕಾರ ಆ ಹಣವನ್ನು ಬಡ ಜನರಿಗೆ ಹಂಚುತ್ತದೆ
- ಮ್ಯಾಜಿಕ್ ಬಸ್ ಅನ್ನು ನಿರ್ಮಿಸಿ, ಅದರಲ್ಲಿ ಉಚಿತವಾಗಿ ಪ್ರಯಾಣಿಸಲು ಎಲ್ಲರಿಗೂ ಅವಕಾಶವನ್ನು ಕಲ್ಪಿಸುವುದು

ವಿದ್ಯಾರ್ಥಿಗಳಲ್ಲಿ ಪರಸ್ಪರ ಸಹಕಾರದ ಆಲೋಚನೆಗಳನ್ನು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರುವ ಅವಕಾಶವನ್ನು ಶಾಲೆಯಲ್ಲಿ ಅಭಿವೃದ್ಧಿಪಡಿಸಬೇಕು. ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಒಂದೇ ದಿನದಲ್ಲಿ ಬೆಳೆಸಲು ಸಾಧ್ಯವಿಲ್ಲ. ಇದಕ್ಕೆ ಶಿಕ್ಷಕರ ನಿರಂತರ ಪ್ರಯತ್ನ ಹಾಗು ಕಠಿಣ ಪರಿಶ್ರಮದ ಅಗತ್ಯವಿದೆ. ಸಾಮಾಜಿಕ ನ್ಯಾಯದ ಕಾರ್ಯೋತ್ಸಾಹ, ಸಾಮಾಜಿಕ ಕೆಡುಕುಗಳು ಹಾಗು ಶೋಷಣೆ ಕುರಿತ ಸೂಕ್ಷ್ಮತೆಗಳನ್ನು ನಮ್ಮ ಮಕ್ಕಳ ಹೃದಯ ಮತ್ತು ಮನಸ್ಸಿನಲ್ಲಿ ಬಿತ್ತಬೇಕಿದೆ ಮತ್ತು ಬದಲಾವಣೆಯ ಬುನಾದಿಯನ್ನು ಶಾಲೆಯಲ್ಲಿಯೇ ಹಾಕಬೇಕಿದೆ.

**ಪರಾಮರ್ಶನೆಗಳು:**

Deliberative Democracy and Education by Rohit Dhankar

Aims of Secondary Education (Secondary Commission Education 1952-53 Report)



**ಅಂಕಿತ್ ಶುಕ್ಲಾ,** ಎಂಬಿಎ ಮತ್ತು ಬಿಟೆಕ್ ಪದವೀಧರ. 2017ರಲ್ಲಿ ಫೆಲೋ ಆಗಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಸೇರಿದರು. ಪ್ರಸ್ತುತ ಛತ್ತೀಸ್‌ಗಢದ ರಾಯಗಢ ವಿಭಾಗದಲ್ಲಿದ್ದಾರೆ, ಗಣಿತಶಾಸ್ತ್ರ ಅವರ ಆಸಕ್ತಿಯ ಕಾರ್ಯಕ್ಷೇತ್ರ. ಇದಕ್ಕೆ ಮುನ್ನ ಭಟಿಂಡಾದಲ್ಲಿ ಕಾರ್ಯಕ್ರಮ ನಿರ್ವಾಹಕ ಮತ್ತು ಮೂರು ರಾಜ್ಯಗಳ ಜಾಗರಣ್ ಪೆಹಲ್‌ನ ಜಿಲ್ಲಾ ಯೋಜನಾ ಸಂಯೋಜಕರಾಗಿದ್ದರು. ಅವರ ಇಮೇಲ್: ankit.shukla@azimpremjifoundation.org

ಅನುವಾದ: **ಮಾಧವ ಐತಾಳ್** । ಪರಿಶೀಲನೆ: **ನಾಗಮಣಿ ಎಸ್.ಎನ್.**

**ಮಕ್ಕಳು ತಮ್ಮ ಸುತ್ತಲಿನ ಪರಿಸರಕ್ಕೆ ಅನುಗುಣವಾಗಿ ಹೊಂದಿಕೊಳ್ಳಲು, ಆಯ್ಕೆಗಳನ್ನು ಮಾಡಬೇಕಾಗುತ್ತದೆ. ಅವರ ಮೇಲೆ ತತ್‌ಕ್ಷಣದ ಪ್ರಭಾವ ಬೀರುವವರಲ್ಲಿ ಅವರ ಬಗ್ಗೆ ಕಾಳಜಿ ಇರುವವರು, ಅವರ ಬಗ್ಗೆ ನಿರ್ಲಕ್ಷ್ಯ ತಾಳುವವರು ಅಥವಾ ಅವರನ್ನು ಬಳಸಿಕೊಳ್ಳುವವರು ಇರುತ್ತಾರೆ. ಇವರೆಲ್ಲರ ನಡುವಿನ ವ್ಯತ್ಯಾಸವನ್ನು ಗುರುತಿಸುವುದು ಹೇಗೆ ಹಾಗೂ ಪ್ರತಿಯೊಂದಕ್ಕೂ ಹೇಗೆ ಪ್ರತಿಕ್ರಿಯಿಸಬೇಕು ಎಂಬುದನ್ನು ಮಗು ಅರ್ಥ ಮಾಡಿಕೊಳ್ಳಬೇಕು.**

**– ಹೃದಯ್‌ಕಾಂತ್ ದಿವಾನ್, ಐಡಿಯಲ್ಸ್ ಆಫ್ ಸಿಟಿಜನ್‌ಶಿಪ್, ಪು.11**

# ತರಗತಿಯಲ್ಲಿ ಸಂವಿಧಾನದ ಪೀಠಿಕೆ

ಅಸ್ಮಿತಾ ತಿವಾರಿ

ನಮ್ಮೆಲ್ಲರ ಬದುಕಿಗೆ ಚೌಕಟ್ಟಿನಂತೆ ಇರುವ ನಮ್ಮ ದೇಶ ಭಾರತದ ಸಂವಿಧಾನವನ್ನು ಪೌರರಾದ ನಾವು, ಹಿರಿಕಿರಿಯರೆಲ್ಲರೂ ಅನುಸರಿಸಬೇಕು. ಅದರ ಆರಂಭದ ಕೆಲವು ಪದಗಳು- ನಾವು, ಭಾರತದ ಜನರು-ಪೌರತ್ವ ಗೌರವದ ನಿಟ್ಟಿನಲ್ಲಿ ಆಳವಾದ ಮಹತ್ವವನ್ನು ಹೊಂದಿವೆ. ಈ ದೇಶದ ಪೌರರಾದ ನಾವು ಸಂವಿಧಾನದ ದೃಷ್ಟಿಕೋನವನ್ನು ದೈನಂದಿನ ಬದುಕಿನಲ್ಲಿ ಪಾಲಿಸುತ್ತಾ ಬದುಕುತ್ತಿದ್ದೇವೆ ಎಂಬುದನ್ನು ಖಾತರಿಪಡಿಸಿ-ಕೊಳ್ಳಬೇಕು. ಇಡೀ ಸಂವಿಧಾನದ ಆಶಯದಂತಿರುವ ಪೀಠಿಕೆಯು ಅದಕ್ಕೆ ದಾರಿ ಮಾಡಿಕೊಡುತ್ತದೆ. ಅದು ಎಲ್ಲಾ ಭಾರತೀಯರ ಗುರುತರ ಹೇಳಿಕೆಯಾಗಿದೆ.

ಒಂದು ಪುಟದಷ್ಟಿರುವ ಈ ವಾಕ್ಯವು, ಇಡೀ ಭಾರತದ ಎಲ್ಲಾ ಜನರನ್ನು ಮಾನವೀಯ ಮೌಲ್ಯಗಳ ಮೂಲಕ ಬೆಸೆಯುತ್ತದೆ. ಈ ಮೌಲ್ಯಗಳು ನಮ್ಮ ದೈನಂದಿನ ಬದುಕಿನ ಭಾಗವಾಗಿವೆಯಲ್ಲದೆ, ಈ ಮೌಲ್ಯಗಳ ಸುತ್ತ ನಮ್ಮ ಭಾವನೆಗಳೂ ರೂಪುಗೊಂಡಿವೆ. ಆದರೆ ನಮ್ಮ ಪಠ್ಯಪುಸ್ತಕದ ಮೊದಲ ಪುಟದಲ್ಲಿ ಮುದ್ರಿಸಲಾಗಿರುವ ಈ ಪೀಠಿಕೆಯನ್ನು ನಾವು ಎಷ್ಟು ಮಂದಿ ಓದಿದ್ದೇವೆ?

ನಾವೆಲ್ಲರೂ ಅದು ಜೀವಂತವಾಗಿರುವಂತೆ ಮಾಡಬೇಕು ಹಾಗು ಯುವ ಪ್ರಜೆಗಳಾದ ವಿದ್ಯಾರ್ಥಿಗಳಿಗೆ ಅದು ಪ್ರತಿ ದಿನದ ಅನುಭವವಾಗುವ ರೀತಿಯಲ್ಲಿ ಅದನ್ನು ಬೆಸೆಯಬೇಕು. ಪ್ರತಿಯೊಬ್ಬರೂ ಪೌರರಾಗಿ ತಮ್ಮ ಪಾತ್ರವನ್ನು ಅರ್ಥೈಸಿಕೊಳ್ಳು-ವಂತಾಗಬೇಕು ಮತ್ತು ಅಧಿಕಾರಯುತವಾಗಿ ಮತ್ತು ಜವಾಬ್ದಾರಿಯಿಂದ ನಡೆದುಕೊಳ್ಳಬೇಕು ಎಂಬುದು, 'ನಾವು- ಜನರ



THE CONSTITUTION OF INDIA

WE, THE PEOPLE OF INDIA, having solemnly resolved to constitute India into a SOVEREIGN, SOCIALIST, SECULAR, DEMOCRATIC, REPUBLIC and to secure to all its citizens:

JUSTICE, social, economic and political;
LIBERTY of thought, expression, belief, faith and worship;
EQUALITY of status and of opportunity;
and to promote among them all
FRATERNITY assuring the dignity of the individual and the unity and integrity of the Nation;
IN OUR CONSTITUENT ASSEMBLY this twenty-sixth day of November, 1949, do HEREBY ADOPT, ENACT AND GIVE TO OURSELVES THIS CONSTITUTION.

ಅಭಿಯಾನ'ದ (ದಿ ಪೀಪಲ್ ಅಭಿಯಾನ್) ಗುರಿಯಾಗಬೇಕು. ಕಿರಿದೋ, ಹಿರಿದೋ ಒಬ್ಬನ ಪ್ರಭಾವದ ಪ್ರಭೆಯೊಳಗೆ, ಪ್ರಜೆಗಳು ಭಾರತ ಸಂವಿಧಾನದ ಪೀಠಿಕೆಯಲ್ಲಿ ಪ್ರತಿಷ್ಠಾಪಿಸಿರುವಂತೆ ನ್ಯಾಯ, ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಎಂಬ ಮಾನವೀಯ ಮೌಲ್ಯಗಳ ನೆಲೆಯಲ್ಲಿ ಕ್ರಿಯಾಶೀಲರಾಗುವುದು ಮುಖ್ಯ ಎಂಬುದು ನಮ್ಮ ವಿಶ್ವಾಸ.

ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ (National Council of Educational Research and Training's (NCERT's)ಯ ಒಂಬತ್ತನೇ ತರಗತಿಯ ಸಾಮಾಜಿಕ ಮತ್ತು ರಾಜಕೀಯ ಜೀವನ ಎಂಬ ಪಠ್ಯಪುಸ್ತಕವು ಭಾರತ ಸಂವಿಧಾನದ ಪೀಠಿಕೆಯ ಬಗ್ಗೆ ವಿವರವಾಗಿ ಹೇಳುತ್ತದೆ. ಇದಲ್ಲದೆ, ಕಳೆದ ಕೆಲವು ವರ್ಷಗಳಿಂದ, ಭಾರತದ ವಿವಿಧ ಭಾಗಗಳಲ್ಲಿನ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆಗೆನಮ್ಮ ಕೆಲಸಗಳಿಂದಾಗಿ, ಅವರೊಂದಿಗೆ ಪೀಠಿಕೆಯ ಬಗ್ಗೆ ಚರ್ಚಿಸಲು ಅವಕಾಶ ಸಿಕ್ಕಿದೆ ಹಾಗು ಆ ಒಂದು ಪುಟದ ದಾಖಲೆಯನ್ನು ಜನಸಾಮಾನ್ಯರ ದೃಷ್ಟಿಯಿಂದ ನೋಡುವ ಮತ್ತು ನಮ್ಮ ನಿತ್ಯದ ಬದುಕಿನಲ್ಲಿ ಆ ಮೌಲ್ಯಗಳನ್ನು ಬೆಸೆಯುವ ಅವಕಾಶವೂ ನಮಗೆಲ್ಲರಿಗೂ ಸಿಕ್ಕಿದೆ.

**ರೀತಿ ಮತ್ತು ವಿಧಾನ**

2019ರಲ್ಲಿ, -70ರಲ್ಲಿನ ಸಂವಿಧಾನ - (Constitution at 70) ಎಂಬ, ಮೂರು ತಿಂಗಳ ಪ್ರಚಾರವನ್ನು ದೆಹಲಿಯ ಶಿಕ್ಷಣ ನಿರ್ದೇಶನಾಲಯದ ಸಹಯೋಗದೊಂದಿಗೆ ಆಯೋಜಿಸಲಾಗಿತ್ತು. ಅದರಿಂದ, ದೆಹಲಿಯ ಎಲ್ಲಾ 1200 ಸರ್ಕಾರಿ ಶಾಲೆಗಳ ಶಿಕ್ಷಕರು ಮತ್ತು 6, 9 ಮತ್ತು 11ನೇ ತರಗತಿಯ ಒಂದು ಲಕ್ಷಕ್ಕೂ ಅಧಿಕ ವಿದ್ಯಾರ್ಥಿಗಳೊಂದಿಗೆ ಬೆರೆಯುವ ಅವಕಾಶ ಸಿಕ್ಕಿತು. ಸಂವಿಧಾನದ ಪೀಠಿಕೆಯ ಬಗ್ಗೆ ಜಾಗೃತಿ ಮೂಡಿಸಿ, ಪ್ರಜ್ಞಾವಂತರನ್ನಾಗಿಸುವುದು ನಮ್ಮ ಗುರಿಯಾಗಿತ್ತು. ಆ ಮೂಲಕ, ವಿದ್ಯಾರ್ಥಿಗಳು ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಮಾನವೀಯ ಮೌಲ್ಯಗಳನ್ನು ತಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಳ್ಳುವಂತೆ ಮಾಡುವುದೇ ಕಾರ್ಯಕ್ರಮದ ಉದ್ದೇಶವಾಗಿತ್ತು.

ವಾಸ್ತವವಾಗಿ, 8ರಿಂದ 10ನೇ ತರಗತಿಯವರೆಗಿನ ವಿದ್ಯಾರ್ಥಿಗಳು ತಮಗೆ ನೀಡಲಾಗಿರುವ ಸಾಮಾಜಿಕ ಮತ್ತು ರಾಜಕೀಯ ಜೀವನ ಎಂಬ ಪಠ್ಯಕ್ರಮವು; 'ಉದಾಸೀನ ಉಂಟು ಮಾಡುತ್ತಿದೆ 'ಪ್ರಸ್ತುತವಾಗಿಲ್ಲ', 'ವಾಸ್ತವವಾಗಿಲ್ಲ - ಎಂಬ ಭಾವನೆ ಹೊಂದಿದ್ದರ ಪರಿಣಾಮವಾಗಿ ಸಂವಿಧಾನ ಪೀಠಿಕೆಯ ಬಗ್ಗೆ ಚರ್ಚಿಸುವ ಅಗತ್ಯ ತಲೆದೋರಿತು. ಈ ಪ್ರತಿಕ್ರಿಯೆಯು, ಕಲಿಕೆ ಮತ್ತು ಬೋಧನೆಯ ಪಠ್ಯಗಳು ನಿತ್ಯ ಜೀವನದ ಅನುಭವಕ್ಕೆ ಹತ್ತಿರವಾಗಿರಬೇಕಾದುದು ಅವಶ್ಯ ಎಂಬ ಸೂಚನೆ ನೀಡುವಂತಿತ್ತು. ಜೀವಂತ ನಿದರ್ಶನಗಳು ವ್ಯಕ್ತಿಯ ಏಳಿಗೆ ಮತ್ತು ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಅಲ್ಲದೆ ಕಲಿಕೆಯ ಮೂಲದೊಂದಿಗೆ ಹಿತವಾದ ಸಂಬಂಧ ಏರ್ಪಡಿಸುತ್ತವೆ. ಪ್ರತಿಯೊಬ್ಬ ವ್ಯಕ್ತಿಯ ವರ್ತನೆಗಳ ಮೇಲಿನ

ಪ್ರತಿಫಲನವನ್ನು ನೋಡಿ ಕಲಿಯುವುದು ಕಲಿಕೆಯ ಶ್ರೀಮಂತ ಅನುಭವಗಳಿಗೆ ದಾರಿ ಮಾಡಿಕೊಡುತ್ತದೆ. ಈ ಅಭಿಯಾನದ ಅಂಗವಾಗಿ, ಯುವ ಪ್ರಜೆಗಳ ಮೇಲೆ ಪ್ರಭಾವ ಬೀರುವ ವ್ಯಕ್ತಿಗಳ, ಅಂದರೆ, ಸ್ನೇಹಿತರು, ಕುಟುಂಬ ಮತ್ತು ನೆರೆಹೊರೆಯಿಂದ ಉದಾಹರಣೆಗಳನ್ನು ಕೈಗೆತ್ತಿಕೊಳ್ಳಲಾಯಿತು. ತಮ್ಮ ನಿತ್ಯ ಜೀವನದಲ್ಲಿ ಸಾಂವಿಧಾನಿಕ ಮೌಲ್ಯಗಳನ್ನು ಕರಗತ ಮಾಡಿಕೊಂಡು ಪಾಲಿಸುವಂತೆ ಮಾಡುವ ಮೂಲಕ ಅವರನ್ನು ಸಮರ್ಥ ನಾಗರಿಕರನ್ನಾಗಿ ಮಾಡುವುದೇ ಈ ಅಭಿಯಾನದ ಉದ್ದೇಶವಾಗಿತ್ತು.

ಈ ಯೋಜನೆಯಂತೆ, ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ತಿಂಗಳುಗಳ ಕಾಲ ಬೋಧನೆ ಮತ್ತು ಕಲಿಕೆಯ ವಿಷಯಗಳನ್ನು ಅಭಿವೃದ್ಧಿಪಡಿಸಲಾಯಿತು. ಇದರಲ್ಲಿ ಶಿಕ್ಷಕರಿಗೆ ಪಠ್ಯ ಮತ್ತು ಶ್ರವಣ (ಆಡಿಯೊ) ಸಾಮಗ್ರಿಗಳು, ವಿದ್ಯಾರ್ಥಿಗಳಿಗೆ ಪಠ್ಯ ಸಾಮಗ್ರಿಗಳೂ ಒಳಗೊಂಡಿದ್ದವು. ಪ್ರತಿ ತಿಂಗಳ ಕೊನೆಯಲ್ಲಿ ಶಾಲೆಗಳು 'ಸಂವಿಧಾನ ಮೇಳ'ಗಳನ್ನು (Constitution Fests) ಆಯೋಜಿಸಿ, ಸಾಮೂಹಿಕ / ಸಹಯೋಗದ ಕಲಿಕೆಯನ್ನು ಉತ್ತೇಜಿಸುವ ಗುರಿಯೊಂದಿಗೆ ಲಿಂಗತ್ವ ಮತ್ತು ವರ್ಗ ಭೇದಕ್ಕೆ ಸಂಬಂಧಿಸಿದ ಬೀದಿ ನಾಟಕಗಳು, ವಿಚಾರ ಗೋಷ್ಠಿಗಳು ಮತ್ತು ಚರ್ಚೆಗಳನ್ನು ಹಮ್ಮಿಕೊಳ್ಳಲಾಯಿತು. ತೊಡಗಿಸಿಕೊಳ್ಳುವುದು, ಅನುಭವಜನ್ಯ, ಪ್ರತಿಫಲನಾತ್ಮಕ, ಚಿಂತನೆಗೆ ಪ್ರೇರೇಪಿಸುವಂತಹ ಬಹುಭಾಷಾ ಮಾಹಿತಿಗಳನ್ನು ಇದಕ್ಕಾಗಿ ಸಿದ್ಧಪಡಿಸಲಾಯಿತು. ಸಾಂವಿಧಾನಿಕ ಮೌಲ್ಯಗಳನ್ನು ವಿಸ್ತೃತವಾಗಿ ಪ್ರಸಾರ ಮಾಡುವ ಉದ್ದೇಶದಿಂದ ಅವುಗಳನ್ನು ಸಣ್ಣ ಸಣ್ಣಗೋಷ್ಠಿಗಳಾಗಿ ವಿಂಗಡಿಸಲಾಯಿತು.

ಶಿಕ್ಷಕರು ಪ್ರತಿ ತಿಂಗಳೂ ಪ್ರತಿ ಮೌಲ್ಯಕ್ಕೂ ಸಂಬಂಧಿಸಿದ ವಿಷಯ/ಪರಿವಿಡಿಗಳನ್ನು ಪಡೆಯುತ್ತಿದ್ದರು. ಇವು ಆಡಿಯೊ ಸಂಬಂಧಿ ವಿಷಯ/ಪರಿವಿಡಿಗಳು ಪಾಡ್‌ಕಾಸ್ಟ್‌ಗಳಾಗಿರುತ್ತಿದ್ದವು. ಜೊತೆಗೆ ಸಾಂವಿಧಾನಿಕ ಮೌಲ್ಯಗಳನ್ನು ವಿವರಿಸುವ ದೈನಂದಿನ ಅನುಭವಗಳ ವಿವರಣೆಗಳನ್ನೂ ಒಳಗೊಂಡಿರುತ್ತಿದ್ದವು. ಪಠ್ಯ ಸಾಮಗ್ರಿಗಳು ಪಾಠ ಯೋಜನೆಗಳು ಮತ್ತು ಶಿಕ್ಷಕಸ್ನೇಹಿ ಹಾಳೆಗಳನ್ನು (Teacher Companion Sheets-TCS) ಒಳಗೊಂಡಿರುತ್ತಿದ್ದವು. ಈ ಟಿಸಿಎಸ್‌ಗಳಲ್ಲಿ ಒಂದು ಮೌಲ್ಯವನ್ನು ಆಳವಾಗಿ ಅರ್ಥೈಸಿಕೊಳ್ಳಲು ಮತ್ತು ತರಗತಿಯಲ್ಲಿ ಚಟುವಟಿಕೆಗಳನ್ನು ಕೈಗೊಳ್ಳಲು ಬೇಕಾದ ಮಾರ್ಗಸೂಚಿಗಳುಳ್ಳ ಪರಿಕಲ್ಪನೆಯ ನಕಾಶೆ ಇರುತ್ತಿತ್ತು.

**ಮೌಲ್ಯಗಳ ದಿನಚರಿ ಮತ್ತು ಆಟೋಟ ಪುಸ್ತಿಕೆ**

ಮೌಲ್ಯಗಳ ದಿನಚರಿಯಲ್ಲಿ ವೈಯಕ್ತಿಕ ಪರಿಶೀಲನೆ/ಪರಿಶೋಧನಾ ಸಮೀಕ್ಷೆಗಾಗಿ ಕೆಲವು ಪ್ರಶ್ನೆಗಳು ಇದ್ದವು. ಪ್ರತಿಫಲನಾತ್ಮಕ ಪ್ರಶ್ನೆಗಳು ವಿದ್ಯಾರ್ಥಿಗಳ ಆಪ್ತ ವಲಯದೊಳಗಿನ ಮಾತುಕತೆ ಮತ್ತು ಅನುಭವಗಳ ಆಧಾರದಲ್ಲಿ ಪ್ರತಿ ಮೌಲ್ಯಗಳನ್ನು ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿ ಚಿಂತನಾ ಪ್ರಕ್ರಿಯೆಯನ್ನು ಉದ್ದೀಪನಗೊಳಿಸುವಂತಿದ್ದವು. ಈ ಮೌಲ್ಯಗಳನ್ನು ಅಳವಡಿಸಿಕೊಂಡು ಅನುಸರಿಸಬಹುದಾದ ಒಬ್ಬ ಸದಸ್ಯನನ್ನು ವಿದ್ಯಾರ್ಥಿಗಳು ತಮ್ಮ ಆಪ್ತವಲಯದಿಂದ ಆರಿಸುತ್ತಿದ್ದರು.

ಮೌಲ್ಯಗಳ ದಿನಚರಿ ಪುಸ್ತಕಗಳಿಗೆ ಪೂರಕವಾಗಿ ಆಟೋಟ ಪುಸ್ತಿಕೆಗಳು ಇರುತ್ತಿದ್ದವು. ಇವುಗಳು ಕ್ರಿಯಾತ್ಮಕವಾಗಿದ್ದವು. ಅಲ್ಲದೆ ಸೂಚಿತ ಮೌಲ್ಯಗಳ ಬಗ್ಗೆ ಕಾರ್ಯರೂಪಕ್ಕೆ ತರಬಹುದಾದ ಚಟುವಟಿಕೆಗಳನ್ನು ಒಳಗೊಂಡಿರುತ್ತಿದ್ದವು. ಇದರಿಂದಾಗಿ, ವಿದ್ಯಾರ್ಥಿಗಳು ತಮ್ಮ ಸ್ವಯಂ ಪರಿಶೋಧನೆಗೆ ಮತ್ತು ಮಾಡಿ ಕಲಿಯುವ ಪ್ರಯೋಗಕ್ಕೆ ಒಡ್ಡಿಕೊಳ್ಳಲು ಪ್ರೇರೇಪಣೆ ಸಿಕ್ಕಿತು. ವಿದ್ಯಾರ್ಥಿಗಳು ಪ್ರತಿ ತಿಂಗಳೂ ಒಂದೊಂದು ಮೌಲ್ಯಕ್ಕೆ ಸೂಕ್ತವೆನಿಸುವ ಅನುಭವಿಸಿ ಅರ್ಥೈಸಿಕೊಳ್ಳಲು ನಾಲ್ಕು ಆಯ್ಕೆಗಳನ್ನು ಮಾಡಿಕೊಳ್ಳಬಹುದಾಗಿತ್ತು.

ಎರಿಕ್ ಎರಿಕ್ಸನ್ ಅವರ ಮನೋವೈಜ್ಞಾನಿಕ ಸಿದ್ಧಾಂತದ (Erik Erikson's Theory of Psychological Development) ಪ್ರಕಾರ, ಹದಿಹರೆಯದ ಹಂತದಲ್ಲಿ, ಹದಿಹರೆಯದವರು ಸಾಮಾಜಿಕ ಮತ್ತು ಸಾಂಸ್ಕೃತಿಕ ಗುಂಪುಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಆರಂಭಿಸುವ ಕಾರಣ ಅಸ್ಮಿತೆಯ ಪ್ರಜ್ಞೆ ವಿಕಸನಗೊಳ್ಳುತ್ತದೆ. ಎರಿಕ್ಸನ್ ಇದನ್ನು, ಸಂಧಿಕಾಲವೆಂದು ವಿಷಮ ಸ್ಥಿತಿ ಅಲ್ಲವೆಂದು ಮತ್ತು ಅದು ಮಹತ್ವದ ಬದಲಾವಣೆಯನ್ನು ಸೂಚಿಸುತ್ತದೆ ಎಂದೂ ಹೇಳಿದ್ದಾರೆ. ಆದರೆ ಈ ಬದಲಾವಣೆಯು ವ್ಯಕ್ತಿಯು ಸಾಮಾಜಿಕ ಮತ್ತು ಸಾಂಸ್ಕೃತಿಕ ವಾತಾವರಣಕ್ಕೆ ಹೇಗೆ ತೆರೆದುಕೊಂಡಿದ್ದಾರೆ ಎಂಬುದನ್ನು ಅವಲಂಬಿಸಿರುತ್ತದೆ. ಇಂತಹ ಶಾರೀರಿಕ ಮತ್ತು ಜ್ಞಾನದ ಬೆಳವಣಿಗೆಯ ಹಂತದಲ್ಲಿ, ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವದ ಮೌಲ್ಯಗಳ ಕುರಿತಾದ ಅರಿವು ವ್ಯಕ್ತಿಯ ಬೆಳವಣಿಗೆಗೆ ಮಾರ್ಗದರ್ಶನ ನೀಡುತ್ತದೆ.

ಈ ಅಭಿಯಾನದಲ್ಲಿ ವಿದ್ಯಾರ್ಥಿಗಳೊಂದಿಗೆ ನಡೆಸಿದ ಮಾತುಕತೆ ಹಾಗು ಅನುಭವ ಹಂಚಿಕೆಯ ಸಂಚಿಕೆ ವೇಳೆ, ಮೌಲ್ಯಗಳ ಕುರಿತ, ಅವರ ವಿಸ್ಮಯಕಾರಿ ಅನುಭವಗಳನ್ನು ಹೇಳಿಕೊಂಡರು. ಈ ಸಂಚಿಕೆಗಳನ್ನು ನಾನು ಮೂರು ವಿಷಯಗಳಾಗಿ ವರ್ಗೀಕರಿಸಿ–ಕೊಂಡೆ.

– ಸ್ವಾತಂತ್ರ್ಯದ ಶಕ್ತಿ
– ಸನ್ನಡತೆಯ ಪ್ರಜ್ಞೆ
– ದುರ್ನಡತೆಯ ಪ್ರಜ್ಞೆ

ಇವು, ವಿದ್ಯಾರ್ಥಿಗಳಿಗೆ ಸಂವಿಧಾನದ ಪೀಠಿಕೆಯು ಪರಿಣಾಮಕಾರಿ ಬೋಧನೆಯಾಗಿರುವುದರ ಸಾಮರ್ಥ್ಯವನ್ನು ಬಿಂಬಿಸುತ್ತವೆ ಹಾಗು ಮೌಲ್ಯಗಳ ಬಗೆಗಿನ ಅವರ ಅನುಭವಗಳನ್ನು ಮುನ್ನೆಲೆಗೆ ತರಲು, ತಮ್ಮ ನಿತ್ಯ ಜೀವನದೊಂದಿಗೆ ಬೆಸೆಯಲು ನೆರವಾಗಿರುವುದನ್ನು ತೋರಿಸುತ್ತವೆ. ಈ ನಿಟ್ಟಿನಲ್ಲಿ ಕೆಲವು ಪ್ರತಿಕ್ರಿಯೆಗಳು ಹೀಗಿದ್ದವು:

**ಸ್ವಾತಂತ್ರ್ಯದ ಶಕ್ತಿ**

ಮತದಾನ ಶಕ್ತಿಯು ಒಬ್ಬ ವ್ಯಕ್ತಿಗೆ ತನ್ನದೇ ಸರ್ಕಾರವನ್ನು ಆರಿಸುವ ಸ್ವಾತಂತ್ರ್ಯ ಮತ್ತು ಬಿಡುಗಡೆಯ (freedom and liberty) ಫಲಶ್ರುತಿ. ನಾನು ಆಯ್ಕೆಯ ಸ್ವಾತಂತ್ರ್ಯದ ಕುರಿತು ಕಲಿತಿದ್ದೇನೆ.

ನನ್ನ ಹೆತ್ತವರು ನನಗೆ ಬೇಕಾದ್ದನ್ನು ಓದುವ ಸ್ವಾತಂತ್ರ್ಯವನ್ನು ನನಗೆ ಕೊಟ್ಟಿದ್ದಾರೆ. ಯಾವುದನ್ನು ಆರಿಸಿಕೊಳ್ಳಬೇಕು ಎಂದು ನಿರ್ದೇಶನ ಕೊಡುವುದಕ್ಕಿಂತ ಶಿಕ್ಷಣವೇ ಮುಖ್ಯ.

ಇತ್ತೀಚೆಗೆ ನಾನು ನನ್ನ ಸ್ನೇಹಿತರು ಹುಟ್ಟುಹಬ್ಬ ಆಚರಿಸಿಕೊಳ್ಳಲು ಒಂದು ಹೋಟೆಲ್‌ಗೆ ಹೋಗಿದ್ದೆವು. ಅದು ಸ್ವಲ್ಪ ದುಬಾರಿಯಾದರೂ ಯಾರಿಗೂ ನಾವು ಅಲ್ಲಿಗೆ ಹೋಗಬಾರದಿತ್ತು ಎಂದು ಅನಿಸಲಿಲ್ಲ, ನಾವೇಕೆ ಅಲ್ಲಿಗೆ ಹೋಗಿದ್ದೇವೆಂದು ಯಾರೂ ನಮ್ಮನ್ನು ಪ್ರಶ್ನಿಸಲಿಲ್ಲ. ನಾವು ಖುಷಿಯಾಗಿ ನನ್ನ ಹುಟ್ಟುಹಬ್ಬವನ್ನು ಅಲ್ಲಿ ಆಚರಿಸಿದೆವು.




ಸನ್ನಡತೆ ಬಗ್ಗೆ ಪ್ರಜ್ಞಾವಂತರಾಗಿರುವುದು – ನಾನು ಯಾರದೇ ಕೆಲಸದ ಬಗ್ಗೆ ಕಟ್ಟುಪಾಡು ವಿಧಿಸುವುದಿಲ್ಲ ಯಾಕೆಂದರೆ, ಬೇರೆಯವರ ಸ್ವಾತಂತ್ರ್ಯಕ್ಕೆ ಅಡ್ಡಿಪಡಿಸುವ ಹಕ್ಕು ನಮಗಿಲ್ಲ. ನಾವೆಲ್ಲರೂ ಸ್ವತಂತ್ರರು.

ದುರ್ನಡತೆಯ ಬಗ್ಗೆ ಪ್ರಜ್ಞಾವಂತರಾಗಿರುವುದು – ಹೌದು, ನಾನು ಮೊದಲು ಬೇರೆಯವರ ಸ್ವಾತಂತ್ರ್ಯಕ್ಕೆ ಕಟ್ಟುಪಾಡು ಹಾಕಿದ್ದೇನೆ ಅದಕ್ಕೆ ಖುಷಿಪಡುತ್ತಿದ್ದೆ. ಆದರೆ ಈಗ ಹಾಗೆ ಮಾಡುವುದಿಲ್ಲ. ಏಕೆಂದರೆ ಬೇರೆಯವರಿಗೆ ಕಟ್ಟುಪಾಡು ವಿಧಿಸುವ ಹಕ್ಕು ನನಗಿಲ್ಲ

ಒಂದು ವೇಳೆ ಯಾರಾದರೂ ಪರಿಶಿಷ್ಟ ಜಾತಿ (ಎಸ್.ಸಿ) ಅಥವಾ ಸಾಮಾನ್ಯ ಪಂಗಡದವರು ಇದ್ದರೆ, ಅವರು ತಮ್ಮದೇ ಗುಂಪಿನವರೊಂದಿಗೆ ಸ್ನೇಹ ಮಾಡಿಕೊಳ್ಳಬಾರದು. ಅವರು ಇತರ ಪಂಗಡದವರೊಂದಿಗೆ ಕೂಡಾ ಬೆರೆಯಬೇಕು.

ಇಂತಹ ಅನುಭವಗಳ ನೆಲೆಗಟ್ಟಿನಲ್ಲಿ ಯುವ ಜನರನ್ನು ಕ್ರಿಯಾಶೀಲ ನಾಗರಿಕರನ್ನಾಗಿ ರೂಪಿಸಲು ಇನ್ನಷ್ಟು ಇಂತಹ ಅನುಭವಗಳನ್ನು ಕಟ್ಟಿಕೊಡಲು ನಮಗೆ ಪ್ರೇರಣೆ ಸಿಕ್ಕಿದೆ. ಅವರು ತಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನ ಪಠ್ಯಕ್ರಮದ ಪರಿಕಲ್ಪನೆಯ ಜೊತೆಗೆ ಸ್ವಯಂ ಪ್ರತಿಫಲನ, ಕುಟುಂಬ ಮತ್ತು ನೆರೆಹೊರೆಯವರೊಂದಿಗೆ ಮಾತನಾಡುತ್ತಾ, ಮಾನವೀಯ ಮತ್ತು ಸಾಂವಿಧಾನಿಕ ಮೌಲ್ಯಗಳನ್ನು ಜೀವಂತವಾಗಿರಿಸುವ ಕೆಲಸದಲ್ಲಿ ತೊಡಗಿಸಿ–ಕೊಂಡಿದ್ದಾರೆ. ಅವರು ಸಂವಿಧಾನ ಮತ್ತು ಅದರ ಪೀಠಿಕೆಯು ತಮಗೆ ದೂರದ್ದೆಂದು ಭಾವಿಸಿಲ್ಲ. ಅಭಿಯಾನದ ವೇಳೆ ಅವರಿಗೆ ಒದಗಿಸಲಾದ ಪೂರಕ ಸಾಮಗ್ರಿಗಳು ಅವರಿಗೆ ಮೌಲ್ಯಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾದವು. ತಮ್ಮ ಪಠ್ಯಪುಸ್ತಕದಲ್ಲಿ ಮುದ್ರಿಸಲಾಗಿರುವ ಪೀಠಿಕೆಯು ಯಾವುದೋ ದೂರದ ತತ್ವವಲ್ಲ ಬದಲಗೆ ಅವು ದೈನಂದಿನ ಜೀವನದಲ್ಲಿ ಎದುರಿಸುವ ಸನ್ನಿವೇಶಗಳು ಎಂಬುದು ಅರಿವಾಯಿತು.

**ಇತರ ಪ್ರಯೋಜನಗಳು**

ಈ ಅಭಿಯಾನವು, ಸಾಮಾಜಿಕ ಮತ್ತು ರಾಜಕೀಯ ಜೀವನ ಪಠ್ಯಕ್ರಮದ ವಿಷಯವನ್ನು ಕಲಿಸಲು ಇನ್ನೊಂದು ವಿಧಾನವಾದೀತು ಎಂಬುದಕ್ಕೆ ಸಾಕ್ಷಿಯಾಯಿತು. ಅಲ್ಲದೆ, ಈ ಆಂದೋಲನವನ್ನು ಒಂದು ವಿಧಾನವನ್ನಾಗಿ ಬಳಸುವುದಾದರೆ, ಶಿಕ್ಷಕರು ಅಥವಾ ಸುಗಮಕಾರರು ಸಂವಿಧಾನದ ದೃಷ್ಟಿಕೋನದಿಂದ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳಬೇಕಾಗುತ್ತದೆ. ಅದರಿಂದ ನಮ್ಮ ತರಗತಿಗಳಲ್ಲಿ ಅಂತಹ ವಿಧಾನಗಳನ್ನು ಅಳವಡಿಸಿಕೊಳ್ಳಲು ಸಹಕಾರಿಯಾದೀತು. ನಮ್ಮ ಸಂವಿಧಾನದ ಪೀಠಿಕೆಯಲ್ಲಿನ ಮೌಲ್ಯಗಳು ಪೌರತ್ವದ ಹೃದಯವಾಗಿವೆ. ಇಂದಿನ ರಾಷ್ಟ್ರೀಯ ಶಿಕ್ಷಣ ನೀತಿ 2020 ಹೇಳುವಂತೆ; ಪೀಠಿಕೆಯಲ್ಲಿರುವ ಮೌಲ್ಯಗಳು, 'ಇಡೀ ಶಿಕ್ಷಣ ವ್ಯವಸ್ಥೆಯ ಮತ್ತು ಅದರಲ್ಲಿನ ಪ್ರತಿಯೊಂದು ಸಂಸ್ಥೆಗೂ ಮಾರ್ಗದರ್ಶನ ನೀಡುವ ಮೂಲಭೂತ ತತ್ವಗಳಾಗಿವೆ.

ಈ ನೆಲೆಯಲ್ಲಿ ನೋಡುವಾಗ, ನಾವು ನಮ್ಮ ತರಗತಿಗಳಲ್ಲಿ ಸಂವಿಧಾನದ ಪೀಠಿಕೆಯನ್ನು ಓದಿ, ಕಲಿತು, ಕಂಠಪಾಠ ಮಾಡಿ, ಸಂವಾದಾತ್ಮಕ ಮತ್ತು ಪ್ರಯೋಗಾತ್ಮಕ ವಿಧಾನಗಳ ಮೂಲಕ ಹೊರತೆಗೆಯುವುದು ಬಹಳ ಮಹತ್ವದ್ದಾಗಿದೆ. ಇದನ್ನು ನಮ್ಮ ಸುತ್ತಮುತ್ತಲಿನವರ ಜೊತೆಗೆ ಕ್ರಿಯಾಶೀಲವಾಗಿ ಬೆರೆತು ವಿಭಿನ್ನ ರೂಪಗಳಲ್ಲಿ ಯುವ ನಾಗರಿಕರಿಗೆ ಅನುಭವದ ಮೂಲಕ ಪೀಠಿಕೆ ಮತ್ತು ಅದರ ಮೌಲ್ಯಗಳನ್ನು ಸಜೀವವಾಗಿರಿಸಿಕೊಳ್ಳಲು ಸಹಕರಿಸಬಹುದು.

**ಪರಾಮರ್ಶನ:**

A short film on the campaign – Constitution at 70 campaign: https://youtu.be/jXxQYZ9KayA

Find more resource materials here: https://www.wethepeople.ooo/resource-center



**ಅಸ್ಮಿತಾ ತಿವಾರಿ** ‘ವೀ, ದಿ ಪೀಪಲ್ ಅಭಿಯಾನ್ ದಲ್ಲಿ ಕಾರ್ಯಕ್ರಮ ವ್ಯವಸ್ಥಾಪಕಿಯಾಗಿದ್ದಾರೆ. ಕಳೆದ ಮೂರು ವರ್ಷಗಳಿಂದ ಅಭಿವೃದ್ಧಿ ವಿಭಾಗದಲ್ಲಿ ತೊಡಗಿಸಿಕೊಂಡಿದ್ದಾರೆ. ಯಿಅವರು ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಮತ್ತು ಎಂ.ಎಡ್ ಪದವಿ ಪಡೆದಿದ್ದಾರೆ. ಡಬ್ಲ್ಯೂಟಿಪಿಎಯಲ್ಲಿ ಅವರು ವಿವಿಧ ಸ್ತರಗಳನ್ನು ತಲುಪಬಲ್ಲ ಸಂದರ್ಭೋಚಿತ, ಪ್ರತಿಫಲನಾತ್ಮಕ ಮತ್ತು ಸಹಭಾಗಿತ್ವದ  ಪಠ್ಯಗಳನ್ನು ಅಭಿವೃದ್ಧಿಪಡಿಸುವುದು ಹಾಗು ಅವುಗಳ ಪರಿಣಾಮ ಗಮನಿಸುವ ಹೊಣೆಗಾರಿಕೆ ಹೊಂದಿದ್ದಾರೆ. ಅವರ ಸಂಪರ್ಕಕ್ಕೆ: asmyta.tiwari@wethepeople.com

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ನಾಗಮಣಿ ಎಸ್.ಎನ್.**

# ಮಂತ್ರಿ ಮಂಡಲದ ಮೂಲಕ ಪೌರತ್ವ ಶಿಕ್ಷಣ

ಗುರುರಾಜ್‌ರಾವ್ ಕೆ.

ತನ್ನ ಎಲ್ಲ ಯೋಜಿತ ಹಾಗೂ ವ್ಯವಸ್ಥಿತ ಪ್ರಕ್ರಿಯೆಗಳ ಮೂಲಕ ಪೌರತ್ವ ಶಿಕ್ಷಣವನ್ನು ಒದಗಿಸುವ ಏಕೈಕ ಉದ್ದೇಶವನ್ನು ಹೊಂದಿರುವ ಸಂಸ್ಥೆ ಎಂದರೆ ಅದು ಶಾಲೆ. ಇಂತಹ ಪ್ರಕ್ರಿಯೆಗಳಲ್ಲಿ ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳು ಕೂಡ ಸೇರಿವೆ. ಕೆಲವು ವಿಶಿಷ್ಟ ವಿಧಾನಗಳ ಮೂಲಕ ಪೌರತ್ವ ಶಿಕ್ಷಣವನ್ನು ನೀಡುವಲ್ಲಿ ಯಶಸ್ವಿಯಾದ ಇಮಾಲ್‌ಪುರದ ನಮ್ಮ ಶಾಲೆಯ ಅನುಭವವನ್ನು ಇಲ್ಲಿ ನಿಮ್ಮೊಂದಿಗೆ ಹಂಚಿಕೊಳ್ಳುತ್ತೇನೆ.

**ನಮ್ಮ ಪ್ರಯೋಗ**

ಯಾದಗಿರಿ ಜಿಲ್ಲೆಯ ಇಮಾಲ್‌ಪುರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಂದರಿಂದ ಏಳನೇ ತರಗತಿಯವರೆಗೆ ಸುಮಾರು 200 ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಾರೆ. ಕರ್ನಾಟಕದ ಗಡಿ ಪ್ರದೇಶದಲ್ಲಿರುವ ಈ ಶಾಲೆಯ ಬಹುತೇಕ ವಿದ್ಯಾರ್ಥಿಗಳ ಮಾತೃಭಾಷೆ ತೆಲುಗು. 2012ರಿಂದ 2015ರ ತನಕ ನಾನು ಈ ಶಾಲೆಯಲ್ಲಿ ಮುಖ್ಯ ಶಿಕ್ಷಕರಿಗಾಗಿ ಆಯೋಜಿಸಲಾದ ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ (School Leadership Development Programme -SLDP) ದಲ್ಲಿ ದುಡಿದಿದ್ದೆ. ಈ ಕಾರ್ಯಕ್ರಮದ ಭಾಗವಾಗಿ ಪ್ರತಿಯೊಬ್ಬ ಮುಖ್ಯ ಶಿಕ್ಷಕರು ಶಾಲೆಯಲ್ಲಿ ಒಂದು ಯೋಜನೆಯ ರೂಪದಲ್ಲಿ ಹೊಸ ಉಪಕ್ರಮವನ್ನು ಆರಂಭಿಸಿ ಶಾಲೆಯ ಎಲ್ಲ ಭಾಗೀದಾರರೊಂದಿಗೆ ಸೇರಿ ಅದರಲ್ಲಿ ಕಾರ್ಯನಿರ್ವಹಿಸಬೇಕು. ಈ ಅನುಭವದಿಂದ ಅವರು ಕಲಿಕೆಯನ್ನೂ ಪಡೆಯಬೇಕಾಗಿತ್ತು.

ಈ ಶಾಲೆಯಲ್ಲಿ ಆಗ ಮುಖ್ಯ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದವರು ಬಸಪ್ಪ. ಸಹಾಯಕ ಶಿಕ್ಷಕರಾಗಿ 20 ವರ್ಷಗಳ ಅನುಭವ ಹೊಂದಿದ್ದ ಅವರು ಎಂಟು ವರ್ಷಗಳಿಂದ ಮುಖ್ಯ ಶಿಕ್ಷಕರಾಗಿದ್ದರು. ಒಂದು ಮಂತ್ರಿ ಮಂಡಲವನ್ನು (ಸಚಿವ ಸಂಪುಟ) ರಚಿಸಿ ಅದನ್ನು ಕಾರ್ಯರೂಪಕ್ಕೆ ತರುವ ಮೂಲಕ ಶಾಲೆಯಲ್ಲಿ ಪ್ರಜಾಸ–ತ್ತಾತ್ಮಕವಾದ ಪರಿಸರವನ್ನು ಸೃಷ್ಟಿಸುವುದು ಅವರಿಗೆ ದೊರೆತ ಕಾರ್ಯಯೋಜನೆಯಾಗಿತ್ತು. ಇದು ಸಾಂವಿಧಾನಿಕ ಮೌಲ್ಯಗಳು ಮತ್ತು ಪೌರತ್ವ ಶಿಕ್ಷಣವನ್ನು ಉತ್ತೇಜಿಸುವುದರಿಂದ, ಆ ಬ್ಲಾಕ್‌ನ ಉಳಿದೆಲ್ಲ ಮುಖ್ಯ ಶಿಕ್ಷಕರು ಆಯ್ಕೆ ಮಾಡಿಕೊಂಡ ವಿಷಯಗಳಿಗಿಂತ ಇದು ವಿಶಿಷ್ಟವಾದ ಉಪಕ್ರಮವಾಗಿತ್ತು. ಅದಾಗಲೇ ಆ ಶಾಲೆಯಲ್ಲಿ ಈ ಸಂಬಂಧದ ಕೆಲಸ ಆರಂಭವಾಗಿತ್ತು ಮತ್ತು ಮುಖ್ಯ ಶಿಕ್ಷಕರು ಇದನ್ನು ಮುಂದುವರಿಸಿ ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮದವರೆಗೆಉಳಿಸಿಕೊಳ್ಳಲು ಬಯಸಿದ್ದರು.

ಶಾಲೆಯಲ್ಲಿ ಬಲಿಷ್ಠವಾದ ಮಂತ್ರಿ ಮಂಡಲವನ್ನು ರಚಿಸುವ ಸಂಬಂಧ ಮುಖ್ಯ ಶಿಕ್ಷಕರು ಮತ್ತು ಶಿಕ್ಷಕರು ಎಲ್ಲ ವಿದ್ಯಾರ್ಥಿಗಳ ಜೊತೆ ವಿಸ್ತೃತವಾದ ಸಭೆಯನ್ನು ನಡೆಸಿದ್ದರು. ಮಂತ್ರಿ ಮಂಡಲದ ಸದಸ್ಯರಾಗಿ ನಿರ್ಧಾರಗಳನ್ನು ಕೈಗೊಳ್ಳಲು ಮತ್ತು ಕರ್ತವ್ಯವನ್ನು ನಿಭಾಯಿಸಲು ಮುಕ್ತ ಹಾಗೂ ಭಯರಹಿತವಾದ ವಾತಾವರಣವನ್ನು ಕಲ್ಪಿಸುವುದಾಗಿ ಅವರು ಮಕ್ಕಳಿಗೆ ಭರವಸೆಯನ್ನು ನೀಡಿದರು. ಶಾಲಾ ಪ್ರಕ್ರಿಯೆಗಳನ್ನು ಮಂತ್ರಿ ಮಂಡಲವೇ ನಡೆಸುತ್ತದೆ ಮತ್ತು ಶಾಲೆಯಲ್ಲಿ ಪ್ರಜಾಸತ್ತಾತ್ಮಕವಾದ ಪ್ರಕ್ರಿಯೆಗಳನ್ನು ಅನುಷ್ಠಾನಕ್ಕೆ ತರುವ ಹಕ್ಕನ್ನು ಕೂಡ ಹೊಂದಿರುತ್ತದೆ ಎಂದು ಅವರಿಗೆ ವಿವರಿಸಲಾಯಿತು. ಇವುಗಳಲ್ಲಿ, ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಕೇಳುವ ಹಕ್ಕು, ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಮತ್ತು ಶಾಲೆಯ ಎಲ್ಲ ಪ್ರಕ್ರಿಯೆಗಳಲ್ಲಿ ಸಮಾನ ಪಾಲುದಾರರಾಗುವ ಹಕ್ಕುಗಳು ಕೂಡ ಸೇರಿದ್ದವು.ಇದಕ್ಕಾಗಿ ನಾಮಪತ್ರ ಸಲ್ಲಿಕೆ ಮತ್ತು ಮತ ಚಲಾವಣೆಯ ಮೂಲಕ ಸೂಕ್ತ ರೀತಿಯಲ್ಲಿ ಚುನಾವಣೆ ನಡೆದು ಮಂತ್ರಿ ಮಂಡಲವನ್ನು ರಚನೆ ಮಾಡಲಾಯಿತು. ಈ ಸಚಿವ ಸಂಪುಟದಲ್ಲಿ ಪ್ರಧಾನಮಂತ್ರಿ ಮತ್ತು ಶಿಕ್ಷಣ, ಸಂಸ್ಕೃತಿ, ಸ್ವಚ್ಛತೆ, ಪರಿಸರ, ಹಣಕಾಸು ಸಚಿವರು ಮತ್ತು ಇತರ ಸದಸ್ಯರು ಒಳಗೊಂಡಿದ್ದರು. ಎಲ್ಲ ಸದಸ್ಯರನ್ನು ಇದರಲ್ಲಿ ಸೇರ್ಪಡೆಗೊಳಿಸಿ ಅವರು ವಹಿಸಬೇಕಾದ ಪಾತ್ರಗಳು ಮತ್ತು ಜವಾಬ್ದಾರಿಗಳನ್ನು ಪರಿಚಯ ಮಾಡಿಸಲಾಯಿತು. ತಕ್ಷಣ ಚುನಾಯಿತ ಸದಸ್ಯರು ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಶುರುಮಾಡಿದರು. ವಿದ್ಯಾರ್ಥಿಗಳಲ್ಲಿ ತಮ್ಮ ಪಾತ್ರಗಳಿಗೆ ಸಂಬಂಧಿಸಿದಂತೆ ಇದ್ದ ಅನುಮಾನಗಳನ್ನು ಸ್ಪಷ್ಟಪಡಿಸುವ ಮೂಲಕ ಬೆಂಬಲ ನೀಡುವ ಕೆಲಸವನ್ನು ಸಹಾಯಕ ಶಿಕ್ಷಕರಾದ ಬಸಪ್ಪ ಮತ್ತು ವೆಂಕಟೇಶ ಅವರು ನಿರ್ವಹಿಸಿದರು. ವಿದ್ಯಾರ್ಥಿಗಳು ತಮ್ಮತಮ್ಮ ಪಾತ್ರಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವ ಹೊತ್ತಿಗೆ ಸುಮಾರು ಆರು ತಿಂಗಳುಗಳೇ ಕಳೆದಿದ್ದವು. ಆ ಹೊತ್ತಿಗೆ ಶಾಲೆಯಲ್ಲಿ ಅದರ ಪರಿಣಾಮಗಳು ಎದ್ದುಕಾಣಿಸಲು ಆರಂಭವಾಗಿತ್ತು. ಮಕ್ಕಳು ತಮ್ಮ ಶಿಕ್ಷಕರನ್ನು ಕೂಡ ಪ್ರಶ್ನೆ ಮಾಡಲು ಶುರುಮಾಡಿದ್ದರು. ಅದರ ಕೆಲವು ಉದಾಹರಣೆಗಳು ಇಲ್ಲಿವೆ:

- ಶಾಲೆಗೆ ತಡವಾಗಿ ಬಂದ ಶಿಕ್ಷಕರನ್ನು ಪ್ರಶ್ನೆ ಮಾಡಲು ವಿದ್ಯಾರ್ಥಿಗಳು ಆರಂಭಿಸಿದರು.
- ಶಾಲೆಯಲ್ಲಿ ಸಂಪನ್ಮೂಲ ಕೊರತೆ ಇರುವ ಬಗ್ಗೆ ಅವರು ಮುಖ್ಯ ಶಿಕ್ಷಕರಿಗೆ ಅಧಿಕೃತವಾಗಿ ದೂರನ್ನು ನೀಡಿದರು. ಉದಾಹರಣೆಗೆ, ಚಾಕ್‌ಪೀಸ್, ಡಸ್ಟರ್‌ಗಳು, ಕುಡಿಯುವ ನೀರಿನ ಮಡಕೆಗಳು ಮತ್ತು ಶಿಕ್ಷಕರಿಗೆ ಬೇಕಾದ ಇತರ ಸಾಮಗ್ರಿಗಳು.
- ಹಲವು ಬಾರಿ ಜ್ಞಾಪಿಸಿದರೂ ತರಗತಿ ಕೊಠಡಿಗಳನ್ನು ಸ್ವಚ್ಛವಾಗಿಡದೇ ಇದ್ದುದಕ್ಕೆ ಮತ್ತು ಶಾಲಾ ಆವರಣದಲ್ಲಿ ಕುಡಿಯುವ ನೀರಿನ ಪಾತ್ರೆಗಳನ್ನು ಇಡದಿರುವ ಕಾರಣಕ್ಕೆ ಬೆಳಗಿನ ಸಭೆಯ ವೇಳೆ ಶಾಲಾ ಸಹಾಯಕರು ಉತ್ತರ ನೀಡುವಂತೆ ಮಾಡಲಾಯಿತು.

ಮಕ್ಕಳಿಗೆ ಕಠಿಣ ಶಿಕ್ಷೆ (ಅಥವಾ ಅವರಿಗೆ ಏಟು)ನೀಡಿದ ಅಥವಾ ಯಾವುದೇ ರೀತಿಯಲ್ಲಿ ತೇಜೋವಧೆ ಮಾಡಿದ ಶಿಕ್ಷಕರ ಹೆಸರುಗಳನ್ನು ಪ್ರಸ್ತಾಪ ಮಾಡಲಾಯಿತು. ಶಾಲೆಯಲ್ಲಿ ನೈಜವಾದ ಪ್ರಜಾಪ್ರಭುತ್ವ ಜಾರಿಯಲ್ಲಿರುವುದು ಮಕ್ಕಳ ಅನುಭವಕ್ಕೆ ಬರತೊಡಗಿತು. ಎಲ್ಲ ಚುನಾಯಿತ ಸದಸ್ಯರು ಪ್ರತಿ ತಿಂಗಳು ಸಭೆ ಸೇರುತ್ತಿದ್ದರು. ಅಲ್ಲಿ ಶಾಲೆಗೆ ಸಂಬಂಧಿಸಿದ ವಿಷಯಗಳು ಮತ್ತು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸಲಾಗುತ್ತಿತ್ತು. ಮುಖ್ಯ



ಶಿಕ್ಷಕರ ಅಭಿಪ್ರಾಯದ ಪ್ರಕಾರ ಮಕ್ಕಳಲ್ಲಿ ಆತ್ಮವಿಶ್ವಾಸ ಹೆಚ್ಚಿತ್ತು ಅಲ್ಲದೆ ಶಿಕ್ಷಕರು ಹಾಗೂ ಹಿರಿಯರಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಲ್ಲಿ ಮಕ್ಕಳಲ್ಲಿದ್ದ ಭಯ ಕಡಿಮೆಯಾಗಿತ್ತು. ವಿದ್ಯಾರ್ಥಿಗಳು ಅನೇಕ ವಿಧಗಳಲ್ಲಿ ಉತ್ತಮ ನಡವಳಿಕೆಯನ್ನು ತೋರುತ್ತಿದ್ದರು, ನಿಯಮಿತವಾಗಿ ಶಾಲೆಗೆ ಬರಲು ಆರಂಭಿಸಿದರು, ಕಾರ್ಯನಿಯೋಜನೆಗಳನ್ನು ಪೂರ್ತಿಗೊಳಿಸುತ್ತಿದ್ದರು, ತರಗತಿಗಳಲ್ಲಿ ಪಾಠವನ್ನು ಗಮನವಿಟ್ಟು ಕೇಳುತ್ತಿದ್ದರು ಹಾಗೂ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಿದ್ದರು.

**ಲಾಭದಾಯಕ ಫಲಿತಾಂಶಗಳು**

- ಪ್ರತಿ ವರ್ಷ ಮಂತ್ರಿ ಮಂಡಲದ ಸದಸ್ಯರಾಗಲು ಬೇಡಿಕೆ ಹೆಚ್ಚಾಗತೊಡಗಿತು. ಅನುಭವೀ ವಿದ್ಯಾರ್ಥಿಗಳು ತಮ್ಮ ಪಾತ್ರಗಳನ್ನು ನಿರ್ವಹಿಸಲು ಕಿರಿಯ ಸದಸ್ಯರನ್ನು ಸೇರ್ಪಡೆ ಮಾಡಿಕೊಳ್ಳಲು ಆರಂಭಿಸಿದರು. ಬಹುಮುಖ್ಯವಾಗಿ ಮಕ್ಕಳಲ್ಲಿ ಪ್ರಶ್ನಿಸುವ ಸಾಮರ್ಥ್ಯ ಬೆಳೆಯಿತು. ಶಾಲೆಯಲ್ಲಿ ಅವರು ಎಲ್ಲವನ್ನೂ ಪ್ರಶ್ನೆ ಮಾಡಲು ಆರಂಭಿಸಿದರು. ಇದರಿಂದ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಹೆಚ್ಚು ಉತ್ತರದಾಯಿಗಳಾಗುವ ಮತ್ತುತಮ್ಮ ತಮ್ಮ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸುವಂತೆ ಮಾಡುವ ಪ್ರವೃತ್ತಿ ಬೆಳೆಯಿತು. ಈ ಕಾರಣದಿಂದಾಗಿ ಸುತ್ತಮುತ್ತಲ ಪ್ರದೇಶದಲ್ಲಿ ಶಾಲೆಗೆ ಹೆಚ್ಚಿನ ಹೆಸರು ಬರತೊಡಗಿತು. ಹತ್ತಿರದ ಶಾಲೆಗಳ ಶಿಕ್ಷಕರು, ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು (ಬಿಆರ್‌ಪಿಗಳು) ಹಾಗೂ ಮಕ್ಕಳು ಶಾಲೆಗೆ ಭೇಟಿ ನೀಡಲು ಆರಂಭಿಸಿದರು. ಮಕ್ಕಳಲ್ಲಿ ಹೆಚ್ಚಿರುವ ಆತ್ಮವಿಶ್ವಾಸವನ್ನು ಹಾಗೂ ಈಗ ಶಾಲೆಯ ಎಲ್ಲ ನಿರ್ಧಾರಗಳನ್ನು ಕೈಗೊಳ್ಳುತ್ತಿರುವ ಮಂತ್ರಿ ಮಂಡಲದ ಕಾರ್ಯವೈಖರಿಯನ್ನು ಅವರು ಕಣ್ಣಾರೆ ಕಂಡರು. ಮೂರು ವರ್ಷಗಳ ಅವಧಿಯಲ್ಲಿ ಅವರು ನಿರ್ವಹಿಸಿದ ಕೆಲಸಗಳ ಕೆಲವು ಉದಾಹರಣೆಗಳು ಇಲ್ಲಿವೆ:ಶಾಲೆಯಲ್ಲಿ ಪಠ್ಯಪುಸ್ತಕಗಳ ಕೊರತೆಯಿತ್ತು ಮತ್ತು ಮಕ್ಕಳು ಇದನ್ನು ಪರಿಹರಿಸುವಂತೆ ನಿರಂತರವಾಗಿ ಮುಖ್ಯ ಶಿಕ್ಷಕರಿಗೆ ದೂರು ನೀಡುತ್ತಿದ್ದರು. ಒಂದು ದಿನ, ಪಠ್ಯಪುಸ್ತಕ ವಿತರಣೆಯ ಜವಾಬ್ದಾರಿಯನ್ನು ಹೊತ್ತಿದ್ದ ಕ್ಷೇತ್ರ ಸಂಪನ್ಮೂಲ ವ್ಯಕ್ತಿ (Block Resource Person -BRP) ತನ್ನ ದೈನಂದಿನ ಕೆಲಸದ ಭಾಗವಾಗಿ ಶಾಲೆಗೆ ಭೇಟಿ ನೀಡಿದರು. ಈ ಸಂದರ್ಭದಲ್ಲಿ ಮಕ್ಕಳೆಲ್ಲರೂ ಅವರ ಸುತ್ತ ಸೇರಿ ಪಠ್ಯಪುಸ್ತಕ ಕೊರತೆಯ ಬಗ್ಗೆ ಪ್ರಶ್ನಿಸತೊಡಗಿದರು. ಈ ವಿಷಯವನ್ನು ಪರಿಹರಿಸುವುದಾಗಿ ಅವರು ವಿದ್ಯಾರ್ಥಿಗಳಿಗೆ ಭರವಸೆಯನ್ನು ನೀಡಿದರು. ಕೊಟ್ಟ ಮಾತಿನಂತೆ ಕೇವಲ ಮೂರೇ ದಿನಗಳಲ್ಲಿ ಮಕ್ಕಳಿಗೆ ಪಠ್ಯಪುಸ್ತಕಗಳು ಲಭ್ಯವಾದವು. ಇತರ ಶಾಲೆಗಳಲ್ಲಿಯೂ ಇಂತಹ ಉಪಕ್ರಮಗಳನ್ನು ಆರಂಭಿಸಲು ಶಿಕ್ಷಕರಿಗೆ ಪ್ರೇರಣೆ ನೀಡುವ ಸಲುವಾಗಿ ಕ್ಷೇತ್ರ ಸಂಪನ್ಮೂಲ ವ್ಯಕ್ತಿ (ಬಿಆರ್‌ಪಿ) ಅನೇಕ ಶಿಕ್ಷಕ ತರಬೇತಿ ವೇದಿಕೆಗಳಲ್ಲಿ ಈ ಘಟನೆಯನ್ನು ಹಂಚಿಕೊಳ್ಳುತ್ತಿದ್ದರು.

- ಶಾಲೆಯಲ್ಲಿ ಕೇವಲ ಒಂದು ಶೌಚಾಲಯ ಮಾತ್ರವಿತ್ತು. ಎಲ್ಲ 200 ವಿದ್ಯಾರ್ಥಿಗಳಿಗೆ ಅದನ್ನು ಉಪಯೋಗಿಸಲು ಸಾಕಾಗುತ್ತಿರಲಿಲ್ಲ. ಹೆಣ್ಣುಮಕ್ಕಳು ವಿರಾಮದ ಸಮಯದಲ್ಲಿ ಶೌಚಾಲಯ ಬಳಕೆಗಾಗಿ ತಮ್ಮ ಮನೆಗಳಿಗೆ ತೆರಳಬೇಕಾದ ಪರಿಸ್ಥಿತಿಯಿತ್ತು ಮತ್ತು ಅನೇಕ ಗಂಡುಮಕ್ಕಳು ಬಯಲು ಪ್ರದೇಶದಲ್ಲೇ ಶೌಚ ಮಾಡುತ್ತಿದ್ದರು. ಈ ವಿಷಯವನ್ನು ಮುಖ್ಯ ಶಿಕ್ಷಕರಿಗೆ ವಿವರಿಸಿದ ಮಂತ್ರಿ ಮಂಡಲವು ಶಾಲಾ ಅಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿ (School Development and Monitoring Committee -SDMC) ಸಹಯೋಗದೊಂದಿಗೆ ಶಾಲೆಯಲ್ಲಿ ಮಕ್ಕಳಿಗೆ ಶೌಚಾಲಯಗಳನ್ನು ನಿರ್ಮಿಸುವಂತೆ ಸ್ಥಳೀಯ ಗ್ರಾಮ ಪಂಚಾಯತ್‌ಗೆ ಮನವಿ ಮಾಡಿತು. ಮೂರು ತಿಂಗಳಾದರೂ ಶೌಚಾಲಯ ಸಮಸ್ಯೆಯು ಪರಿಹಾರ ಕಾಣದೇ ಇದ್ದಾಗ ವಿದ್ಯಾರ್ಥಿಗಳು ಗ್ರಾಮ ಪಂಚಾಯತ್ ಮುಂಭಾಗದಲ್ಲಿ ಶಾಂತಿಯುತವಾಗಿ ಪ್ರತಿಭಟನೆ ನಡೆಸಿದರು. ಶಾಲಾ

ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಾಣ ಮಾಡುವಂತೆ ಪಂಚಾಯತ್‌ಅನ್ನು ಒತ್ತಾಯಿಸಿದರು. ಈ ಒತ್ತಡಕ್ಕೆ ಮಣಿದ ಪಂಚಾಯತ್ ಕೇವಲ ಹತ್ತು ದಿನಗಳಲ್ಲಿ ತಾತ್ಕಾಲಿಕ ಶೌಚಾಲಯಗಳನ್ನು ನಿರ್ಮಾಣ ಮಾಡಿತು ಹಾಗೂ ಆರು ತಿಂಗಳಲ್ಲಿ ಹೊಸ ಶೌಚಾಲಯಗಳು ನಿರ್ಮಾಣಗೊಂಡವು. ಇನ್ನೊಂದು ಘಟನೆಯಲ್ಲಿ, ಶಾಲಾ ಆವರಣವನ್ನು ಸ್ವಚ್ಛಗೊಳಿಸಲು ನೇಮಕವಾಗಿರುವ ತಾತ್ಕಾಲಿಕ ಶಾಲಾ ಸಹಾಯಕ ಹೇಗೆ ತನ್ನ ಕರ್ತವ್ಯಗಳಿಂದ ನುಣುಚಿ-ಕೊಳ್ಳುತ್ತಿದ್ದಾನೆ ಮತ್ತು ಮುಖ್ಯ ಶಿಕ್ಷಕರಿಗೂ ಬೆದರಿಕೆಯೊಡ್ಡುತ್ತಿದ್ದ ಎಂಬುದನ್ನು ಕ್ಷೇತ್ರ ಶಿಕ್ಷಣಾಧಿಕಾರಿ (ಬಿಇಓ)ಗೆ ವಿದ್ಯಾರ್ಥಿಗಳು ವಿವರಿಸಿದರು. ಇದರ ಪರಿಣಾಮವಾಗಿ ಆ ಸಹಾಯಕನ ವಿರುದ್ಧ ಕ್ರಮವನ್ನು ಜರುಗಿಸಲಾಗಿತ್ತು. ಯಾವುದೇ ಪೂರ್ವಗ್ರಹ ಇಲ್ಲದೇ ಪರಿಸ್ಥಿತಿಯನ್ನು ಸೂಕ್ತ ರೀತಿಯಲ್ಲಿ ಮತ್ತು ಆತ್ಮವಿಶ್ವಾಸದಿಂದ ವಿವರಿಸಿದ ಮಕ್ಕಳು ಬಿಇಓ ಮೆಚ್ಚುಗೆಗೆ ಪಾತ್ರರಾಗಿದ್ದರು.

ಮಂತ್ರಿಮಂಡಲದ ಮೂಲಕ ಶಾಲೆಯಲ್ಲಿ ಒಂದು ಪ್ರಜಾಸತ್ತಾತ್ಮಕ ಪ್ರಕ್ರಿಯೆಯನ್ನು ಸೃಷ್ಟಿಸಲು ಆರಂಭಿಸಿದ ಈ ಉಪಕ್ರಮವು ವಿದ್ಯಾರ್ಥಿಗಳ ಮೇಲೆ ಮಹತ್ವದ ಪರಿಣಾಮವನ್ನು ಬೀರಿತು. ಅವರು ತಾರತಮ್ಯದ ವಿರುದ್ಧ ತಮ್ಮ ಧ್ವನಿ ಎತ್ತಲು, ಪ್ರಶ್ನೆಗಳನ್ನು ಕೇಳಲು ಮತ್ತು ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಲು ಸಮರ್ಥರಾಗಿದ್ದರು. ಇದು ಅವರಿಗೆ ಸರಿ ಯಾವುದು ಮತ್ತು ತಪ್ಪು ಯಾವುದು ಎಂಬುದನ್ನು ನಿರ್ಧರಿಸಲು ಸಹಾಯಕವಾಗಿತ್ತು ಮತ್ತು ಅವರ ಕರ್ತವ್ಯಗಳು ಹಾಗೂ ಜವಾಬ್ದಾರಿಗಳ ಬಗ್ಗೆ ಅರಿವು ಮೂಡುವಂತೆ ಮಾಡಿತ್ತು. ಈ ರೀತಿಯಲ್ಲಿ ಮಕ್ಕಳು ಪೌರತ್ವದ ಬಗ್ಗೆ ಮತ್ತು ಸಮಾಜದಲ್ಲಿ ಉತ್ತಮ ನಾಗರೀಕರಾಗುವುದು ಹೇಗೆ ಎಂಬುದರ ಬಗ್ಗೆ ಕಲಿತುಕೊಂಡರು. ಈ ರೀತಿ ಕೆಲಸ ಮಾಡುವ ಇನ್ನೂ ಕೆಲವು ಶಾಲೆಗಳು ಇರಬಹುದು. ಆದರೆ ಎಲ್ಲ ಶಾಲೆಗಳೂ ಪ್ರಜಾಪ್ರಭುತ್ವದ ಈ ವಿಧಾನವನ್ನು ಅನುಸರಿಸುವಂತಾಗಬೇಕು. ಮಕ್ಕಳು ತಮ್ಮ ಮನೆ, ಶಾಲೆ ಮತ್ತು ಗ್ರಾಮಗಳಲ್ಲಿ ಪ್ರಜಾಸತ್ತಾತ್ಮಕವಾದ ಮಾರ್ಗಗಳನ್ನು ಅನುಸರಿಸಲು ಕಲಿತರೆ ಅವರು ದೊಡ್ಡವರಾಗುತ್ತ ಸಕ್ರಿಯ ನಾಗರೀಕರಾಗಿ ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಗೌರವ ನೀಡುವುದನ್ನು ಕಲಿಯುತ್ತಾರೆ. ಈ ನಿಟ್ಟಿನಲ್ಲಿ ಶಾಲೆಯ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಪಾಲಕರು ನಿರಂತರವಾಗಿ ಪ್ರಯತ್ನಿಸಿದರೆ ಇದನ್ನು ಸಾಧಿಸಲು ಸಾಧ್ಯವಾಗುತ್ತದೆ.



**ಗುರುರಾಜ್‌ರಾವ್ ಕೆ.** ಅವರು ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಮಂಡ್ಯ ಕ್ಷೇತ್ರ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ (ಶಿಕ್ಷಕರ ಶಿಕ್ಷಕ) ಕಾರ್ಯನಿರ್ವಹಿಸುತ್ತಿದ್ದಾರೆ. ಶಿಕ್ಷಕರು, ಮುಖ್ಯ ಶಿಕ್ಷಕರು ಮತ್ತು ಶೈಕ್ಷಣಿಕ ಸಂಸ್ಥೆಗಳೊಂದಿಗೆ ಕೆಲಸ ಮಾಡಿರುವ ಅಪಾರ ಅನುಭವ ಅವರಿಗಿದೆ. ಶಿಕ್ಷಕರ ಬೋಧನಾ ವಿಧಾನದಲ್ಲಿ ಬದಲಾವಣೆಯನ್ನು ತರುವುದು ಮತ್ತು ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಕಲಿಕಾ ಗುಣಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಅವರು ಹೆಚ್ಚು ಕಾರ್ಯಪ್ರವೃತ್ತರಾಗಿದ್ದಾರೆ. ಅವರನ್ನು ಈ ಮಿಂಚಂಚೆಯ ಮೂಲಕ ಸಂಪರ್ಕಿಸಬಹುದು gururajrao.k@azimpremjifoundation.org

ಅನುವಾದ: **ಕುಶಾಲ್** । ಪರಿಶೀಲನೆ: **ನಾಗಮಣಿ ಎಸ್.ಎನ್.**

**ಪೌರತ್ವ ಶಿಕ್ಷಣದ ವಿಷಯ ಮತ್ತು ಗುರಿಗಳು ಏನಾಗಿರಬೇಕು? ಇದೊಂದು ಸರಳ ಪ್ರಶ್ನೆಯಲ್ಲ. ಸಾಧ್ಯವಿರುವ ಅನೇಕ ನಿಲುವುಗಳ ಬಗೆಗಿನ ಗಂಭೀರ ಅಸಮ್ಮತಿಯೊಂದಿಗೆ ಇದನ್ನು ಅನೇಕ ವಿಧಗಳಲ್ಲಿ ಉತ್ತರಿಸಬಹುದಾಗಿದೆ. ಇಂತಹ ಒಂದು ಪ್ರಶ್ನೆಯನ್ನು ಕೇಳುವುದು ಕೂಡ ಅಪಾಯಕಾರಿ. ಆದರೆ ಶಾಲೆಗಳು ಮತ್ತು ಶಿಕ್ಷಕರು ನಮ್ಮ ಕಾಲಘಟ್ಟಕ್ಕೆ ಪ್ರಸ್ತುತರಾಗಿರಲು ಬಯಸಿದರೆ ಮತ್ತು ತಮ್ಮ ವಿದ್ಯಾರ್ಥಿಗಳಿಗೆ ತಕ್ಕಮಟ್ಟಿನ ಅರ್ಥಪೂರ್ಣವಾದ ಸಂಗತಿಯನ್ನು ಕಲಿಸಲು ಬಯಸಿದರೆ ಅವರಿಗೆ ಇಂತಹ ಪ್ರಶ್ನೆಯನ್ನು ಎದುರಿಸಲು ಕೆಲವು ಆಯ್ಕೆಗಳಿರುತ್ತವೆ.**

**– ಅಮ್ಮನ್ ಮದನ್, ಪೌರತ್ವದ ವಿಭಿನ್ನ ಸಂಸ್ಕೃತಿಗಳು – ಯಾವುದನ್ನು ಕಲಿಸಬೇಕು? ಪುಟ-03**

# ಪದ್ಯವೊಂದು ಚರ್ಚೆಯ ಬಾಗಿಲು ತೆರೆದಾಗ

ನಂದಾ ಶರ್ಮ



ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಜೊತೆ ಕಾರ್ಯನಿರ್ವಹಿಸುವಾಗ ನಾವು ಏಕಲವ್ಯ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮದ 'ಖುಷಿ ಖುಷಿ' ಎಂಬ ಪಠ್ಯ ಪುಸ್ತಕಗಳನ್ನು ಆಗಾಗ ಬಳಸುತ್ತಿರುತ್ತೇವೆ. ಪದಗಳ ಕಾರ್ಡು, ಚಿತ್ರ-ಪದ ಕಾರ್ಡು, ಪದ್ಯದ ಭಿತ್ತಿಪತ್ರಗಳು ಮುಂತಾದ ಬೋಧನಾ-ಕಲಿಕಾ ಸಾಮಗ್ರಿಗಳನ್ನು (Teaching-Learning Materials -TLMs) ಕೂಡಾ ನಾವು ಉಪಯೋಗಿಸುತ್ತೇವೆ.

ಮಾತಿನ ಹಿಂಜರಿಕೆಯಿಂದ ಹೊರಬರಲು, ಪದ-ವಾಕ್ಯಗಳ ಗುರುತಿಸುವಿಕೆಗೆ ಸಹಾಯ ಮಾಡಲು ಮತ್ತು ಓದಿದ ಪಠ್ಯದ ಅರ್ಥವನ್ನು ಗ್ರಹಿಸುವಲ್ಲಿ ನೆರವಾಗಲು 1, 2 ಮತ್ತು 3ನೆಯ ತರಗತಿಯ ವಿದ್ಯಾರ್ಥಿಗಳಿಗೆ ಸಾಮಾನ್ಯವಾಗಿ ನಾವು ಪದ್ಯದ ಭಿತ್ತಿಪತ್ರಗಳನ್ನು ಬಳಸುತ್ತೇವೆ. ವಿದ್ಯಾರ್ಥಿಗಳು ಅನಾಯಾಸವಾಗಿ ಪದ್ಯದ ಭಿತ್ತಿಪತ್ರಗಳ ಆಧಾರದಲ್ಲಿ ವಿವಿಧ ಚಟುವಟಿಕೆಗಳನ್ನು ನಡೆಸಲು ಸಮರ್ಥರಾಗುವುದನ್ನು ನಾವು ನೋಡಿದ್ದೇವೆ. ಬಣ್ಣಹಚ್ಚುವುದು, ಪದಗಳ ಗುರುತಿಸುವಿಕೆ, ಗುರುತು ಹಿಡಿದ ಪದದ ಸುತ್ತ ವೃತ್ತ ಬರೆಯುವುದು, ನೋಟ್ ಪುಸ್ತಕದಲ್ಲಿ ವಾಕ್ಯಗಳನ್ನು ಬರೆಯುವುದು ಮತ್ತು ಸ್ವತಂತ್ರವಾಗಿ ಪದ್ಯ ರಚಿಸುವುದು- ಇವೆಲ್ಲ ಆ ಚಟುವಟಿಕೆಗಳ ವ್ಯಾಪ್ತಿಗೆ ಸೇರಿರುತ್ತವೆ.

ನಾನು ಇಲ್ಲಿ ಪದ್ಯ ಪೋಸ್ಟರ್‌ಗೆ ಸಂಬಂಧಿಸಿದಂತೆ ನನ್ನ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದೇನೆ. ಇದನ್ನು ನಾನು ಹೋಶಂಗಾಬಾದ್ ಗ್ರಾಮದ ಖೇಡ್ಲಾದಲ್ಲಿ ಇರುವ ಪ್ರಾಥಮಿಕ ಶಾಲೆಯಲ್ಲಿ ಬಳಸಿದ್ದೆ. ಈ ಅನುಭವ ಸಾಂವಿಧಾನಿಕ ಮೌಲ್ಯಗಳಾದ ಲಿಂಗ ಸಮಾನತೆ ಅಥವಾ ತರಗತಿಯಲ್ಲಿ ಸಮಾನತೆಯ ಚರ್ಚೆಗೆ ಅನುವು ಮಾಡಿದ್ದಲ್ಲದೆ ಪ್ರಾಥಮಿಕ ತರಗತಿಗಳಲ್ಲಿ ಪದ್ಯದ ಭಿತ್ತಿಪತ್ರಗಳನ್ನು ಬಳಸುವ ಸಾಮರ್ಥ್ಯದ ಕಡೆಗೆ ನನ್ನ ಗಮನ ಸೆಳೆಯಿತು.

ಕಲಾಮೀನಾ ಮತ್ತು ಪ್ರಗ್ಯಾ ಶರ್ಮ ಇಬ್ಬರೂ ಈ ಗ್ರಾಮದಲ್ಲಿ ಹಮಾರ ಘರ್ ಹಮಾರ ವಿದ್ಯಾಲಯ ಯೋಜನೆಯ ಅಡಿಯಲ್ಲಿ ಶಿಕ್ಷಕಿಯರಾಗಿದ್ದಾರೆ. ಕೋವಿಡ್-19 ಸಾಂಕ್ರಾಮಿಕದ ಕಾರಣ-ದಿಂದಾಗಿ ಅವರು ಕೆಲವು ವಿದ್ಯಾರ್ಥಿಗಳಿಗೆ ಮನೆಯಲ್ಲೇ ಪಾಠ ಮಾಡುತ್ತಾರೆ. ಖೇಡ್ಲ ಗ್ರಾಮಕ್ಕೆ ಒಂದು ದಿನ ನಾನು ಹೋದಾಗ, ಎಂದಿನಂತೆ ಶಿಕ್ಷಕಿಯರು ವಿದ್ಯಾರ್ಥಿಗಳನ್ನು ಎರಡು ಗುಂಪಾಗಿ ವಿಂಗಡಿಸಿದ್ದರು. ಕಲಾಮೀನಾ ಅವರು 1 ಮತ್ತು 2ನೇ ತರಗತಿಯ ವಿದ್ಯಾರ್ಥಿಗಳಿಗೆ ಗಣಿತ ಪಾಠ ಮಾಡುತ್ತಿದ್ದರು ಮತ್ತು ಪ್ರಗ್ಯಾ ಶರ್ಮ ಅವರು 3 ರಿಂದ 5ನೇ ತರಗತಿಯವರೆಗಿನ 5 ಮಕ್ಕಳಿಗೆ ಭಾಷಾ ಪಾಠವನ್ನು ಆರಂಭಿಸುವವರಿದ್ದರು. ನಾನು ಈ ಗುಂಪಿನಲ್ಲಿ ಕುಳಿತೆ.

'ಲಾಲಾಜಿ ಲಡ್ಡು ದೇ' (ಲಾಲಾಜಿ ಲಡ್ಡು ಕೊಡು) ಎಂಬ ಕವಿತೆಯ ಕುರಿತ ಪೋಸ್ಟರ್‌ಅನ್ನು ಶಿಕ್ಷಕಿ ಹಿಡಿದುಕೊಂಡಿದ್ದರು. ಎಲ್ಲರಿಗೂ ಫಲಕವು ಸರಿಯಾಗಿ ಕಾಣುವುದನ್ನು ಖಾತ್ರಿಪಡಿಸಿಕೊಂಡು, ಎಲ್ಲ ವಿದ್ಯಾರ್ಥಿಗಳ ಜೊತೆಗೆ ವೃತ್ತಾಕಾರದಲ್ಲಿ ಶಿಕ್ಷಕಿ ಕುಳಿತಿದ್ದರು. 3ನೇ ತರಗತಿಯ ಇಬ್ಬರು ಮಕ್ಕಳಿಗೆ ಓದುವುದಕ್ಕೆ ಬರುತ್ತಿರಲಿಲ್ಲ-ವಾದುದರಿಂದ ಶಿಕ್ಷಕಿ ಅವರ ಕಡೆಗೆ ಹೆಚ್ಚು ಗಮನ ಕೇಂದ್ರೀ-ಕರಿಸಿದ್ದರು. ಶಿಕ್ಷಕಿಯೇ ಕವಿತೆಯ ಶೀರ್ಷಿಕೆ 'ಲಾಲಾಜಿ ಲಡ್ಡೂ ದೋ' ಅನ್ನು ಗಟ್ಟಿಯಾಗಿ ಓದಿದರು. ಅನಂತರ ಪದ್ಯದ ಪೋಸ್ಟರ್‌ನಲ್ಲಿರುವ ಚಿತ್ರಕ್ಕೆ ಬಣ್ಣ ಹಚ್ಚಲು ಹೇಳಿದರು. ಹಾಗೆ ಮಾಡುವುದರಿಂದ ಫಲಕ ಸುಂದರವಾಗಿ ಕಾಣಿಸುತ್ತದೆ ಮತ್ತು ಓದುವುದಕ್ಕೆ ಇನ್ನೂ ಆಸಕ್ತಿದಾಯಕವಾಗಿರುತ್ತದೆ. ಶಿಕ್ಷಕಿ ಕ್ರೇಯಾನ್‌ಗಳನ್ನು ಮಕ್ಕಳ ಮುಂದೆ ಇರಿಸಿದರು.

ಮಕ್ಕಳೆಲ್ಲ ಪದ್ಯದ ಭಿತ್ತಿಪತ್ರದಲ್ಲಿನ ಚಿತ್ರಗಳನ್ನು ಬಹಳ ಎಚ್ಚರಿಕೆಯಿಂದ ನೋಡುವುದಕ್ಕೆ ಶುರು ಮಾಡಿದರು ಮತ್ತು ಪರಸ್ಪರ ಮಾತನಾಡಿಕೊಳ್ಳತೊಡಗಿದರು. ಒಂದು ಮಗು ಇನ್ನೊಂದು ಮಗುವಿಗೆ ಹೇಳಿತು – 'ನೀನು ಲಡ್ಡುಗೆ ಬಣ್ಣ ಹಚ್ಚು ನಾನು ಲಾಲಾಜಿಗೆ ಬಣ್ಣ ಹಚುತ್ತೇನೆ'. ವಿದ್ಯಾರ್ಥಿಗಳ ಸಂಭಾಷಣೆಗಳನ್ನು ಕೇಳುತ್ತಿದ್ದ ಶಿಕ್ಷಕಿಯರು ಮಧ್ಯಪ್ರವೇಶಿಸಿ ಹೇಳಿದರು, 'ನೋಡಿ, ನೀವೆಲ್ಲ ಸರದಿ ಪ್ರಕಾರ ಬಣ್ಣ ಹಚ್ಚಬೇಕು. ಒಬ್ಬರು ಲಾಡುವಿಗೆ ಬಣ್ಣ ಹಚ್ಚಲಿ. ಕೆಲವರು ಲಾಲಾಜಿ ಮುಖಕ್ಕೆ ಬಣ್ಣ ಹಚ್ಚಲಿ. ಮೂರನೇ ಮಗು ಲಾಲಾಜಿಯ ಕುರ್ತಾಕ್ಕೆ ಹಾಕಲಿ. ನಾಲ್ಕನೇ ಮಗು ಅವರ ತಲೆಗೂದಲಿಗೆ, ಇನ್ನೊಂದು ಮಗು ಅವರ ಮೀಸೆಗೆ ಹಚ್ಚಲಿ.' ಮಕ್ಕಳು ಮೀಸೆ ಎಂಬ ಪದ ಕೇಳುತ್ತಲೇ ಜೋರಾಗಿ ನಕ್ಕರು.

ಹುಡುಗಿಯೊಬ್ಬಳು ತಕ್ಷಣ ಕಪ್ಪು ಕ್ರೇಯಾನ್ ಎತ್ತಿಕೊಂಡು ಲಾಲಾಜಿಯ ಕೂದಲಿಗೆ ಬಣ್ಣ ಹಚ್ಚಲು ಶುರುಮಾಡಿದಳು. ಅವಳು ಮುಗಿಸಿದ ಕೂಡಲೇ ಎರಡನೆಯ ಮಗು ಕುರ್ತಾಕ್ಕೆ ಕೆಂಪು ಬಣ್ಣ ಹಚ್ಚಲು ಆರಂಭಿಸಿತು. ಮೂರನೆಯ ಮಗು ಲಾಡುಗಳಿಗೆ ಹಳದಿ ಬಣ್ಣ ಹಾಕಿತು. ಈಗ ಲಾಲಾಜಿಯ ಮೀಸೆಯ ಸರದಿ ಬಂತು. ಅದಕ್ಕೂ ಕಪ್ಪು ಬಣ್ಣ ನೀಡಲಾಯಿತು. ಕಡಿಮೆ ಅವಧಿಯಲ್ಲಿ ಫಲಕದಲ್ಲಿರುವ ಎಲ್ಲ ಚಿತ್ರಗಳಿಗೆ ಬಣ್ಣ ತುಂಬಿದರು.

ಶಿಕ್ಷಕಿ ಒಂದು ಮಗುವಿಗೆ ಎದ್ದು ನಿಂತು ಚಿತ್ರವನ್ನು ನೇರ ಹಿಡಿಯಲು ಹೇಳಿದರು. ಅನಂತರ ಪದ್ಯದ ಪ್ರತಿಯೊಂದು ಅಕ್ಷರದ ಮೇಲೆ ಬೆರಳಿಟ್ಟು ಆಕೆ ಪದ್ಯವನ್ನು ಓದಿದರು. ನಂತರ ಎಲ್ಲ ಮಕ್ಕಳಿಗೂ ಪ್ರತಿಯೊಂದು ಶಬ್ದದ ಮೇಲೆ ಬೆರಳಿಟ್ಟು ಕವಿತೆ ಓದಲು ಅವಕಾಶ ನೀಡಲಾಯಿತು. 3ನೇ ತರಗತಿಯ ಮಕ್ಕಳೂ ಪದಗಳನ್ನು ಗುರುತಿಸಬೇಕು ಎನ್ನುವ ಇರಾದೆ ಅಧ್ಯಾಪಕರಿಗೆ ಇದ್ದಂತೆ ಕಾಣಿಸುತ್ತದೆ. ಯಾಕೆಂದರೆ ಈ ಮಕ್ಕಳಿಗೆ ಓದಲು ಬರುತ್ತಿರಲಿಲ್ಲ. ಕೆಲ ಹೊತ್ತಿನ ನಂತರ ಶಿಕ್ಷಕಿ ವಿದ್ಯಾರ್ಥಿಗಳಿಗೆ ಕೆಲವು ಪ್ರಶ್ನೆಗಳನ್ನು ಕೇಳಿದರು.

ಶಿಕ್ಷಕಿ: 'ಮಗು ಲಾಲಾಜಿಯನ್ನು ಎಷ್ಟು ಲಾಡು ಕೊಡಲು ಕೇಳಿತು?'
ವಿದ್ಯಾರ್ಥಿಗಳು: 'ನಾಲ್ಕು'
ಶಿಕ್ಷಕಿ: 'ಇಲ್ಲ, ಒಂದು'
ಪದ್ಯದ ಪೋಸ್ಟರ್‌ಅನ್ನು ಮತ್ತೊಮ್ಮೆ ನೋಡುವುದರ ಮೂಲಕ ಅವರಿಗೆ ಸರಿಯುತ್ತರ ಸಿಕ್ಕಿತು.

ಶಿಕ್ಷಕಿ: 'ನಮ್ಮ ಗ್ರಾಮದಲ್ಲಿ ಲಾಲಾಜಿ ಅಂತಾ ಯಾರನ್ನು ಕರೆಯುತ್ತೇವೆ?'
ವಿದ್ಯಾರ್ಥಿಗಳು: 'ನಮ್ಮ ಭಾವನನ್ನು'

ಉತ್ತರ ಪುನರಾವರ್ತನೆ ಮಾಡುತ್ತಾ ಶಿಕ್ಷಕಿ ಹೇಳಿದರು, 'ಹೌದು, ಭಾವ ಅಥವಾ ಅಳಿಯನನ್ನು ನಾವು ಲಾಲಾಜಿ ಅಂತ ಕರೆಯುತ್ತೇವೆ. ಆದರೆ ಇಲ್ಲಿ ಸಿಹಿತಿಂಡಿ ಮಾರುವ ಸೇಠ್‌ಜಿಯನ್ನು ಲಾಲಾಜಿ ಎಂದು ಕರೆಯುತ್ತಿದ್ದಾರೆ'

ಶಿಕ್ಷಕಿ: 'ಮಗು ಲಾಲಾಜಿಯನ್ನು ಏನೆಂದು ಹೊಗಳುತ್ತದೆ? ಯಾರಿಂದಾದರೂ ನಿಮಗೆ ಏನಾದರೂ ಬೇಕಾಗಿದ್ದರೆ ನೀವು ಹೀಗೇ ಹೊಗಳುತ್ತೀರಾ?'

ವಿದ್ಯಾರ್ಥಿಗಳು: 'ಹೌದು, ನಾವು ನಮ್ಮ ಅಮ್ಮನನ್ನು ಹೊಗಳುತ್ತೇವೆ. ನಾವು ನಮ್ಮ ಅಜ್ಜಿಯನ್ನು ಹೊಗಳುತ್ತೇವೆ ಮತ್ತು ನಮ್ಮ ತಂದೆಯನ್ನು ಹೊಗಳುತ್ತೇವೆ.'

ಶಿಕ್ಷಕಿ: 'ನಿಮ್ಮ ತಾಯಿಯನ್ನು ಹೇಗೆ ಹೊಗಳುತ್ತೀರಿ?'

ವಿದ್ಯಾರ್ಥಿಗಳು: 'ಅಮ್ಮ ನೀನು ತುಂಬಾ ಚೆನ್ನಾಗಿ ಜಾಮೂನು ಮಾಡ್ತೀಯ ಅಂತ'

ಶಿಕ್ಷಕಿ: 'ನಿಮ್ಮ ಅಜ್ಜಿಯನ್ನು ಹೇಗೆ ಹೊಗಳುತ್ತೀರಿ?

ವಿದ್ಯಾರ್ಥಿಗಳು: 'ಅಜ್ಜಿ, ನೀವು ಭಜನೆ ಚೆನ್ನಾಗಿ ಹಾಡುತ್ತೀರಿ. ಕೇಳುವುದಕ್ಕೆ ಖುಷಿಯಾಗುತ್ತದೆ.'

ಶಿಕ್ಷಕಿ: 'ನಿಮ್ಮ ಮನೆಯಲ್ಲಿ ಲಾಡು ಮತ್ತು ಜಾಮೂನು ಯಾರು ಮಾಡುತ್ತಾರೆ?'

ವಿದ್ಯಾರ್ಥಿಗಳು: 'ಅಮ್ಮ'

ಶಿಕ್ಷಕಿ: 'ಹಾಗಾದರೆ ಲಾಲಾಜಿ ಅವರ ಮನೆಯಲ್ಲಿ ಲಾಡು ಯಾರು ಮಾಡಿರಬಹುದು?'

ವಿದ್ಯಾರ್ಥಿಗಳು: 'ಬಹುಶಃ ಅವರ ಹೆಂಡತಿ.'

ಶಿಕ್ಷಕಿ: 'ಲಾಲಾಜಿಯನ್ನು ಮಗು ಹೇಗೆ ಹೊಗಳಿತು?'

ವಿದ್ಯಾರ್ಥಿಗಳು: 'ಮಗು ಅವರ ಮೀಸೆಯನ್ನು ಹೊಗಳಿತು'

ಶಿಕ್ಷಕಿ: 'ಹಾಗಾದರೆ ಯಾರಿಗೆ ಮೀಸೆ ಇರುತ್ತದೆ'

ವಿದ್ಯಾರ್ಥಿಗಳು: 'ಗಂಡಸರಿಗೆ ಇರುತ್ತದೆ.'

ಶಿಕ್ಷಕಿ: 'ಗಂಡಸರಿಗೆ ಅಲ್ಲದೆ ಬೇರೆ ಯಾರಿಗಾದರೂ ಮೀಸೆ ಇರುವುದನ್ನು ನೋಡಿದ್ದೀರಾ?'

ವಿದ್ಯಾರ್ಥಿಗಳು: 'ಹೌದು, ಸಿಂಹ, ಬೆಕ್ಕು ಮತ್ತು ಇಲಿಗಳಿಗೂ ಮೀಸೆಗಳಿವೆ.'

ಆಗ ಅಲ್ಲೊಂದು ಮೆಲು ಧ್ವನಿ ಕೇಳಿ ಬಂತು, 'ಕೆಲವು ಹೆಂಗಸರಿಗೂ ಇದೆ.' ಕೆಲ ಹೊತ್ತಿನ ಹಿಂದೆ ಲಾಲಾಜಿ ಮೀಸೆಗೆ ನಾಚಿಕೆಯಿಂದಲೇ ಬಣ್ಣ ಹಾಕುತ್ತಿದ್ದ ಮಗುವಿನಿಂದ ಈ ಉತ್ತರ ಬಂತು. ಎಲ್ಲ ಮಕ್ಕಳು ಜೋರಾಗಿ ನಕ್ಕರು.

'ಯಾರಾದರೂ ಹೆಂಗಸರಿಗೆ ಮೀಸೆ ಇರುವುದನ್ನು ನೀವು ನೋಡಿದ್ದೀರಾ?'

ಮಕ್ಕಳೆಲ್ಲಾ ಒಂದು ಕ್ಷಣ ಮೌನವಾದರು. ಕೆಲವು ಹೆಂಗಸರಿಗೆ ತೆಳ್ಳನೆಯ ಮೀಸೆ ಇರುವುದನ್ನು ಮತ್ತು ದಪ್ಪ ಮೀಸೆ ಇಲ್ಲದ್ದನ್ನು ನೋಡಿದ್ದೇವೆ ಎಂದು ಒಂದಷ್ಟು ಮಕ್ಕಳು ಹಿಂಜರಿಕೆಯಿಂದಲೇ ಹೇಳಿದರು.

ದೇಹದಲ್ಲಿ ಕೂದಲು ಬೆಳೆಯಲು ಹಾರ್ಮೋನು ಕಾರಣವೆಂದು ಇದು ಹೆಂಗಸರಿಗೆ ಗಂಡಸರಿಗೆ ಇಬ್ಬರಿಗೂ ಇದೆಯೆಂದು ಶಿಕ್ಷಕಿ ವಿದ್ಯಾರ್ಥಿಗಳಿಗೆ ಹೇಳಿದರು.

ನಾವು ಈಗ ಚರ್ಚೆಯ ಆಳಕ್ಕೆ ಹೋಗುತ್ತಿರುವಂತೆ ಕಾಣಿಸಿತು. ಆದರೆ ಆ ದಿನದ ತರಗತಿ ಮುಗಿಯಿತು. ನಮಗೆ ಮತ್ತು 4ನೇ ತರಗತಿಯ ವಿದ್ಯಾರ್ಥಿಗಳ ಜೊತೆಗೆ ಕೆಲವು ಭಾಷಾ ಕಲಿಕೆಯ ಚಟುವಟಿಕೆಗಳನ್ನು ಮಾಡುವುದಕ್ಕೆ ಸಾಧ್ಯವಾಯಿತು. ಆದರೆ ಪದ್ಯದ ಭಿತ್ತಿಫಲಕದಿಂದ ಮತ್ತೇನು ಕಲಿಯಬಹುದು ಎನ್ನುವುದು ನನಗೆ ಅರ್ಥ ಮಾಡಿಕೊಳ್ಳುವುದಕ್ಕೆ ಆಗಲಿಲ್ಲ. ಆ ದಿನ ನಾವೇನನ್ನೋ ಮರೆತೆವು ಎಂದು ನನಗೆ ಅನ್ನಿಸುತ್ತಿತ್ತು. ಆದರೆ ಏನನ್ನು ಎಂದು ಬೊಟ್ಟು ಮಾಡಿ ತೋರಿಸುವುದಕ್ಕೆ ಆಗಲಿಲ್ಲ.

2005ಕ್ಕಿಂತ ಮೊದಲಿನ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ (ಎನ್.ಸಿ.ಎಫ್) ಪುಸ್ತಕಗಳೆಲ್ಲ ಲಿಂಗ ಆಧಾರಿತ ಅಸಮಾನತೆಯನ್ನು ಚಿತ್ರಿಸಿವೆ. ಪಾಠಾಭ್ಯಾಸಗಳಲ್ಲಿ ಭಾರೀ ಪೂರ್ವಗ್ರಹಗಳು ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ ಪಠ್ಯಪುಸ್ತಕಗಳಲ್ಲಿ ಪುರುಷ ಬರಹಗಾರರ ಪಾರಮ್ಯವಿದೆ. ಅಂತಹ ಪುಸ್ತಕಗಳ ವಸ್ತು ಕೂಡ ಪುರುಷ ಕೇಂದ್ರಿತವಾಗಿದೆ. ಹೆಚ್ಚಿನೆಲ್ಲ ಪುಸ್ತಕಗಳಲ್ಲಿರುವ ವಿವರಣೆಗಳು ಮಹಿಳೆಯನ್ನು ತಾಯಿ, ಸಹೋದರಿ ಅಥವಾ ಗೃಹಿಣಿಯಂತೆ ಚಿತ್ರಿಸುತ್ತವೆ. ಗಂಡಸರನ್ನು ಕುಟುಂಬದ ನಿರ್ವಹಣೆಗಾಗಿ ದುಡಿಯುವವರು ಅಥವಾ ಜವಾಬ್ದಾರಿಯುತ ಪಾತ್ರದಲ್ಲಿ ಇರುವವರು ಎಂಬಂತೆ ತೋರಿಸಲಾಗಿದೆ.

ಈ ವಿಚಾರದಲ್ಲಿ ಆಳವಾಗಿ ಯೋಚಿಸುತ್ತಿದ್ದ ಹಾಗೆ ನಾನು ನನ್ನ ಗೆಳತಿಯೊಬ್ಬಳೊಡನೆ ಈ ಅನುಭವವನ್ನು ಹಂಚಿಕೊಂಡೆ. ಅವಳು ಇದೇ ಲಾಲಾಜಿ ಕವಿತೆಯ ಬಗ್ಗೆ ಮಕ್ಕಳಲ್ಲಿ ಮಾತನಾಡುವಾಗ, ಲಾಲಾಜಿಗೆ ಹೊಟ್ಟೆನೋವು ಬಂದಿದೆ ಎಂದೂ ಲಾಲಾಜಿಯ ಹೆಂಡತಿ ಅಂಗಡಿಯನ್ನು ನಡೆಸುತ್ತಾಳೆ ಎಂದು ಭಾವಿಸಿಕೊಳ್ಳಲು ವಿದ್ಯಾರ್ಥಿಗಳಿಗೆ ತಿಳಿಸಿದ್ದಳು. ಹಾಗೆ ಲಾಲಾಜಿಯ ಹೆಂಡತಿಯನ್ನು ಗಮನದಲ್ಲಿಟ್ಟು ಅದಕ್ಕೆ ಸರಿಯಾಗಿ ಕವಿತೆಯನ್ನು ಪರಿವರ್ತಿಸಿ ವಾಚಿಸಲು ಹೇಳಿದೆ. ಕೆಲವು ಮಕ್ಕಳು ತತ್‌ಕ್ಷಣ ಲಾಲಾಜಿಯಿಂದ ಲಾಲೈನ್ (ಲಾಲಾಜಿಯ ಪತ್ನಿ)ಗೆ ಬದಲಾಯಿಸಿದ್ದರು. ಆದರೆ ಆಕೆಯನ್ನು ಹೊಗಳುವುದು ಹೇಗೆ ಎಂದು ಗೊತ್ತಾಗದೇ ನಿಲ್ಲಿಸಿದರು. ಲಾಲಾಜಿಗೆ ಹುಷಾರಿಲ್ಲದಿದ್ದರೆ ಅವರ ಮಗ ಅಂಗಡಿ ನಡೆಸಬೇಕೆಂದು ಕೆಲವು ಮಕ್ಕಳು ವಾದಿಸಿದರು. ಬದಲಾದ ಪದ್ಯದ ಪೋಸ್ಟರ್ ವಿವರಗಳನ್ನು ಹೇಳದೆ ನಾನು ಇಲ್ಲಿಗೆ ನಿಲ್ಲಿಸುತ್ತೇನೆ. ನಿಜವಾಗಿಯೂ ಈ ಸಂಭಾಷಣೆಯಿಂದ ನಾನು ಹೊಸದಿಕ್ಕಮ್ಮೋ ಪಡೆದೆ.

ಲಿಂಗ ಆಧಾರಿತ ಅಸಮಾನತೆಯನ್ನು ನಿವಾರಿಸುವಲ್ಲಿ ಶಿಕ್ಷಕಿಯರ ಪಾತ್ರ ಮಹತ್ವದ್ದಾಗಿದೆ. ಎಂದು ನಾನು ಅರ್ಥಮಾಡಿಕೊಂಡೆ.

ರಾಷ್ಟ್ರೀಯ ಶಿಕ್ಷಕ ಶಿಕ್ಷಣ ಪಠ್ಯಕ್ರಮ 2009 (National Teacher Education Curriculum 2009 -NCFTE 2009) ಕೂಡಾ ಇದನ್ನೇ ಹೇಳುವುದು.

'ಶಿಕ್ಷಕಿಯರು ಪಠ್ಯಕ್ರಮದ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸುತ್ತಾ ಸಾಗಿದಂತೆ ಮತ್ತು ಕಲಿಕೆಯ ಅನುಭವಗಳನ್ನು ಪಡೆಯುತ್ತಾ ಮುಂದುವರಿದಂತೆ, ಮೇಲಿನ ದೃಷ್ಟಿಕೋನದ ರೀತಿಯಲ್ಲಿ ವಿವರಿಸುತ್ತಾ ಹೋದ ಹಾಗೆ (ಅಂಗ, ಶಾಂತಿ, ಸುಸ್ಥಿರ ಅಭಿವೃದ್ಧಿ) ಮಕ್ಕಳೂ ನಿಜ ಅರ್ಥದಲ್ಲಿ ಭಾಗವಹಿಸುತ್ತಾರೆ. ಆ ಮೂಲಕ ಅರ್ಥಪೂರ್ಣ ಪಠ್ಯಕ್ರಮ ಉದ್ದೇಶಗಳನ್ನು ಗುರುತಿಸುವ ಮತ್ತು ನಿರ್ದಿಷ್ಟ ಪ್ರಕ್ರಿಯೆಗೆ ಒಳಪಡಿಸುವ ಕೌಶಲಗಳನ್ನು ಕಲಿಯುತ್ತಾರೆ –

ಎನ್.ಸಿ.ಎಫ್.ಟಿ.ಇ – 2009, ಪುಟ 14, ನ್ಯಾಷನಲ್ ಕೌನ್ಸಿಲ್ ಫಾರ್ ಟೀಚರ್ ಎಜುಕೇಶನ್, ನವದೆಹಲಿ.

ಕೆಲವು ದಿನಗಳ ನಂತರ ನಾನು ಖೇಡ್ಲಾ ಗ್ರಾಮಕ್ಕೆ ಮತ್ತೊಮ್ಮೆ ಹೋದೆ. ಲಾಲಾಜಿಯ ಪದ್ಯದ ಪೋಸ್ಟರ್‌ನೊಂದಿಗೆ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳ ಮುಂದೆ ನಿಂತೆ. ಕಳೆದ ಬಾರಿ ನಾವು ಬಣ್ಣಗಾರಿಕೆ ಮತ್ತು ಪದಗಳ ಕುರಿತಾದ ಕೆಲವು ಚಟುವಟಿಕೆಗಳನ್ನು ಮಾಡಿದ್ದೆವು. ನಾವು ಚರ್ಚೆ ಮುಂದುವರಿಸುವುದಕ್ಕೆ ನಿರ್ಧರಿಸಿದೆವು. ಇಬ್ಬರು ಅಧ್ಯಾಪಕರೂ ನನ್ನ ಜತೆಗೆ ಇದ್ದರು.

ಲಾಲಾಜಿಗೆ ಅನಾರೋಗ್ಯ ಬಂದು ಅವರ ಪತ್ನಿ ಅಂಗಡಿಯನ್ನು ನಡೆಸುವಂತಿದ್ದರೆ ಏನಾಗುತ್ತಿತ್ತು? ಈ ದೃಷ್ಟಿಕೋನದಿಂದ ನಾವು ಚರ್ಚೆ ಆರಂಭಿಸಿದೆವು. ವಿದ್ಯಾರ್ಥಿಗಳು ಈ ಬದಲಾವಣೆಯನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳಲು ತಯಾರಿರಲಿಲ್ಲ.

ಶಿಕ್ಷಕಿ: 'ನಮ್ಮ ಗ್ರಾಮದಲ್ಲಿ ಎಷ್ಟು ದಿನಸಿ ಅಂಗಡಿಗಳಿವೆ?'

ವಿದ್ಯಾರ್ಥಿಗಳು: 'ಮೂರು ಅಂಗಡಿಗಳಿವೆ.'

ಶಿಕ್ಷಕಿ: 'ಅವುಗಳನ್ನು ಯಾರು ನಡೆಸುತ್ತಾರೆ'

ವಿದ್ಯಾರ್ಥಿಗಳು:'ಇಂತಿಂಥ ಅಂಕಲ್‌ಗಳು ನಡೆಸುತ್ತಾರೆ' (ಅಂದರೆ, ಗಂಡಸರು ಈ ಅಂಗಡಿಗಳನ್ನು ನಡೆಸುತ್ತಾರೆ)

ಶಿಕ್ಷಕಿ: 'ಹೆಂಗಸರೂ ಈ ಅಂಗಡಿಗಳನ್ನು ನಡೆಸುತ್ತಾರಾ?'

ವಿದ್ಯಾರ್ಥಿಗಳು: 'ಇಲ್ಲ'

ಒಬ್ಬಳು ಹುಡುಗಿ: 'ನಮ್ಮದೊಂದು ದಿನಸಿ ಅಂಗಡಿ ಇದೆ. ನಮ್ಮ ತಂದೆ ಹೊಲಕ್ಕೆ ಹೋದಾಗ ಅಥವಾ ಊಟಕ್ಕೆ ಹೋದಾಗ ಕೆಲ ಕಾಲ ನಮ್ಮ ಅಮ್ಮ ಅಂಗಡಿ ನೋಡಿಕೊಳ್ಳುತ್ತಾರೆ.'

ಇದರರ್ಥ ಇಲ್ಲಿ ಹೆಣ್ಣಿನ ಪಾತ್ರವೇನಿದ್ದರೂ ಗಂಡಿಗೆ ವಿರಾಮ ಕೊಡುವುದೇ ಆಗಿದೆ. ಅಲ್ಲ ಅವಳದ್ದೇನಿದ್ದರೂ ಅಂಗಡಿಯ ವಸ್ತುಗಳನ್ನು ಜೋಪಾನ ಮಾಡುವುದು ಮತ್ತು ಅಂಗಡಿಯವನ ಗೈರು ಹಾಜರಿಯಲ್ಲಿ ಒಂದೆರಡು ಗಂಟೆಯ ಹೊತ್ತು ಮಾರಾಟವನ್ನು ನೋಡಿಕೊಳ್ಳುವುದು.

'ಯಾವ ಅಂಗಡಿಗಳನ್ನು ಗಂಡಸರು ನಡೆಸುತ್ತಾರೆ ಮತ್ತು ಯಾವ ಅಂಗಡಿಗಳನ್ನು ಹೆಂಗಸರು ನಡೆಸುತ್ತಾರೆ?' ಎಂದು ಶಿಕ್ಷಕಿ ಕೇಳಿದರು.

ದಿನಸಿ ಅಂಗಡಿ, ಕ್ಷೌರಿಕರ ಅಂಗಡಿ, ಚಪ್ಪಲಿ ಅಂಗಡಿ, ಗೊಬ್ಬರ–ಬೀಜದ ಅಂಗಡಿ, ಬಟ್ಟೆ ಅಂಗಡಿ ಇತ್ಯಾದಿಗಳನ್ನು ಗಂಡಸರು ನಡೆಸುತ್ತಾರೆ ಎಂದು ವಿದ್ಯಾರ್ಥಿಗಳು ಉತ್ತರಿಸಿದರು. ಹೆಚ್ಚಿನ ಎಲ್ಲ ಅಂಗಡಿಗಳನ್ನು ಗಂಡಸರಷ್ಟೇ ನಡೆಸುತ್ತಾರೆ ಎನ್ನುವುದು ಕೆಲವು ವಿದ್ಯಾರ್ಥಿಗಳ ನಂಬಿಕೆ. ಮೇಕಪ್, ತರಕಾರಿ, ಬ್ಯೂಟಿ ಪಾರ್ಲರ್ ಮತ್ತು ಹೂ–ಬಿಲ್ವಪತ್ರೆ–ತೆಂಗಿನಕಾಯಿ ಅಂಗಡಿ (ಇವೆಲ್ಲ ನರ್ಮದಾ ನದಿ ತೀರದಲ್ಲಿನ ಅಂಗಡಿಗಳು) ಅಂತಹ ಅಂಗಡಿಗಳನ್ನು ಸಾಮಾನ್ಯವಾಗಿ ಹೆಂಗಸರು ನಡೆಸುತ್ತಾರೆ.

'ಎಲ್ಲ ಅಂಗಡಿಗಳನ್ನು ಹೆಂಗಸರೇ ನಡೆಸಿದರೆ ತೊಂದರೆಯಿಲ್ಲ ಅಲ್ಲವೇ?' ಎಂದು ಶಿಕ್ಷಕಿ ಕೇಳಿದರು.

ಎಲ್ಲ ಅಂಗಡಿಗಳಲ್ಲಿ ಹೆಂಗಸರೇ ಇದ್ದರೆ, ಆಗ ಅವರಿಗೆ ಮಾರುಕಟ್ಟೆಗೆ ಹೋಗುವುದು ಹಿತ ಅನ್ನಿಸಲಿಕ್ಕಿಲ್ಲ, ಎಲ್ಲ ಕಡೆ ಹೆಂಗಸರೇ ಕಾಣಿಸಿಯಾರು ಎನ್ನುವುದು ಕೆಲವು ವಿದ್ಯಾರ್ಥಿಗಳ ಮಾತು.

ವಿದ್ಯಾರ್ಥಿಗಳು ಪ್ರಶ್ನೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎಂಬ ಭಾವನೆ ನಮ್ಮಲ್ಲಿ ಮೂಡಿತು. ನಾವು ನಮ್ಮ ತಾಯಿ, ತಂದೆ, ಚಿಕ್ಕಪ್ಪ, ಚಿಕ್ಕಮ್ಮ ಮುಂತಾದವರ ಜೊತೆಗೆ ಹೋಗುವ ಹಾಗೆ ಮಾರುಕಟ್ಟೆಗೆ ಹೋಗುತ್ತೇವೆ ಎಂದು ಹೇಳಿ ಪ್ರಶ್ನೆಯನ್ನು ಪುನಹ ಕೇಳಲಾಯಿತು. ಆದರೆ ಅಂಗಡಿಯಲ್ಲಿರುವವರು ಗಂಡಸರಾಗಿರದೇ ಹೆಂಗಸರಾಗಿರುತ್ತಾರೆ ಎನ್ನುವುದೊಂದೇ ವ್ಯತ್ಯಾಸ.

ಇದರಲ್ಲಿ ತಮಗೆ ಸಮಸ್ಯೆ ಏನೂ ಇಲ್ಲವೆಂದು ಇಬ್ಬರು ಮಕ್ಕಳು ಹೇಳಿದರು. 'ನಮಗೆ ಅಂಗಿ ಮಾತ್ರ ಖರೀದಿ ಮಾಡುವುದಕ್ಕಿದೆ ಎಂದಾದರೆ ಅಂಗಡಿಯವರು ಗಂಡಸರಾದರೂ ಹೆಂಗಸರಾದರೂ ತೊಂದರೆ ಇಲ್ಲ' ಎಂದು ಒಂದು ಮಗು ಹೇಳಿತು.

ಆದರೆ ಒಂದು ಮಗುವಿಗೆ ಎಲ್ಲ ಅಂಗಡಿಯವರು ಹೆಂಗಸರು ಎಂಬ ವಿಚಾರ ಅಷ್ಟೇನೂ ಹಿತ ಅನ್ನಿಸಲಿಲ್ಲ. ಆದರೆ ಏನು ಸಮಸ್ಯೆ ಎನ್ನುವುದನ್ನು ಆತ ಗಟ್ಟಿಯಾಗಿ ಹೇಳುತ್ತಿರಲಿಲ್ಲ. ತುಂಬಾ ಹೊತ್ತಿನ ನಂತರ ಆತ ಹೇಳಿದ, 'ಅಂಗಡಿಗಳನ್ನೆಲ್ಲಾ ಅಮ್ಮಂದಿರೇ ನಡೆಸಿದರೆ ತಂದೆಏನು ಮಾಡುವರು'.

ಶಿಕ್ಷಕಿ: 'ತಂದೆ' ಹೊಲದ ಕೆಲಸ ಮಾಡುವುದು, ಮನೆಗೆಲಸ, ಅಡುಗೆ ಕೆಲಸ ಮಾಡುವರು.'

ವಿದ್ಯಾರ್ಥಿ: 'ತಂದೆಗೆ ಅಡುಗೆ ಮಾಡಲು ಬರುವುದಿಲ್ಲ.'

ಶಿಕ್ಷಕಿ: ಅವರು ಅಡುಗೆ ಕಲಿಯುವರು. ಗುಡಿಸುವ ಮತ್ತು ಅಡುಗೆ ಮಾಡಲು ತಿಳಿದಿರುವ ಗಂಡಸರು ನಿಮಗೆ ಗೊತ್ತಾ?'

ಮಕ್ಕಳು ಎರಡು ಉದಾಹರಣೆ ಕೊಟ್ಟರು. ಆದರೆ ಅವರೆಲ್ಲ ಹೆಂಡತಿಯರನ್ನು ಕಳೆದುಕೊಂಡ ಗಂಡಸರಾಗಿದ್ದರು.

ಶಿಕ್ಷಕಿ: ಹೆಂಗಸರು ಮತ್ತು ಗಂಡಸರು ಮಾಡುವ ಕೆಲಸಗಳು ಏಕೆ ಬೇರೆಬೇರೆ?

ಒಬ್ಬ ವಿದ್ಯಾರ್ಥಿ (ಹಿಂಜರಿಯುತ್ತಾ): 'ಕೆಲ ಕೆಲಸಗಳಿಗೆ ಹೆಚ್ಚಿನ ಶಕ್ತಿ ಸಾಮರ್ಥ್ಯ ಬೇಕಾಗುತ್ತದೆ'.

ಈ ಹಂತದಲ್ಲಿ ಮಹಿಳೆಯ ದೇಹ ದುರ್ಬಲ ಎನ್ನುವುದು ನಮ್ಮ ತಪ್ಪು ಕಲ್ಪನೆ ಎಂದು ಶಿಕ್ಷಕಿ ಹೇಳಿದರು. ಮಹಿಳೆಯರು ಟ್ರ್ಯಾಕ್ಟರ್

ಓಡಿಸಬಲ್ಲರು, ಟ್ರಕ್, ರೈಲು ಅಥವಾ ವಿಮಾನ ಚಲಾಯಿಸಬಲ್ಲರು. ಕೇವಲ ಐದು ಮಂದಿ ಶಿಕ್ಷಕಿಯರು ಶಾಲೆ ನಡೆಸುತ್ತಾ ಇದ್ದಾರೆ. ಎಲ್ಲ ಬಗೆಯ ಕೆಲಸ ಮಾಡುವುದಕ್ಕೆ ಎಲ್ಲರಿಗೂ ಅವಕಾಶ ಸಿಗಬೇಕು.

ಈ ಹಂತದಲ್ಲಿ ನಾವು ಲಾಲಾಜಿ ಪೋಸ್ಟರ್ ಕಡೆಗೆ ನೋಡಿದೆವು. ಲಾಲಾಜಿ ಕೈ ಚಾಚಿ ನಮಗೆ ಮೂವರಿಗೂ ಲಾಡು ಕೊಡುತ್ತಾನೆ ಎನಿಸಿತು.

ಆ ದಿನ ಲಾಲಾಜಿಯ ಭಿತ್ತಿಪತ್ರ ಮಹಿಳೆಯರ ಉದ್ಯೋಗದ ಬಗ್ಗೆ ಮಾತನಾಡಲು ಅವಕಾಶ ಒದಗಿಸಿತು. ಮಕ್ಕಳ ಮನಸ್ಸಿನಲ್ಲಿ ಕಟ್ಟಿಕೊಂಡಿದ್ದ ಸಿದ್ಧ ಮಾದರಿಗಳನ್ನು ಅರ್ಥ ಮಾಡಿಕೊಂಡೆವು. ಗಂಡಸರು ಅಂಗಡಿ ನಡೆಸುವುದನ್ನು ಮಕ್ಕಳಿಗೆ ನೋಡಿ ಅಭ್ಯಾಸವಾಗಿದೆ. ಹಾಗಾಗಿ ಹೆಂಗಸರು ಅಂಗಡಿ ನಡೆಸಬಲ್ಲರು ಎಂಬ ಯೋಚನೆಯೇ ವಿದ್ಯಾರ್ಥಿಗಳಿಗೆ ಹಿತ ಎನ್ನಿಸುವುದಿಲ್ಲ. ಕೇವಲ ಹತ್ತು ನಿಮಿಷಕ್ಕಾದರೂ ಈ ಸನ್ನಿವೇಶವನ್ನು ಅವರಿಗೆ ಕಲ್ಪಿಸಿಕೊಳ್ಳುವುದಕ್ಕೂ ಸಾಧ್ಯವಾಗುತ್ತಿಲ್ಲ. ಅಮ್ಮ ಅಂಗಡಿ ನಡೆಸಲು ಶುರು ಮಾಡಿದರೆ ಅಪ್ಪ ಏನು ಮಾಡಿಯಾನು ಎನ್ನುವುದರ ಬಗ್ಗೆ ಅವರು ಯೋಚಿಸಲು ತೊಡಗುತ್ತಾರೆ.

ಇದಾದ ನಂತರವೂ, ಈ ಪೋಸ್ಟರ್‌ನ ಆಧಾರದಲ್ಲಿ ಚರ್ಚಿಸುವುದಕ್ಕೆ ಇನ್ನೂ ಅನೇಕ ಬಗೆಯ ಸಾಧ್ಯತೆಗಳು ಇವೆ. ಕುಶಲಕರ್ಮಿಗಳು, ಮಾಣಿಗಳು ಲಾಲಾಜಿ ಅಂಗಡಿಯಲ್ಲಿ ಕೆಲಸ ಮಾಡುತ್ತಾರೆ. ಅವರ ಕೆಲಸ, ಅವರ ಸಂಬಳ, ಕೆಲಸಗಾರರನ್ನು ಲಾಲಾಜಿ ನೋಡಿಕೊಳ್ಳುವ ರೀತಿ, ಮುಂತಾದವುಗಳ ಬಗ್ಗೆಯೂ ಚರ್ಚಿಸಬಹುದಾಗಿದೆ.

ಲಾಲಾಜಿಯ ಮೀಸೆಯನ್ನು ಹೊಗಳುವ ಮೂಲಕ, ಲಾಡು ಪಡೆಯುವಲ್ಲಿಂದ ಹಿಡಿದು, ಲಾಲಾಜಿ ಕೆಲಸ ಮಾಡಲು ಮಕ್ಕಳನ್ನು ಬಳಸುವವರೆಗೆ ಅನುಭವಗಳನ್ನು ಶೋಧ ಮಾಡುವುದಕ್ಕೆ ಬೇಕಾದ ಅನೇಕ ಕ್ಷೇತ್ರಗಳಿವೆ. ಹಾಗಾಗಿ ಪದ್ಯದ ಭಿತ್ತಿಪತ್ರಗಳು ಕೇವಲ ಭಾಷಾ ಬೋಧನೆಗೆ ಸೀಮಿತ ಅಲ್ಲ. ಅವು ಅನೇಕ ಸಾಮಾಜಿಕ ಸಮಸ್ಯೆಗಳನ್ನು ಪರೀಕ್ಷಿಸಲು ಅವಕಾಶಗಳನ್ನು ಒದಗಿಸುತ್ತವೆ.

**ಕೃತಜ್ಞತೆಗಳು**
ಹೋಶಂಗಾಬಾದ್‌ನ ಖೇಡ್ಲಾದಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಯ ಶಿಕ್ಷಕಿಯರಾದ ಪ್ರಗ್ಯಾ ಶರ್ಮ ಮತ್ತು ಕಲಾ ಮೀನ ಅವರಿಗೆ ಧನ್ಯವಾದಗಳು. ಇವರು ಮಕ್ಕಳ ಜೊತೆ ಸಂವಾದ ನಡೆಸಲು ತುಂಬು ಸಹಕಾರ ನೀಡಿದ್ದಾರೆ.



**ನಂದಾ ಶರ್ಮ** ಏಕಲವ್ಯದ ಜಶ್ನ್–ಎ–ತಾಲೀಮ್ ಕಾರ್ಯಕ್ರಮದ ಬ್ಲಾಕ್ ಸಂಯೋಜಕರಾಗಿದ್ದಾರೆ. ಹೋಶಂಗಾಬಾದ್‌ನಲ್ಲಿ ನೆಲೆಸಿದ್ದಾರೆ. nanda.nanda.sharma@gmail.com

ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ನಾಗಮಣಿ ಎಸ್.ಎನ್.**

# ಸಾಂಕ್ರಾಮಿಕದ ಕಾಲದಲ್ಲಿ ಪೌರತ್ವ

ಪ್ರಣೀತ್ ಗುಡ್ಲದನ ಮತ್ತು ಸಂಕಲ್ಪ್ ಕೋರಿಪಲ್ಲಿ

**ಅವರು (ಇಬ್ಬರು ವಿದ್ಯಾರ್ಥಿಗಳು) ನೀಡಿ ಮೌಲ್ಯಯುತ ಹಾಗು ಗಮನಾರ್ಹ ಕೊಡುಗೆಗಳಿಂದ ಹೊಸಕೋಟೆಯ ಬಡಜನರಿಗೆ ಬಹಳಷ್ಟು ಉಪಯೋಗವಾಗಲಿದೆ.**

**– ಚಂದನ್, ಗೂಂಜ್ ಸಂಯೋಜಕ**

ನಾಗರಿಕರಾಗಿ ತಮ್ಮ ಜವಾಬ್ದಾರಿಯನ್ನು ನೆರವೇರಿಸಲು ವ್ಯಕ್ತಿಗಳು ಏನು ಮಾಡಬೇಕು? ದೇಶದ ಕಾನೂನು ಹಾಗು ನಿಯಮಗಳನ್ನು ಅನುಸರಿಸುವುದಲ್ಲದೆ, ನಾಗರಿಕರು ಬೇರೆಯವರ ಅಗತ್ಯಗಳನ್ನು ಅರ್ಥಮಾಡಿಕೊಳ್ಳಬೇಕು ಮತ್ತು ಗೌರವಿಸಬೇಕು ಎಂದು ನಿರೀಕ್ಷಿಸಲಾಗುತ್ತದೆ. ಸ್ವಯಂ ಸೇವಾ ಪ್ರವೃತ್ತಿಯು ಸಾಮಾಜಿಕವಾಗಿ ಉಪಯುಕ್ತ ಕಾರ್ಯವಾಗಿದ್ದು, ಸಮುದಾಯಗಳನ್ನು ಬಲಪಡಿಸುತ್ತದೆ ಹಾಗು ನಾಗರಿಕತ್ವದ ಮುಖ್ಯ ನೀತಿಯೊಂದನ್ನು ಪೂರೈಸುತ್ತದೆ.

ಜನರು ಪ್ರಜಾಪ್ರಭುತ್ವದ ನಿರ್ಮಾಣ ಘಟಕಗಳು. ದೇಶದ ಮೊದಲ ಪ್ರಧಾನಿ ಜವಾಹರಲಾಲ್ ನೆಹರು ಅವರು 'ನಾಗರಿಕತ್ವವು ದೇಶದ ಸೇವೆಯನ್ನು ಒಳಗೊಂಡಿರುತ್ತದೆ' ಎಂದು ಹೇಳಿದ್ದರು. 1997ರಲ್ಲಿ ಬ್ರಿಟನ್‌ನಲ್ಲಿ ಅಧಿಕಾರಕ್ಕೆ ಬಂದ ಲೇಬರ್ ಸರ್ಕಾರವು ಸಾರ್ವಜನಿಕ ಸೇವೆಗಳನ್ನು ಬಳಸುವ ಸಂತೃಪ್ತ ಬಳಕೆದಾರರಾದ ನಾಗರಿಕರನ್ನು ಸಮುದಾಯದ ಇನ್ನಷ್ಟು ಕ್ರಿಯಾಶೀಲ ಹಾಗು ಸಕ್ರಿಯ ಸದಸ್ಯರನ್ನಾಗಿ ಪರಿವರ್ತಿಸುವ ಗುರಿಯನ್ನು ಹೊಂದಿತ್ತು. ನಾಗರಿಕತ್ವದ ಈ ವ್ಯಾಖ್ಯಾನವು ಸಮುದಾಯಕ್ಕೆ, ಅದಕ್ಕಿಂತ ಮುಖ್ಯವಾಗಿ, ಒಟ್ಟಾರೆ ದೇಶಕ್ಕೆ ಉಪಯುಕ್ತವಾಗಲಿದೆ.

ಇತ್ತೀಚಿನ ತಿಂಗಳುಗಳಲ್ಲಿ ಸಮಾಜದ ಕೆಲವು ವರ್ಗಗಳ ಮೇಲಿನ ಸಾಂಕ್ರಾಮಿಕ ರೋಗದ ತೀವ್ರ ಪರಿಣಾಮ ನಮ್ಮ ಕಣ್ಣುಗಳನ್ನು ತೆರೆಸಿದೆ. ನಮ್ಮ ಜೀವನದಲ್ಲಿ ಮೊದಲ ಬಾರಿಗೆ, ಜನರ ಆರೋಗ್ಯದ ರಕ್ಷಣೆಗಾಗಿ ಜಾರಿಗೊಳಿಸಿದ ಲಾಕ್‌ಡೌನ್ ಅವರ ಮೇಲೆ ಹೇಗೆ ನಕಾರಾತ್ಮಕ ಪರಿಣಾಮ ಬೀರಿದೆ ಎನ್ನುವುದನ್ನು ನಾವು ನೋಡಿದೆವು. ಮುಖ್ಯವಾಗಿ ರಸ್ತೆಬದಿ ವ್ಯಾಪಾರಿಗಳು, ದಿನಗೂಲಿ ನೌಕರರು ಮತ್ತು ಸಣ್ಣ ವ್ಯಾಪಾರಿಗಳು ಇವರಲ್ಲಿ ಸೇರಿದ್ದಾರೆ. ಪರಿಸ್ಥಿತಿಯನ್ನು ನಿರಾತಂಕಗೊಳಿಸಲು ಸರ್ಕಾರ ಪ್ರಯತ್ನಿಸುತ್ತಿದ್ದರೂ, ಸಾಮಾಜಿಕ ಕಾಳಜಿಯಿರುವ ಹಾಗು ಜವಾಬ್ದಾರಿಯುತ ಸದಸ್ಯರಾಗಿ, ಕೈಲಾದದ್ದನ್ನು ಮಾಡಬೇಕೆಂದು ನಾವು ನಿರ್ಧರಿಸಿದೆವು.

ನಷ್ಟಕ್ಕೊಳಗಾದ ಜನರಿಗೆ ನೆರವಾಗಲು ಬೇರೆಬೇರೆ ಮಾರ್ಗಗಳನ್ನು ಶೋಧಿಸಿದೆವು. ಕೆಲ ಹುಡುಕಾಟದ ಬಳಿಕ, ಗೂಂಜ್ ಎಂಬ ಸ್ವಯಂಸೇವಾ ಸಂಸ್ಥೆಯನ್ನು ಸಹವರ್ತಿಯಾಗಿ ಆರಿಸಿಕೊಂಡೆವು. ಗೂಂಜ್ ಒಂದು ಸ್ಥಾಪಿತ ದೇಣಿಗೆ ವಿತರಣೆ ವ್ಯವಸ್ಥೆಯನ್ನು ಹೊಂದಿದ್ದು, ನಾವು ಸಂಗ್ರಹಿಸಿದ್ದನ್ನು ಅಗತ್ಯವಿರುವವರಿಗೆ ತಲುಪಿಸುವುದಾಗಿ ಖಾತ್ರಿ ನೀಡಿತು. ಸೆಪ್ಟೆಂಬರ್‌ನಲ್ಲಿ ಬೆಂಗಳೂರಿನ ನಾನಾ ಕಡೆಗಳಲ್ಲಿ ದೇಣಿಗೆ ಸಂಗ್ರಹ ಆಂದೋಲನವನ್ನು ಹಮ್ಮಿಕೊಳ್ಳಲು ತೀರ್ಮಾನಿಸಿದೆವು. ಅಗತ್ಯ ವಸ್ತುಗಳಾದ ಬಟ್ಟೆಗಳು, ಚಪ್ಪಲಿಗಳು, ದಿನಸಿಗಳು, ಪುಸ್ತಕಗಳು, ಖಾದ್ಯತೈಲ, ಲೇಖನ ಸಾಮಗ್ರಿಗಳು, ಹೊದಿಕೆ ಮತ್ತು ಚೀಲಗಳನ್ನು ಸಂಗ್ರಹಿಸಲು ನಿರ್ಧರಿಸಿದೆವು.

ಇದು ಉತ್ತಮ ಆಲೋಚನೆಯೇ ಎನ್ನುವ ಸಂಶಯ ಆರಂಭದಲ್ಲಿ ನಮಗೆ ಇದ್ದಿತ್ತು: ಸಾಕಷ್ಟು ವಸ್ತುಗಳು ಸಂಗ್ರಹವಾಗುತ್ತವೆಯೇ ಎನ್ನುವ ಆತಂಕ ಕಾಡುತ್ತಿತ್ತು. ಆದರೆ, ಸಾರ್ವಜನಿಕರ ಔದಾರ್ಯವನ್ನು ನಾವು ನೆಚ್ಚಿಕೊಂಡೆವು. ಮಾಸಾಂತ್ಯದೊಳಗೆ ಇಮೇಲ್, ವಾಟ್ಸ್ಯಾಪ್ ಮೂಲಕ ದೇಣಿಗೆ ಸಂಗ್ರಹ ಅಭಿಯಾನ ಕುರಿತು ಪ್ರಚಾರಾಂದೋಲನಕ್ಕೆ ನಮ್ಮ ಗಮನವನ್ನು ಕೇಂದ್ರೀಕರಿಸಿದೆವು. ಸ್ನೇಹಿತರ ಸಂಪರ್ಕಜಾಲಗಳ ಮೂಲಕ ದೇಣಿಗೆಯನ್ನು ಕೋರಿದೆವು ಹಾಗು ವಿಷಯವನ್ನು ಜನರಿಗೆ ತಲುಪಿಸಿದೆವು. ದೇಣಿಗೆ ನೀಡುವವರಿಗೆ ಅನುಕೂಲವಾಗಲಿ ಎಂದು, ನಿಗದಿತ ಸ್ಥಳಗಳಲ್ಲಿ ಸಂಗ್ರಹ ಪೆಟ್ಟಿಗೆಗಳನ್ನು ಇರಿಸಲು ಯೋಜಿಸಿದೆವು. ದೊಡ್ಡ ರಟ್ಟಿನ ಪೆಟ್ಟಿಗೆಗಳನ್ನು ಸಂಗ್ರಹಿಸುವುದು ಕೂಡ ಸವಾಲಾಗಿತ್ತು. ದೇಣಿಗೆ ಆಂದೋಲನಕ್ಕೆ ಒಂದು ವಾರ ಮೊದಲು, ಆನ್‌ಲೈನ್ ಶಾಪಿಂಗ್‌ನಿಂದ ಬಂದ ಯಾವುದೇ ರಟ್ಟಿನ ಪೆಟ್ಟಿಗೆಗಳನ್ನು ಎಸೆಯದೆ ಸಂಗ್ರಹಿಸಿಕೊಳ್ಳಬೇಕೆಂದು ಸ್ನೇಹಿತರು ಹಾಗು ನೆರೆಹೊರೆಯವರಿಗೆ ಮನವಿ ಮಾಡಿದೆವು. ಅಕ್ಕಪಕ್ಕದ ಕಿರಾಣಿ ಅಂಗಡಿಗಳವರಲ್ಲೂ ಇದೇ ರೀತಿ ಕೇಳಿಕೊಂಡೆವು. ಅಂಗಡಿಗಳ ಮಾಲೀಕರು ಸಹಕಾರ



ಕೊಡುವುದಾಗಿ ಹೇಳಿದರಲ್ಲದೆ, ಕೆಲದಿನ ಬಿಟ್ಟು ಬರಲು ಸೂಚಿಸಿದರು. ಈ ರೀತಿ ಸಂಗ್ರಹಿಸಿದ ಪೆಟ್ಟಿಗೆಗಳನ್ನು ಸಮರ್ಪಕವಾಗಿ ಶುಚಿಗೊಳಿಸಿ, ಉದ್ದೇಶಿತ ಸ್ಥಳಗಳಲ್ಲಿ ಇರಿಸಿದೆವು.

ವಿಷಯ ಹರಡಿದಂತೆ, ನಿರೀಕ್ಷೆಗೂ ಮೀರಿ ಬೆಂಬಲ ದೊರೆಯಿತು. ತಾವು ಬಳಸದ ವಸ್ತುಗಳನ್ನು ನೀಡುವ ಈ ಅವಕಾಶವನ್ನು ಬಳಸಿಕೊಳ್ಳಲು ಜನ ಮುಗಿಬಿದ್ದರು. ಸಕಾರಾತ್ಮಕ ಪ್ರತಿಕ್ರಿಯೆಯಿಂದ ಉತ್ತೇಜಿತರಾಗಿ, ಇನ್ನಷ್ಟು ಸಂಗ್ರಹ ಪೆಟ್ಟಿಗೆಗಳನ್ನು ಇರಿಸಿದೆವು ಹಾಗು ಅಕ್ಟೋಬರ್ ಮಧ್ಯಭಾಗದಿಂದ ಆಗಾಗ ದೇಣಿಗೆಯನ್ನು ಸಂಗ್ರಹಿಸಲಾರಂಭಿಸಿದೆವು.

ಸಂಗ್ರಹಗೊಂಡ ವಸ್ತುಗಳನ್ನು ಬೆಂಗಳೂರಿನಲ್ಲಿರುವ ಗೂಂಜ್ ಸಂಸ್ಥೆಯ ಗೋದಾಮಿಗೆ ಸಾಗಿಸುವುದು ಮುಂದಿನ ಹಂತದ ಕೆಲಸವಾಗಿತ್ತು. ಆದರೆ, ಭಾರೀ ಪ್ರಮಾಣದಲ್ಲಿ ಸರಕು ಸಂಗ್ರಹವಾಗಿದ್ದರಿಂದ, ಇದು ಕಷ್ಟದ ಕೆಲಸವಾಗಿತ್ತು. ವಾಹನಕ್ಕೆ ಪೆಟ್ಟಿಗೆಗಳನ್ನು ಸಾಗಿಸಲು ಸ್ನೇಹಿತರು ಹಾಗು ಕುಟುಂಬದವರ ನೆರವು ಪಡೆದುಕೊಂಡೆವು ಮತ್ತು ಗೋದಾಮಿಗೆ ಹಲವು ಬಾರಿ ಟ್ರಿಪ್‌ಗಳನ್ನು ಸಹ ಮಾಡಬೇಕಾಯಿತು. ಒಂದು ವಾರದ ಕಾಲ ಭಾರೀ ತೂಕದ ರಟ್ಟಿನ ಪೆಟ್ಟಿಗೆಗಳನ್ನು ಹೊರುವುದು ಹಾಗು ಸಾಗಣೆ ಬಳಿಕ, ಸಂಗ್ರಹವಾದ ಎಲ್ಲ ಸರಕನ್ನು ಗೂಂಜ್‌ಗೆ ಸಾಗಿಸುವಲ್ಲಿ ಯಶಸ್ವಿಯಾದೆವು. ನಾವು ಸಂಗ್ರಹಿಸಿದ ಸರಕುಗಳನ್ನು ಕಂಡು ಅವರು ಖುಷಿಯಾದರು ಹಾಗು ಅಗತ್ಯವಿರುವವರಿಗೆ ತಲುಪಿಸುವುದಾಗಿ ಭರವಸೆ ನೀಡಿದರು.

ನೆರವಿನ ಅಗತ್ಯವಿರುವವರಿಗೆ ಸಹಾಯ ಮಾಡುವುದರಿಂದ, ನಾವು ನಿರ್ಮೊಟ್ಟಿಗಿದ್ದೇವೆ ಹಾಗು ನಾವೆಲ್ಲರೂ ಒಂದೇ ಎನ್ನುವ ಭಾವನಾತ್ಮಕ ಒಳಗೊಳ್ಳುವಿಕೆ ಬೆಳೆಯುತ್ತದೆ. ಉತ್ತಮ ನಾಗರಿಕನೊಬ್ಬ ಇಂಥ ಭಾವನೆಗೆ ಬೆಲೆ ಕೊಡುತ್ತಾನೆ ಮತ್ತು ಅದನ್ನು ಒಪ್ಪಿಕೊಳ್ಳುತ್ತಾನೆ. ಸಮುದಾಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವವನು ಹಾಗು ಎಲ್ಲ ಸದಸ್ಯರ ಬಗ್ಗೆ ಗೌರವ ಭಾವನೆ ಹೊಂದಿರುವವನೇ ನಿಜವಾದ ನಾಗರಿಕ. ಸಮಾಜದಲ್ಲಿ ತೊಡಗಿಸಿಕೊಳ್ಳುವುದು ನಮ್ಮ ಜವಾಬ್ದಾರಿ ಹಾಗು ಅಧಿಕಾರವನ್ನು ಕುರುಡಾಗಿ ಒಪ್ಪಿಕೊಳ್ಳುವುದಲ್ಲ ಎಂದು ನಾವು ನಂಬುತ್ತೇವೆ. ಜನರು ತಮ್ಮ ವೈಯಕ್ತಿಕ ಕೆಲಸದ ಜೊತೆಗೆ ನೆರೆಹೊರೆಯವರ ಒಳಿತನ್ನು ಬಯಸಿದಾಗ, ಅವರು ಪೌರತ್ವದ ಸ್ಫೂರ್ತಿಯನ್ನು ಒಳಗೊಳ್ಳುತ್ತಾರೆ. ಸಭೆಗಳು ಹಾಗು ಹಬ್ಬಗಳನ್ನು ಹಮ್ಮಿಕೊಳ್ಳಲು ಸಮುದಾಯಕ್ಕೆ ನೆರವಾಗುವುದು ಸೇರಿದಂತೆ, ಸಮುದಾಯಕ್ಕೆ ನೆರವಾಗುವ ಮತ್ತು ಬಲಗೊಳಿಸುವ ಪ್ರತಿಯೊಂದು ಚಟುವಟಿಕೆಯೂ ಈ ಚೈತನ್ಯವನ್ನು ಬಲಗೊಳಿಸುತ್ತದೆ.





**ಪ್ರಣೀತ್ ಗುಡ್ಲದನ**: ಬೆಂಗಳೂರಿನ ಇಂಟರ್‌ನ್ಯಾಷನಲ್ ಸ್ಕೂಲ್‌ನ 11ನೇ ತರಗತಿ ವಿದ್ಯಾರ್ಥಿ.
ಇಮೇಲ್: gpraneet@tisb.ac.in



**ಸಂಕಲ್ಪ್ ಕೋರಿಪಲ್ಲಿ**: ಬೆಂಗಳೂರಿನ ಇಂಟರ್‌ನ್ಯಾಷನಲ್ ಸ್ಕೂಲ್‌ನ 11ನೇ ತರಗತಿ ವಿದ್ಯಾರ್ಥಿ.
ಇಮೇಲ್: ksankalp@tisb ac.in

ಅನುವಾದ: **ಮಾಧವ ಐತಾಳ** । ಪರಿಶೀಲನೆ: **ಲತಾ ಕೆ.ಸಿ.**

# ಇತರರನ್ನು ಸಬಲೀಕರಿಸುವುದು

ಪ್ರಶಾಂತ್ ಮಿಶ್ರಾ

ನಾವೆಲ್ಲರೂ ಪ್ರಾಮಾಣಿಕರಾಗಿರಬಹುದು, ಸಮಾಜ ಮತ್ತು ದೇಶಕ್ಕೆ ಸಂಬಂಧಿಸಿದಂತೆ ನಮ್ಮ ಹಕ್ಕು ಮತ್ತು ಜವಾಬ್ದಾರಿಗಳನ್ನು ಅರಿತಿದ್ದು, ಕಾನೂನು ನಿಯಮಗಳನ್ನು ಪಾಲಿಸುವ ನಾಗರಿಕರಾಗಿರಬಹುದು. ಆದರೆ ಒಳ್ಳೆಯ ನಾಗರಿಕರಾಗುವುದೆಂದರೆ, ನಮಗೆ ಸಾಧ್ಯವಿರುವ ರೀತಿಯಲ್ಲಿ ನಾವು ಸಮಾಜಕ್ಕೆ ಕೊಡುಗೆಯನ್ನು ನೀಡುವುದಾಗಿರುತ್ತದೆ. ನಾನು ಏನನ್ನು ಮಾಡಲು ನಿರ್ಧರಿಸಿದೆ ಎನ್ನುವುದು ಇಲ್ಲಿದೆ.

ನಾನು ಆರಂಭಿಸಿದ ಪ್ರಾಜೆಕ್ಟ್ ಕೇರೀಚ್‌ನ (Project Careach) ಮೂಲತತ್ತ್ವ ಯಾರಿಗೆ ಸಹಾಯದ ಅಗತ್ಯವಿದೆಯೋ ಅವರನ್ನು ಗುರುತಿಸಿ, ನೆರವು ನೀಡುವುದು ಮತ್ತು ಹಾಗೆ ನೀಡುವ ನೆರವು ಅವರಿಗೆ ಸಾಕಷ್ಟು ದೀರ್ಘಕಾಲದವರೆಗೆ–ಜೀವನ ಪರ್ಯಂತ–ವಾದರೂ – ಒಳ್ಳೆಯದೇ – ಉಪಯುಕ್ತವಾಗಿರುವ ಹಾಗೆ ನೋಡಿಕೊಳ್ಳುವುದು. ಭಾರತದಲ್ಲಿರುವ ಮಕ್ಕಳ ಸಂಖ್ಯೆಯು ಪ್ರಪಂಚದಲ್ಲಿಯೇ ಅತಿ ಹೆಚ್ಚಿನದು. ಅದರಲ್ಲಿ ಶೇ.95ರಷ್ಟು ಮಕ್ಕಳು ಪ್ರಾಥಮಿಕ ಶಾಲೆಗೆ ಹೋಗುತ್ತಾರೆ. ಹತ್ತರಲ್ಲಿ ಒಂದು ಮಗು ಮಾತ್ರ ಪದವಿ ತರಗತಿಯವರೆಗೆ ವ್ಯಾಸಂಗ ಮಾಡುತ್ತದೆ. ಸಮಸ್ಯೆಯ ಅಗಾಧತೆಯನ್ನು ಮನಗಂಡ ಮೇಲೆ ನನಗೆ ಈ ಸಾಮಾಜಿಕ ಕಾರ್ಯದಲ್ಲಿ ತೊಡಗಿಕೊಳ್ಳುವುದಕ್ಕೆ ಪ್ರೇರೇಪಣೆ ಸಿಕ್ಕಿತು. ನೆಲ್ಸನ್ ಮಂಡೇಲಾರವರು ಹೇಳಿದ ಹಾಗೆ, 'ಶಿಕ್ಷಣವು ಅತ್ಯಂತ ಪ್ರಬಲವಾದ ಅಸ್ತ್ರ, ಅದನ್ನು ನೀವು ಜಗತ್ತನ್ನೇ ಬದಲಾಯಿಸಲು ಬಳಸಬಹುದು.'

**ನಾನು ಹೇಗೆ ಆರಂಭಿಸಿದೆ**

ಫಲಾನುಭವಿಗಳನ್ನು ಹುಡುಕುವುದು ನನ್ನ ಮೊದಲ ಕೆಲಸವಾಗಿತ್ತು. ನನ್ನ ಸಂಶೋಧನೆ ಹಾಗು ಪೋಷಕರ ಸಲಹೆಗಳನ್ನು ಆಧರಿಸಿ ಒಂದು ಸರ್ಕಾರಿ ಶಾಲೆಯೊಡನೆ ಕೆಲಸ ಮಾಡುವುದೆಂದು ತೀರ್ಮಾನಿಸಿದೆ. ಬೆಂಗಳೂರಿನ ಕೂಡ್ಲು ಸರ್ಕಾರಿ ಶಾಲೆಯಲ್ಲಿ ಎಲ್ಲ ಸದಸ್ಯರೊಡನೆ ಸಭೆ ನಡೆಸಿದ ಬಳಿಕ, ಆಡಳಿತ ಮಂಡಳಿಯು ಈ ಯೋಜನೆಗೆ ಅನುಮತಿ ನೀಡಿತು.

ಭಾಗೀದಾರರೆಲ್ಲರ ಅಂದರೆ ಪೋಷಕರು, ವಿದ್ಯಾರ್ಥಿಗಳು ಹಾಗು ಶಾಲಾಡಳಿತಗಳ ಹಿತಾಸಕ್ತಿಯನ್ನು ಒಗ್ಗೂಡಿಸಲು ನಾನು ಸುಮಾರು 145 ಸಂದರ್ಶನಗಳನ್ನು ಕೈಗೊಂಡೆ. ಅದರಿಂದ ವಿದ್ಯಾರ್ಥಿಗಳು ಇಂಗ್ಲಿಷ್, ಗಣಿತ ಮತ್ತು ಕ್ರೀಡೆಯಲ್ಲಿ ಆಸಕ್ತಿ ಹೊಂದಿದ್ದಾರೆನ್ನು–ವುದನ್ನು ಕಂಡುಕೊಂಡೆ. ಅವರಲ್ಲಿ ಬಹಳಷ್ಟು ವಿದ್ಯಾರ್ಥಿಗಳು ಸಹ–ಪಠ್ಯ ಚಟುವಟಿಕೆಗಳ ಬಗ್ಗೆಯೂ ಆಸಕ್ತಿ ಹೊಂದಿದ್ದರು. ನನ್ನ ನಂಬಿಕೆಯ ಪ್ರಕಾರ, ಅದು ಬಹುಶಃ ದೂರದರ್ಶನ ಮತ್ತು ಇನ್ನಿತರ ಮಾಧ್ಯಮಗಳಿಗೆ ಅವರು ತೆರೆದುಕೊಂಡಿದ್ದರ ಪರಿಣಾಮವಿರಬೇಕು. ಆದರೆ ಶೈಕ್ಷಣಿಕ ದೃಷ್ಟಿಕೋನದಿಂದ ನೋಡಿದಾಗ, ಇಂಗ್ಲಿಷ್ ಅತ್ಯಂತ ಆಸಕ್ತಿ ಇರುವ ವಿಷಯವೆಂದು ತಿಳಿದುಬಂದಿತು. ಹಾಗಾಗಿ ನಾನು ಐದನೇ ತರಗತಿಯ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವುದನ್ನು (Spoken English) ಕಲಿಸಲು ನಿರ್ಧರಿಸಿದೆ (ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್‌ಅನ್ನು ಐದನೇ ತರಗತಿಯಲ್ಲಿ ಆರಂಭಿಸಲಾಗುತ್ತದೆ).

ಶಾಲಾಡಳಿತವು ಶಾಲೆಗೆ ಸಂಬಂಧಿಸಿದಂತೆ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಮಾಡಿಸಿಕೊಳ್ಳಲು ಉತ್ಸುಕವಾಗಿತ್ತು. ಅದಕ್ಕೆ ಹಣಕಾಸಿನ ಅಗತ್ಯವಿತ್ತು. ಹಣಕಾಸಿನ ವ್ಯವಸ್ಥೆಯನ್ನು ಮಾಡಿಕೊಳ್ಳಲು ನನಗೆ ಸ್ವಲ್ಪ ಸಮಯ ಹಿಡಿಯಿತಾದರೂಕೊನೆಯಲ್ಲಿ ಅದು ಸಾಧ್ಯವಾಯಿತು. ಪಟ್ಟಿಯು ಈ ಕೆಳಗಿನಂತಿದೆ.

**ಈ ತನಕದ ಪ್ರಗತಿ**

1. ಐದು ಮತ್ತು ಆರನೇ ತರಗತಿಯ 54 ವಿದ್ಯಾರ್ಥಿಗಳ ಒಂದು ಗುಂಪಿಗೆ ಇಂಗ್ಲಿಷ್ ಮಾತನಾಡುವುದನ್ನು ಕಲಿಸಲಾಗುತ್ತಿದೆ.

2. Careach.in ಎಂಬ ಕ್ರೌಡ್–ಫಂಡಿಂಗ್ ವೇದಿಕೆಯೊಂದು (Crowd Funding Platform) ಕಾರ್ಯಾಚರಣೆಯಲ್ಲಿದೆ. ಫೇಸ್‌ಬುಕ್, ಟ್ವಿಟ್ಟರ್ ಮತ್ತು ಇನ್‌ಸ್ಟಾಗ್ರಾಂಗಳಲ್ಲಿಯೂ ಅದರ ಇರುವಿಕೆಯನ್ನು ಕಾಣಬಹುದು. ನಾವು ಈ ಕುರಿತು ಪ್ರಚಾರ ಮಾಡಲು ಮನೆಮನೆಗೆ ಕೂಡ ತಿರುಗಿದೆವು.

3. ಗೋಷ್ಠಿಗಳಿಗೆ ಬೇಕಾದ, ಪರಸ್ಪರ ಸಂವಹನಾತ್ಮಕವಾದ ವಸ್ತುವಿಷಯಗಳನ್ನು ರೂಪಿಸಿದೆವು. ಈ ತನಕ 45 ಗೋಷ್ಠಿಗಳನ್ನು ನಡೆಸಿದ್ದೇವೆ.

4. ನಮಗೆ ಅಗತ್ಯವಿದ್ದ ಹಣಕಾಸಿನ ಸುಮಾರು ಶೇ.50ರಷ್ಟನ್ನು ಈಗಾಗಲೇ ಸಂಗ್ರಹಿಸಿದ್ದು ಅದನ್ನು ಒಂದು ಮುದ್ರಣಯಂತ್ರ, ಸೀಮೆಸುಣ್ಣ ಬಳಸಿ ಬರೆಯಬಹುದಾದ ಹಸಿರು ಹಲಗೆಗಳು ಮತ್ತು ಕೆಲವು ಒಳಾಂಗಣ ಆಟದ ಸಾಮಗ್ರಿಗಳನ್ನು ಖರೀದಿಸಲು ಬಳಸಲಾಗಿದೆ.

ನಾನು ದೃಢವಾದ ಪ್ರಗತಿ ಸಾಧಿಸುತ್ತಿರುವಾಗಲೇ ಕೋವಿಡ್–19 ಬಂದು ತಕ್ಷಣಕ್ಕೆ ಎಲ್ಲವನ್ನೂ ಸ್ತಬ್ಧಗೊಳಿಸಿಬಿಟ್ಟಿತು. ಆನಂತರದಲ್ಲಿ ತಿಳಿದುಬರತೊಡಗಿದ ಹಾಗೆ, ಪೋಷಕರು ಮತ್ತು ಮಕ್ಕಳು ತುಂಬಾ ಕಷ್ಟ ಅನುಭವಿಸುತ್ತಿದ್ದಾರೆ ಎನ್ನುವುದು ಸ್ಪಷ್ಟವಾಯಿತು. ಆದ್ದರಿಂದ ನಾನು ನನ್ನ ಕೆಲಸದ ವಿಧಾನ, ಗತಿ ಎರಡನ್ನೂ ಬದಲಾಯಿಸಿ–ಕೊಂಡು ನನಗೆ ಸಾಧ್ಯವಿರುವ ರೀತಿಯಲ್ಲಿ ವಿದ್ಯಾರ್ಥಿ ಕುಟುಂಬಗಳಿಗೆ ಸಹಾಯ ಒದಗಿಸಲು ತೀರ್ಮಾನಿಸಿದೆ. ಶಾಲಾ ಮುಖ್ಯೋಪಾಧ್ಯಾಯರನ್ನು (ಪ್ರಾಂಶುಪಾಲರು) ಭೇಟಿಯಾಗಿ ಮಾತನಾಡಿದಾಗ, ಅತ್ಯಂತ ಹೆಚ್ಚು ಅಗತ್ಯವಿರುವ 30 ಕುಟುಂಬಗಳಿಗೆ 2020ರ ಆಗಸ್ಟ್‌ನಿಂದ–ಸೆಪ್ಟಂಬರ್‌ವರೆಗೆ ಆಹಾರ ಮತ್ತು ಅವರ ನಿತ್ಯದ ಬದುಕಿಗೆ ಬೇಕಾದ ಸಾಮಗ್ರಿಗಳನ್ನು ನೆರವಿನ ರೂಪದಲ್ಲಿ ನೀಡುವುದು ಅತ್ಯಂತ ಸೂಕ್ತ ಎನ್ನುವುದು ತಿಳಿದುಬಂದಿತು. ಶಾಲಾ ಮುಖ್ಯೋಪಾಧ್ಯಾಯರೊಡನೆ ಸಮಾಲೋಚಿಸಿ, ಫಲಾನುಭವಿಗಳ ಪಟ್ಟಿಯನ್ನು

ತಯಾರಿಸಲಾಯಿತು. ವ್ಯಾಪಕವಾಗಿ ಮನೆಮನೆಗೆ ಭೇಟಿ ನೀಡಿ ಹಾಗು ಆನ್‌ಲೈನ್ ಮೂಲಕವೂ ಹಣವನ್ನು ಕೊಡುಗೆಯಾಗಿ ನೀಡುವಂತೆ ಕೇಳಿಕೊಳ್ಳಲಾಯಿತು. ಹೀಗೆ ಈ ಕುಟುಂಬಗಳಿಗೆ ಸಹಾಯ ಮಾಡಲು ಬೇಕಾದ ಹಣವು ನನಗೆ ಸಾಕಷ್ಟು ಹರಿದುಬರತೊಡಗಿತು.

**ಮುಂದಿರುವ ಕೆಲಸ**

ಯೋಜಿಸಿದ ಚಟುವಟಿಕೆಗಳಾಚೆಗೂ ನೋಡಿದಾಗ ಶಾಲೆಗೆ ಹೆಚ್ಚುವರಿ ಶೌಚಾಲಯ ಸೌಲಭ್ಯ ಅಗತ್ಯವಿರುವುದು ಕಾಣುತ್ತದೆ. ಬೇರೇನು ಸಹಾಯ ಮಾಡಬಹುದು ಎಂಬ ನನ್ನ ಶೋಧನೆ ಮುಂದುವರೆದಿದೆ. ಯಾವುದಾದರೂ ವಾಣಿಜ್ಯ ಸಂಸ್ಥೆ (Corporate) ಅಥವಾ ಸಂಸ್ಥೆಯ ಸಾಂಸ್ಥಿಕ ಸಾಮಾಜಿಕ ಜವಾಬ್ದಾರಿಯಡಿ (Corporate Social Responsibility (CSR)) ನೀಡಲಾಗುವ ಹಣಕಾಸಿನ ಸಂಪನ್ಮೂಲಕ್ಕಾಗಿ ಹುಡುಕುತ್ತಲೇ ಇದ್ದೇನೆ. ಅಂದಾಜು ವೆಚ್ಚವು ಸುಮಾರು ಹತ್ತು ಲಕ್ಷ ರೂಪಾಯಿಗಳಾಗಿದ್ದು, ಆ ಮೊತ್ತವನ್ನು ಕೊನೆಗೂ ನಾವು ಸಂಗ್ರಹಿಸಬಲ್ಲೆವು ಎಂದು ನನಗೆ ನಿಶ್ಚಿತವಾಗಿ ತಿಳಿದಿದೆ. ಆದರೆ ಸದ್ಯಕ್ಕೆ ಕೇವಲ ಇಂಗ್ಲಿಷ್ ಮಾತನಾಡುವುದನ್ನು ಕಲಿಸುವ ಹಾಗು ಚಿಕ್ಕಪುಟ್ಟ ಮೂಲ ಸೌಕರ್ಯಗಳ ಸುಧಾರಣೆಯ ಕೆಲಸ ಮಾತ್ರ ಮುಂದುವರೆದಿದೆ.

ಇತ್ತೀಚೆಗೆ, ಶಾಲೆಗೆ ಅತಿವೇಗದ ಅಂತರ್‌ಜಾಲ ಸಂಪರ್ಕವನ್ನು (High Speed Internet Connection) ಕಲ್ಪಿಸಿಕೊಡುವಲ್ಲಿ ಕೂಡ ನೆರವಾಗಲು ನನಗೆ ಸಾಧ್ಯವಾಯಿತು.

ಪ್ರಜಾತಾಂತ್ರಿಕ ದೇಶಗಳ ನಾಗರಿಕರಾಗಿ, ಎಲ್ಲರ ಬದುಕೂ ಉತ್ತಮವಾಗುವ ನಿಟ್ಟಿನಲ್ಲಿ ಸಹಾಯಹಸ್ತ ಚಾಚುವುದು ಪ್ರತಿಯೊಬ್ಬರ ಕರ್ತವ್ಯ. ಮಾಡಲು ಸುಲಭವಾದ ಕೆಲಸವನ್ನು ಆರಿಸಿಕೊಳ್ಳುವುದರ ಬದಲಿಗೆ, ನಾವು ನ್ಯಾಯಸಮ್ಮತವಾದ ಕ್ರಮಗಳನ್ನು ಕೈಗೊಳ್ಳಲು ಮುಂದಾಗಬೇಕಿದೆ. ನಾವು ಭೇಷರತ್‌ಸಮಾನತೆಯನ್ನು ತರುವ ದಿಸೆಯಲ್ಲಿ ಕೆಲಸ ಮಾಡಬೇಕು. ಸಂಪತ್ತು, ಲಿಂಗ, ಜಾತಿ, ಧರ್ಮ ಇತ್ಯಾದಿ ಅಸಂಬದ್ಧ ಸಂಗತಿಗಳನ್ನು ಆಧರಿಸಿ ಸಮಾಜವನ್ನು ವರ್ಗೀಕರಿಸಬಾರದು. ಇದು ಕಾರ್ಯಸಾಧ್ಯವಾಗಲು ಸಮಯ ಹಿಡಿಯುತ್ತದೆ ಎನ್ನುವುದು ಸ್ಪಷ್ಟ. ಆದರೆ ನಾವು ಮಾಡಬಹುದಾದ ಕನಿಷ್ಠ ಕಾರ್ಯವೆಂದರೆ, ನಮಗೆ ಸಾಧ್ಯವಾದ ಕ್ರಮಗಳನ್ನು ಕೈಗೊಳ್ಳುವುದು. ನಾನು ನನಗೆ ಸಾಧ್ಯವಿರುವ ಕೆಲಸವನ್ನು ಮಾಡಲು ಪ್ರಯತ್ನಿಸುತ್ತಿದ್ದೇನೆ.



ಒಟ್ಟು 145 ಭಾಗೀದಾರರನ್ನು ಭೇಟಿಯಾದೆ = 124 ವಿದ್ಯಾರ್ಥಿಗಳು + 11 ಶಿಕ್ಷಕರು + 10 ಪೋಷಕರು







## ತರಗತಿ ಕೊಠಡಿಯ ಒಳಗೆ

ಇಂಗ್ಲಿಷ್ ಪಠ್ಯಪುಸ್ತಕಗಳು
ರೂ. 30,000

ತರಗತಿ ಗ್ರಂಥಾಲಯ
ರೂ. 1,20,000

ಹಸಿರು ಹಲಗೆಗಳು
ರೂ. 47,436

ಬೆಂಚು ಮತ್ತು ಮೇಜುಗಳು
ರೂ. 1,54,000

## ಕಾರ್ಯಾಲಯ ಮತ್ತು ಕಟ್ಟಡ

ಮುದ್ರಣಯಂತ್ರ
ರೂ. 1,06,672

ಕಲಾತ್ಮಕ ಚಿತ್ರಗಳ ನಿರ್ಮಾಣ,
ಬಣ್ಣ ಬಳಿಯುವುದು,
ರೂ. 1,50,000

ಒಳಾಂಗಣ ಆಟಗಳು
ರೂ. 1,7,000

**ನಾವು ಒಂದು ಸರ್ಕಾರಿ ಶಾಲೆಗೆ ನೆರವು ನೀಡುತ್ತಿದ್ದೇವೆ.**

ಅಂದಾಜು ವೆಚ್ಚ
ರೂ. 6,17,618 ($ 8,880)
ಶೇ. 10 ಆಕಸ್ಮಿಕ ನಿಧಿ






i https://www.cry.org/resources/pdf/Types_of_Corp_parts_sep11.pdf


**ಪರಾಮರ್ಶನ**

https://www.worldbank.org/en/news/feature/2011/09/20/education-in-india

https://www.ncee.org/wp-content/uploads/2013/10/India-Education-Report.pdf





**ಪ್ರಶಾಂತ್ ಮಿಶ್ರಾ,** ದಿ ಇಂಟರ್‌ನ್ಯಾಷನಲ್ ಸ್ಕೂಲ್ ಬೆಂಗಳೂರಿನಲ್ಲಿ (ಖಖಚ) ಹನ್ನೊಂದನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ. ಅರ್ಥಶಾಸ್ತ್ರ ಹಾಗು ಗಣಿತ ಇವರ ಅತ್ಯಂತ ಇಷ್ಟದ ವಿಷಯಗಳು. ತಂತ್ರಜ್ಞಾನದ ಪ್ರಗತಿಯನ್ನು ಅವುಗಳ ಆರ್ಥಿಕ ಪರಿಣಾಮಗಳ ಜೊತೆ ಸಮೀಕರಿಸುವ ವಿಷಯ ಕ್ಷೇತ್ರವನ್ನು ಅನ್ವೇಷಿಸುವುದರಲ್ಲಿ ಬಹಳ ಒಲವಿದೆ. ಪದವಿ ತರಗತಿಯಲ್ಲಿ ಅರ್ಥಶಾಸ್ತ್ರವನ್ನು ಅಭ್ಯಸಿಸಲು ಇಷ್ಟಪಡುತ್ತಾರೆ. ಇವರನ್ನು mprashant@tisb.ac.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಲತಾ ಕೆ.ಸಿ.**

# ಮಕ್ಕಳಲ್ಲಿ ಪೌರತ್ವದ ಮೌಲ್ಯಗಳನ್ನು ಬೆಳೆಸುವುದು

ರಾಧಿಕಾ ರಾಜ್‌ನಾರಾಯಣ್

ನಾನು ನಾಲ್ಕು ವರ್ಷಗಳ ಕಾಲ (2010-2013) ಚಿಲ್ಡ್ರನ್ಸ್ ಮೂವ್‌ಮೆಂಟ್ ಫಾರ್ ಸಿವಿಕ್ ಅವೇರ್‌ನೆಸ್ (ಸಿ.ಎಂ.ಸಿ.ಎ) ಸಂಸ್ಥೆಯಲ್ಲಿ ಸ್ವಯಂಸೇವಕಿಯಾಗಿದ್ದೆ. ಖಾಸಗಿ ಶಾಲೆಗಳ ನಗರ ಸ್ವಯಂಸೇವಕರಾಗಿ, ಆ ಶಾಲೆಗಳ VIIIನೇ ತರಗತಿಮಕ್ಕಳಿಗೆ ಸಾಪ್ತಾಹಿಕ ತರಗತಿಗಳನ್ನು ತೆಗೆದುಕೊಳ್ಳುವುದು ನಮ್ಮ ಕೆಲಸವಾಗಿತ್ತು. ಇದು ಮಕ್ಕಳು ಸ್ವಯಂಪ್ರೇರಿತರಾಗಿ ಸೇರಿದ್ದ ಕ್ಲಬ್ ಆಗಿತ್ತು. ಸಾಮಾನ್ಯವಾಗಿ 15ರಿಂದ 20 ವಿದ್ಯಾರ್ಥಿಗಳು ಇದರಲ್ಲಿ ಸೇರಿಕೊಳ್ಳುತ್ತಿದ್ದರು. ಅವರಿಗೆ ನಾವು ಪರಿಚಯಿಸುತ್ತಿದ್ದ ಪರಿಕಲ್ಪನೆಗಳೆಂದರೆ:

- ಕಾಳಜಿ: ಆರಂಭದಲ್ಲಿ, ನಮ್ಮ ಸುತ್ತಮುತ್ತಲಿನ ಕುರಿತು, ನೀರು, ವಿದ್ಯುಚ್ಛಕ್ತಿ ಪೋಲು ಮಾಡುವುದು, ಕಸ ಹಾಕುವುದು ಇತ್ಯಾದಿ, ಈ ಎಲ್ಲವುಗಳಲ್ಲಿ ಹೇಗೆ ಬದಲಾವಣೆತರಬೇಕು ಎನ್ನುವ ಕುರಿತು ಪ್ರಾಯೋಗಿಕ ಚಟುವಟಿಕೆಗಳೊಂದಿಗೆ; ನಂತರ ಪರಿಸರ ಮತ್ತು ಬಾಲಕಾರ್ಮಿಕ, ಇತ್ಯಾದಿ ಕುರಿತು.
- ಸಹಬಾಳ್ವೆ: ಹೇಗೆ ಪಕ್ಷಪಾತ ಮತ್ತು ಪೂರ್ವಾಗ್ರಹವನ್ನು ದೂರ ಮಾಡಬೇಕು ಮತ್ತು ವಿವಿಧ ವ್ಯಕ್ತಿಗಳೊಂದಿಗೆ ಹೇಗೆ ಬದುಕಬೇಕು ಎನ್ನುವ ಕುರಿತ ನಡವಳಿಕೆಗಳು.
- ಸಹಕಾರ: ಬದಲಾವಣೆ ತರುವುದಕ್ಕಾಗಿ ಶಾಲೆ ಅಥವಾ ಸ್ಥಳೀಯ ಸರ್ಕಾರಿ ಸಂಸ್ಥೆಗಳು ಮುಂತಾದವುಗಳ ಅಧಿಕಾರಿಗಳ ಜೊತೆ ಹೇಗೆ ವರ್ತಿಸಬೇಕು ಎಂಬ ಚಟುವಟಿಕೆಗಳನ್ನು ಇದು ಒಳಗೊಂಡಿದೆ.
- ಎದುರಿಸುವುದು: ಅಧಿಕಾರಿಗಳಿಗೆ ಸಲ್ಲಿಸಿದ ನಿರಂತರ ಮನವಿ ಮತ್ತು ಪ್ರಾತಿನಿಧಿತ್ವವು ಫಲ ನೀಡದೆ ಇದ್ದಾಗ ಹೇಗೆ ಪ್ರತಿಭಟಿಸಬೇಕು ಮತ್ತು ಅವರನ್ನು ಹೇಗೆ ತಾಳ್ಮೆಯಿಂದ ಎದುರಿಸಬೇಕು ಎನ್ನುವುದನ್ನು ಇದು ಒಳಗೊಂಡಿದೆ.

ಇದರೊಂದಿಗೆ, ಪ್ರಜಾತಾಂತ್ರಿಕತೆಯ ತತ್ವಗಳು, ಹಕ್ಕುಗಳು ಮತ್ತು ಜವಾಬ್ದಾರಿಗಳನ್ನು ತಿಳಿಸಿಕೊಡಲಾಗುತ್ತದೆ. ಚಟುವಟಿಕೆಗಳು, ಪ್ರಾಯೋಗಿಕ ಉದಾಹರಣೆಗಳು, ಕಥೆಗಳು ಮತ್ತು ಚಲನಚಿತ್ರಗಳು ಇತ್ಯಾದಿಗಳ ಮೂಲಕ ಈ ಎಲ್ಲಾ ಪರಿಕಲ್ಪನೆಗಳನ್ನು ಮಕ್ಕಳಲ್ಲಿ ಮೂಡಿಸಲಾಗುತ್ತದೆ.. ಈ ವಿಚಾರಗಳ ಕುರಿತು ಇತರ ವಿದ್ಯಾರ್ಥಿಗಳಲ್ಲಿ ಜಾಗೃತಿ ರೂಪಿಸುವುದಕ್ಕಾಗಿ, ಮಕ್ಕಳು ಈ ವಿಷಯಗಳ ಕುರಿತು ತಮ್ಮ ಶಾಲೆಗಳಲ್ಲಿ ಪ್ರಚಾರವನ್ನು ಕೈಗೊಳ್ಳುತ್ತಾರೆ.

**ಕಾರ್ಯವಿಧಾನ**

ಹೆಚ್ಚಿನ ವಿದ್ಯಾರ್ಥಿಗಳಲ್ಲಿ ನಾನು ಕಂಡಸ್ವಭಾವವೆಂದರೆ, ಅವರು ಮಾತನಾಡಲು ಹಿಂಜರಿಯುತ್ತಾರೆ. ಕುಟುಂಬದ ಸದಸ್ಯರು ಮತ್ತು ಶಿಕ್ಷಕರು, ಅವರು 'ತಿರುಗಿಸಿ ಮಾತನಾಡಬಾರದು' ಅಥವಾ ಪ್ರಶ್ನೆಗಳನ್ನು ಕೇಳಬಾರದು ಎಂಬ ಚೌಕಟ್ಟಿನೊಳಗೆ ಮಕ್ಕಳನ್ನು ಬೆಳೆಸಿರುತ್ತಾರೆ ಎನ್ನುವುದು ನನ್ನ ಅನುಭವವಾಗಿದೆ. ಈ ಹಿಂಜರಿಕೆಯಿಂದ ಅವರನ್ನು ಹೊರತರಲು ಅನೇಕ ವಾರಗಳು ಬೇಕಾಯಿತು.

ನಾವು ತಿಳಿಹೇಳಲು ಇಚ್ಛಿಸಿದ್ದ ಪರಿಕಲ್ಪನೆಗಳನ್ನು ಬೋಧಿಸಲು ಯಶಸ್ವಿಯಾದ ವಿಧಾನವೆಂದರೆ, ಈ ಪರಿಕಲ್ಪನೆಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅವರ ಕುಟುಂಬದ ಸದಸ್ಯರ ಜೊತೆಗೆ ನಿರ್ವಹಿಸಲು ಹೇಳುವುದು. ಉದಾಹರಣೆಗೆ, ಹಲ್ಲುಜ್ಜುವ ವೇಳೆ ನಲ್ಲಿಯನ್ನು ತೆರೆದಿಡದೆ ನೀರನ್ನು ಉಳಿಸುವುದು; ತಮ್ಮೊಳಗೆ, ಅವರ ಕುಟುಂಬದಲ್ಲಿ, ಶಾಲೆಯಲ್ಲಿ ಮತ್ತು ನೆರೆಹೊರೆಯಲ್ಲಿ ಉಂಟಾದ ಬದಲಾವಣೆಯನ್ನು ಬರೆದಿಡಲು ದಿನಚರಿ ಪುಸ್ತಕವನ್ನು ಇಡುವುದು ಇತ್ಯಾದಿ. ಇನ್ನೊಂದು ವಿಧಾನವೆಂದರೆ, ಇದೇ ಪರಿಕಲ್ಪನೆಗಳನ್ನು ಅವರು ಇತರ ಮಕ್ಕಳಿಗೆ ಕಲಿಸುವಂತೆ ಮಾಡುವುದು. ಈ ಅಭ್ಯಾಸವು ಮಗುವಿನ ಮನಸ್ಸಿನಲ್ಲಿ ಚೆನ್ನಾಗಿ ಅಚ್ಚೊತ್ತಿದೆ ಎಂಬುದನ್ನು ನಾನು ಕಂಡುಕೊಂಡೆ. ಆದರೆ ಈ ವಿಧಾನವು ಹಿರಿಯ ವಿದ್ಯಾರ್ಥಿಗಳಿಗಿಂತಲೂ (ಸಿ.ಎಂ.ಸಿ.ಎ ಕ್ಲಬ್ ಸದಸ್ಯರ ಸಹ-ಪಾಠಿಗಳು) ಕಿರಿಯ ವಿದ್ಯಾರ್ಥಿಗಳಲ್ಲಿ ಹೆಚ್ಚು ಪರಿಣಾಮ-ಕಾರಿಯಾಗಿರುತ್ತದೆ.

**ಸಮಾನವಯಸ್ಕರ ಒತ್ತಡ**

ನಾನು ತರಗತಿಯ ವೇಳೆ ಕಂಡುಕೊಂಡಂತೆ, ಮಕ್ಕಳು 13ನೇ ವಯಸ್ಸಿಗೆ ಕಾಲಿಡುವ ಹೊತ್ತಿಗೆ ಅವರಲ್ಲಿ ಒಳ್ಳೆಯ ಮತ್ತು ಕೆಟ್ಟ ಅಭ್ಯಾಸಗಳೆರಡೂ ಬೆಳೆದು ಬಿಟ್ಟಿರುತ್ತವೆ ಎಂಬುದು ನನ್ನ ನಂಬಿಕೆಯಾಗಿದೆ. ಹದಿಹರೆಯದ ಬಂಡಾಯವೂ ಕಾಣಿಸುತ್ತದೆ. ಉತ್ತಮ ನಾಗರಿಕ ವರ್ತನೆಯ ಸಿದ್ಧಾಂತಗಳನ್ನು ಅವರು ಅನುಸರಿಸುವಂತೆ ಮಾಡುವುದು ತುಂಬಾ ಕಷ್ಟದ ಕೆಲಸ. ಉದಾಹರಣೆಗೆ, ವಾಹನ ಚಾಲನಾ ಪರವಾನಗಿ ಇಲ್ಲದೆ ಅವರು ದ್ವಿಚಕ್ರ ವಾಹನ ಚಲಾಯಿಸಬಾರದು ಎಂದು ಹೇಳುವುದು. ಸಮಾನ-ವಯಸ್ಕರ ಒತ್ತಡ ಮತ್ತು ಆ ಪ್ರಭಾವಿ ಸಣ್ಣ ಪಂಗಡದೊಂದಿಗೆ ಗುರುತಿಸಿಕೊಳ್ಳುವ ಇಚ್ಛೆಯು, ಈ ಉತ್ತಮ ಪೌರತ್ವದ ಮಾರ್ಗದರ್ಶನ ಸೂತ್ರಗಳನ್ನು ನಿರ್ಲಕ್ಷಿಸುವಂತೆ ಮಾಡುತ್ತದೆ. ನನ್ನ ಕೆಲವು ಸಹೋದ್ಯೋಗಿಗಳು, ತಮ್ಮ ಮಕ್ಕಳನ್ನು ಮನವೊಲಿಸಿ, ಪುಸಲಾಯಿಸಿ ಅಥವಾ ಬೆದರಿಸಿ ಅವರು ಕಾನೂನು ಸಮ್ಮತ 18ನೇ ವಯಸ್ಸಿನೊಳಗೆ ಮೋಟಾರು ವಾಹನವನ್ನು ಚಲಾಯಿಸದಂತೆ ಮಾಡುವಷ್ಟರಲ್ಲಿ ಸೋತು ಸುಣ್ಣವಾಗುತ್ತಿದ್ದರು.

ಸಮಾನವಯಸ್ಕರ ಒತ್ತಡವು ಇತರ ಋಣಾತ್ಮಕ ವಿಧಗಳಲ್ಲಿಯೂ ಕೆಲಸ ಮಾಡುತ್ತದೆ. ಸಿ.ಎಂ.ಸಿ.ಎ ಕ್ಲಬ್ಬಿನ ಮಕ್ಕಳು ಅವರ ಕ್ರೀಡಾ ಅಥವಾ ವಾರ್ಷಿಕ ದಿನಾಚರಣೆಯ ಸಂದರ್ಭದಲ್ಲಿ ಎಲ್ಲೆಂದರಲ್ಲಿ ತ್ಯಾಜ್ಯ ಎಸೆಯುವ ಬಗ್ಗೆ ಜಾಗೃತಿ ಅಭಿಯಾನವನ್ನು ನಡೆಸಿದರೆ ಇತರ ಸಹಪಾಠಿಗಳು ಅವರನ್ನು ಮೂದಲಿಸುತ್ತಿದ್ದರು. ನಂತರ ಅವರು ತಲೆ ಕೆಳಗೆ ಮಾಡಿ, 'ಓಹ್, ನೀನು ಸಿ.ಎಂ.ಸಿ.ಎ.ಯವನು;

ಕಾಗದದಕಸವನ್ನು ನೀನೇ ಹೆಕ್ಕು' ಎಂದು ಉಳಿದ ಮಕ್ಕಳು ತಮ್ಮನ್ನು ರೇಗಿಸುತ್ತಿದ್ದರು ಎಂದು ನನ್ನ ಬಳಿ ಹೇಳುತ್ತಿದರು.

ಇನ್ನೊಂದು ಅತಿದೊಡ್ಡ ಹಿನ್ನಡೆ ಎಂದರೆ, ಯಾವುದೇ ಸಲಹೆಗಳಿಗೆ ಕೆಲವು ಪೋಷಕರ, ಮುಖ್ಯವಾಗಿ ತಂದೆಯ ಕಟುವಾದ ಪ್ರತಿಕ್ರಿಯೆ. ಮಕ್ಕಳನ್ನು ಪೋಷಕರ ಭೀತಿಯಲ್ಲಿ ಬೆಳೆಸಲಾಗುತ್ತದೆ. ಹೀಗಾಗಿಯೇ ಈ ವಿಷಯವನ್ನು ಇನ್ನೊಮ್ಮೆ ಪ್ರಸ್ತಾಪಿಸಲು ಇವರು ಹಿಂದೇಟು ಹಾಕುತ್ತಾರೆ. ಆದರೆ ಆಳವಾಗಿ ಬೇರೂರಿರುವ ಈ ಅಭ್ಯಾಸಗಳು ಅಥವಾ ಅವರ ಪೋಷಕರು, ಸ್ನೇಹಿತರ ಪ್ರತಿರೋಧದ ನಡುವೆಯೂ, ಸುಮಾರು ಒಂದು ವರ್ಷದ ಅವಧಿಯಲ್ಲಿ ಗಮನಾರ್ಹ ಸಂಖ್ಯೆಯ ವಿದ್ಯಾರ್ಥಿಗಳು ಬದಲಾಗಿದ್ದಾರೆ ಹಾಗು ತಮ್ಮ ಸುತ್ತಲಿನ ಜನರನ್ನು ಸಹ ಬದಲಾಯಿಸಿದ್ದಾರೆ.

ಅಭ್ಯಾಸಗಳನ್ನು ಬದಲಾಯಿಸುವುದು ಮತ್ತು ಸಣ್ಣ ಉಪಕ್ರಮಗಳು

ಬದಲಾವಣೆಯ ಉದ್ದೇಶದಿಂದ ಇಡೀ ಒಂದು ವರ್ಷ ಅವರನ್ನು ಇಷ್ಟು ಸಿದ್ಧಪಡಿಸಿದರೂ, ಶಾಲೆಯ ಡೆಸ್ಕುಗಳಲ್ಲಿ ತಮ್ಮ ಹಸ್ತಾಕ್ಷರ ಗೀಚಿ ಅವುಗಳ ಅಂದಗೆಡಿಸುವುದು, ನೀರು ಪೋಲು ಮಾಡುವುದು ಇತ್ಯಾದಿ ಸಣ್ಣಸಣ್ಣ ಅನಪೇಕ್ಷಿತ ಅಭ್ಯಾಸಗಳು ಒಂದು ಹಂತದಲ್ಲಿ ಹತಾಶೆಯತ್ತ ತಳ್ಳಿದವು. ಒಂದು ದಿನ ನಾನು ಸಂಪೂರ್ಣವಾಗಿ ವಿಫಲಳಾಗಿದ್ದೇನೆ ಎಂದು ನಿರಾಶೆಯಿಂದ ಹೊರನಡೆದಾಗ, ಸಿ.ಎಂ.ಸಿ.ಎ ಕ್ಲಬ್ಬಿನ ಕೆಲವು ಮಕ್ಕಳು ನನ್ನ ಹಿಂದೆ ಓಡಿ ಬಂದರು. 'ಮೇಡಂ, ಶಾಲೆಯ ಪಕ್ಕದಲ್ಲಿ ಒಂದು ಮನೆ ಇದ್ದು ಅಲ್ಲಿ ಕೊಳವೆಯಿಂದ ಸಾಕಷ್ಟು ನೀರು ಹರಿದು ಹೋಗುತ್ತಿದೆ. ನಾವು ಅಲ್ಲಿಗೆ ಹೋಗಿ ಏನಾದರೂ ಮಾಡಲು ಅವರಿಗೆಹೇಳೋಣವೇ?' ಹೀಗಂದಾಗ, ನನ್ನ ಕಣ್ಣುಗಳನ್ನು ನನಗೇ ನಂಬಲಾಗಲಿಲ್ಲ. 'ಹೌದು, ಖಂಡಿತವಾಗಿಯೂ. ಆದರೆ ಸಭ್ಯತೆಯಿಂದ ವರ್ತಿಸಿ ಹಾಗು ಒಟ್ಟಿಗೆ ಹೋಗಿ' ಎಂದು ನಾನು ಅವರಿಗೆ ಹೇಳಿ ಅವರು ವಾಪಸ್ ಬರುವ ತನಕ ಕಾದು ನಿಂತೆ. ಹತ್ತು ನಿಮಿಷಗಳಲ್ಲಿ, ನೀರು ಹರಿಯುವುದು ನಿಂತಿರುವುದನ್ನು ಮತ್ತು ಮಕ್ಕಳು ಗೆಲುವಿನ ನಗೆ ಬೀರಿ ವಾಪಸ್ ಬರುತ್ತಿರುವುದನ್ನು ನಾನು ಗಮನಿಸಿದೆ. ಸಾಕಷ್ಟು ಉತ್ಸಾಹದಿಂದ, ಅಲ್ಲಿ ಏನು ನಡೆಯಿತು ಎಂಬುದನ್ನು ಅವರು ನನಗೆ ವಿವರಿಸಿದರು. ಮಾಲೀಕರು ಪಂಪ್‌ನ ಸ್ವಿಚ್ ಆನ್ ಮಾಡಿ ಎಲ್ಲೋ ಹೋಗಿದ್ದರು. ಆದರೆ ಅದೃಷ್ಟವಶಾತ್ ಅಲ್ಲಿನ ವಾಚ್‌ಮನ್ ಸ್ಥಳದಲ್ಲೇ ಇದ್ದರು ಹಾಗು ಆ ವಾಚ್‌ಮನ್‌ನ ಮನವೊಲಿಸಿ ಪಂಪ್‌ನ ಸ್ವಿಚ್ ಅನ್ನು ಆಫ್ ಮಾಡಿಸುವಲ್ಲಿ ಅವರು ಯಶಸ್ವಿಯಾದರು. ಇದು ತುಂಬಾ ಸಾಮಾನ್ಯ ಘಟನೆಯಾಗಿದ್ದರೂ, ಯುವ ನಾಗರಿಕರಾಗಿ ಹೆಚ್ಚು ಸಕ್ರಿಯರಾಗಿ ವರ್ತಿಸಬೇಕಾದ ಅಗತ್ಯತೆಯನ್ನು ಪ್ರಚೋದಿಸಲು ಇಷ್ಟು ಸಾಕಾಗಿತ್ತು.

ಇಂತಹ ಸಣ್ಣ ಉಪಕ್ರಮಗಳ ಮೂಲಕ ಬದಲಾವಣೆಯನ್ನು ತಂದ ಅನೇಕ ಇತರ ಉದಾಹರಣೆಗಳೂ ಇವೆ.

ವಿವಾಹ ಕಾರ್ಯಕ್ರಮವೊಂದರಲ್ಲಿ, ಊಟದ ನಂತರ ಜನರು ತಮ್ಮ ಕೈ ತೊಳೆದು ನಲ್ಲಿಯನ್ನು ಮುಚ್ಚದೆ ಹಾಗೆಯೇ ಬಿಟ್ಟು ಹೋಗುತ್ತಿರುವುದನ್ನು ವಿಮಲಾ ಗಮನಿಸಿದಳು. ಅವಳು ಅಲ್ಲೇ ನಿಂತಳು ಹಾಗು ನಲ್ಲಿಯನ್ನು ಬಳಸಿದ ನಂತರ ಅದನ್ನು ಮುಚ್ಚಿ ಹೋಗುವಂತೆ ಎಲ್ಲರನ್ನು ವಿನಂತಿಸಿದಳು.

ವಾಹನ ಚಲಾಯಿಸುವಾಗ ಹೆಲ್ಮೆಟ್ ಧರಿಸುವಂತೆ ತನ್ನ ತಂದೆಯ ಮನವೊಲಿಸುವಲ್ಲಿ ಭಾವನಾ ಯಶಸ್ವಿಯಾದಳು.

ವಾಹನ ಚಾಲನಾ ಪರವಾನಗಿ ಪಡೆಯುವ ತನಕ ಸ್ಕೂಟರ್ ಚಲಾಯಿಸದಂತೆ ತನ್ನ ಅಕ್ಕನನ್ನು ಮನವೊಲಿಸುವಲ್ಲಿ ಶೃತಿ ಯಶಸ್ವಿಯಾದಳು.

ತನ್ನ ಗೆಳತಿ ಬಾಲ್ಕನಿಯಿಂದ ಕಾಗದದ ತ್ಯಾಜ್ಯಗಳನ್ನು ಎಸೆಯುತ್ತಿರುವುದನ್ನುಬೀಬಿ ನಾಜ್ ನೋಡಿದಳು. ಅದನ್ನು ಆಕೆ ಆಯ್ದುಕೊಂಡು ತನ್ನ ಗೆಳತಿ ಬಳಿ ಹೋಗಿ ಹಿಂದಿರುಗಿಸಿದಳು ಮತ್ತೆ ಅದನ್ನು ಬಿಸಾಡದಂತೆ ನೋಡಿಕೊಂಡಳು.

ಅಬ್ದುಲ್ ಇಡೀ ರಾತ್ರಿ ತನ್ನ ಫೋನ್‌ಅನ್ನು ಚಾರ್ಜ್ ಮಾಡುವುದನ್ನು ನಿಲ್ಲಿಸಿದ ಹಾಗು ಇದೇ ರೀತಿ ಮಾಡುವಂತೆ ತನ್ನ ಪೋಷಕರಿಗೂ ಮನವೊಲಿಸಿದ. ಈ ವಿಧಾನಹಾಗು ವಿದ್ಯುತ್ ಉಳಿಸುವ ಇತರ ವಿಧಾನಗಳನ್ನು ಅಳವಡಿಸುವ ಮೂಲಕ ಅನೇಕ ವಿದ್ಯಾರ್ಥಿಗಳು ತಮ್ಮ ಮಾಸಿಕ ವಿದ್ಯುಚ್ಛಕ್ತಿ ಬಿಲ್‌ನಲ್ಲಿ ಸುಮಾರು ರೂ.೩೦೦ರಷ್ಟು ಉಳಿತಾಯ ಮಾಡಿದರು!

ಒಂದು ಮಗುವನ್ನು ಕೆಲಸಕ್ಕೆ ಇಟ್ಟಿರುವುದನ್ನು ಹಾಗು ಆ ಮಗುವಿಗೆ ಥಳಿಸುತ್ತಿರುವುದನ್ನು ಕೀರ್ತಿ ಗಮನಿಸಿದಳು. ತನಗೆ ನೆನಪಿದ್ದ ಮಕ್ಕಳ ಸಹಾಯವಾಣಿ ಸಂಖ್ಯೆಗೆ ಆಕೆ ಕರೆ ಮಾಡಿದಳು ಹಾಗು ಅಧಿಕಾರಿಗಳು ಆ ಮಗುವನ್ನು ರಕ್ಷಿಸಿದಾಗ ಆಕೆಯ ಖುಶಿಗೆ ಪಾರವೇ ಇರಲಿಲ್ಲ.

ಕೋಮಲ್ ತನ್ನ ತಾಯಿಯ ಶಾಪಿಂಗ್‌ಗಾಗಿ ಬಟ್ಟೆಯ ಚೀಲವನ್ನು ಹೊಲಿದಳು. ತನ್ನ ಮಗಳ ನೈಪುಣ್ಯತೆಯ ಬಗ್ಗೆ ತಾಯಿಯು ಅಭಿಮಾನಪಟ್ಟರು ಮಾತ್ರವಲ್ಲದೆ ಅವರು ಶಾಪಿಂಗ್‌ಗೆ ಹೋಗುವಾಗ ಅದೇ ಚೀಲವನ್ನು ಬಳಸಿದರು. ಹೀಗೆ ಕೋಮಲ್ ಕನಿಷ್ಠ ಒಬ್ಬ ವ್ಯಕ್ತಿಯಾದರೂ ಪ್ಲಾಸ್ಟಿಕ್ ಚೀಲಗಳನ್ನು ಬಳಸುವುದನ್ನು ಪರಿಣಾಮಕಾರಿಯಾಗಿ ತಡೆದಳು.

ಗಣೇಶನ ಮೂರ್ತಿಗಳಲ್ಲಿ ಬಳಸುವ ವಿಷಕಾರಿ ಬಣ್ಣಗಳು ನೀರಿನ ಮೇಲೆ ಬೀರುವ ದುಷ್ಪರಿಣಾಮಗಳಿಂದ ಚಿಂತಿತಳಾಗಿದ್ದ ಸ್ವಾತಿ, ಗಣೇಶ ಹಬ್ಬದ ಸಂದರ್ಭದಲ್ಲಿ ಆವೆಮಣ್ಣಿನ ಮೂರ್ತಿಯನ್ನು ಬಳಸಿದಳು ಹಾಗು ಒಂದು ಬಕೆಟ್ ನೀರಿನಲ್ಲಿ ಈ ಮೂರ್ತಿಯನ್ನು ವಿಸರ್ಜಿಸಿದಳು ಮತ್ತು ನೀರನ್ನು ಉದ್ಯಾನವನಕ್ಕೆ ಬಳಸಿದಳು.

ಸಂತೋಷ್ ಒಂದು ರಟ್ಟಿನ ಪೆಟ್ಟಿಗೆಯನ್ನು ಬಳಸಿಕೊಂಡು, ಶಾಲೆಯಲ್ಲಿ ಸ್ವಾತಂತ್ರ್ಯ ದಿನಾಚರಣೆಯಂದು ವಿತರಿಸಿದ ಚಾಕಲೇಟ್ ಪೇಪರ್‌ಗಳನ್ನು ಸಂಗ್ರಹಿಸಿದನು.

ಅನಿಲ್ ಮನೆಗೆ ಹೋಗುವಾಗ, ಇಬ್ಬರು ವ್ಯಕ್ತಿಗಳು ಪ್ಲಾಸ್ಟಿಕ್ ಚೀಲದಲ್ಲಿ ತ್ಯಾಜ್ಯವನ್ನು ಕೊಂಡೊಯ್ಯುತ್ತಿರುವುದನ್ನು ಗಮನಿಸಿದ. ಅವರು ಆ ತ್ಯಾಜ್ಯವನ್ನು ಕಾಲುದಾರಿಯ ಬಳಿ ಎಸೆಯುವವರಿದ್ದರು. 'ಇದು ನಿಮ್ಮದೇ ನಗರ, ಈ ರೀತಿ ಮಾಡಬೇಡಿ' ಎಂದು ಧೈರ್ಯದಿಂದ ಹೇಳಿದ ಅನಿಲ್, ಅವರು ತ್ಯಾಜ್ಯವನ್ನು ಬಿಸಾಡದಂತೆ ತಡೆದ. ಅವರು ಬೆದರುತ್ತಾ ತ್ಯಾಜ್ಯದೊಂದಿಗೆ ವಾಪಸ್ ಹೋದರು. ಈ ಯಶಸ್ಸಿನಿಂದ ಪುಳಕಿತನಾದ ಅನಿಲ್, ಅನೇಕ ಜನರು ರಸ್ತೆಯಲ್ಲಿ ಕಸ ಬಿಸಾಡದಂತೆ ತಡೆದ.

ಸಾಕಷ್ಟು ವಾಹನಗಳು ವೇಗದಲ್ಲಿ ಸಾಗುವ, ಶಾಲೆಯ ಹೊರಗಿನ ರಸ್ತೆಯಲ್ಲಿವೇಗನಿಯಂತ್ರಕಗಳನ್ನು ಮತ್ತು ಎಚ್ಚರಿಕೆ ಫಲಕಗಳನ್ನು ಹಾಕಿಸಿದ್ದು, ಬಹುಶಃ ಸಿ.ಎಂ.ಸಿ.ಎ ಕ್ಲಬ್ ಸದಸ್ಯರ ಅತಿದೊಡ್ಡ ಸಾಧನೆ. ಇದಕ್ಕಾಗಿ ಇವರು ಸಂಚಾರಿ ಪೊಲೀಸ್ ಇನ್ಸ್‌ಪೆಕ್ಟರ್ ಅವರ ಮನವೊಲಿಸಬೇಕಾಯಿತು. 'ಮಕ್ಕಳಾದ ನೀವೇ ದ್ವಿಚಕ್ರ ವಾಹನಗಳನ್ನು ವೇಗವಾಗಿ ಚಲಾಯಿಸುತ್ತೀರಿ' ಎಂದು ಈ ಇನ್ಸ್‌ಪೆಕ್ಟರ್ ಹೇಳಿದಾಗ, 'ಇಲ್ಲ ಸರ್, ನಾವು ಸಿ.ಎಂ.ಸಿ.ಎ ಸದಸ್ಯರು. ನಾವು ದ್ವಿಚಕ್ರ ವಾಹನಗಳನ್ನು ಚಲಾಯಿಸುವುದಿಲ್ಲ. ಏಕೆಂದರೆ ನಮ್ಮ ಬಳಿ ವಾಹನ ಚಾಲನಾ ಪರವಾನಗಿ ಇಲ್ಲ' ಎಂದು ಅಭಿಮಾನದಿಂದ ಹೇಳಿದರು. ಈ ವಿಷಯವನ್ನು ಕೇಳಿದ ನಂತರ ನನ್ನ ಅಭಿಮಾನ ದುಪ್ಪಟ್ಟಾಯಿತು. ವೇಗನಿಯಂತ್ರಕಅಳವಡಿಸಬೇಕಾದರೆ ಪುರಸಭೆ ಅಧಿಕಾರಿಗಳು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ(ಬಿ.ಬಿ.ಎಂ.ಪಿ)ಯ ಜೊತೆ ಚರ್ಚಿಸಬೇಕಿತ್ತು. ಅವರು ಕನ್ನಡದಲ್ಲಿ ಸುಂದರವಾಗಿ ಅರ್ಜಿಯನ್ನು ಬರೆಯಲು ಕಲಿತರು. ಇದಕ್ಕೆ ಇವರಿಗೆ ಅಧಿಕಾರಿಯ ಶ್ಲಾಘನೆಯೂ ವ್ಯಕ್ತವಾಯಿತು. ಅಲ್ಲದೆ ವೇಗನಿಯಂತ್ರಕಗಳನ್ನು ಅಳವಡಿಸುವ ತನಕ ಅಧಿಕಾರಿಯನ್ನು ವಿನಂತಿಸಲು ಅವರ ಕಚೇರಿಗೆ ಪದೇಪದೇ ಭೇಟಿ ನೀಡಿದರು.

ನಾನು ಈ ಹಿಂದೆಯೇ ಉಲ್ಲೇಖಿಸಿದಂತೆ, ಆಹಾರವನ್ನು ಹಾಳು ಮಾಡದೆ ಇರುವುದು, ಎಲ್ಲೆಂದರಲ್ಲಿ ಕಸ ಬಿಸಾಡದೆ ಇರುವುದು, ಮುಂತಾದ ಸಾಮಾನ್ಯ ವಿಚಾರಗಳಲ್ಲಿ ಈ ಎಳೆಯ, ಸಕ್ರಿಯ ನಾಗರಿಕರು ಪ್ರಾಥಮಿಕ ಶಾಲಾ ಮಕ್ಕಳಿಗೆ ಮಾರ್ಗದರ್ಶನ ನೀಡಲು ಪ್ರಾರಂಭಿಸಿದಾಗ, ಹಿರಿಯ ಮಕ್ಕಳಿಗಿಂತಲೂ ಈ ಮಕ್ಕಳಲ್ಲಿ ಅತ್ಯುತ್ತಮ ಮತ್ತು ಶೀಘ್ರ ಫಲಿತಾಂಶ ಬರುತ್ತದೆ ಎಂಬುದನ್ನು ಗಮನಿಸಿದೆ. ಎಳೆಯ ಮಗುವೊಂದು ಇನ್ನೊಬ್ಬ ಮಗುವಿಗೆ, 'ಹೇಯ್, ಕಸದಬುಟ್ಟಿಯ ಹೊರಗಡೆ ನಿನ್ನ ಪೆನ್ಸಿಲ್‌ಅನ್ನು ಮೊನಚು ಮಾಡಬೇಡ, ನೆಲವು ಕೊಳೆಯಾಗುತ್ತದೆ. ಪೆನ್ಸಿಲ್‌ಅನ್ನು ಯಾವ ಸ್ಥಳದಲ್ಲಿ ಮೊನಚು ಮಾಡಬೇಕು ಎಂಬುದನ್ನು ಅಕ್ಕ ಹೇಳಿದ್ದು ನೀನು ಕೇಳಿಸಿಕೊಳ್ಳಲಿಲ್ಲವೇ?' ಎಂದು ಹೇಳಿದ್ದನ್ನು ನಾನು ಕೇಳಿಸಿಕೊಂಡೆ. ಶಿಕ್ಷಕರು ಮತ್ತು ಹಿರಿಯರನ್ನು ಆರಾಧಿಸುವ ಮತ್ತು ಅವರು ಹೇಳಿದಂತೆ ಮಾಡುವ ಎಳೆಯ ಮಕ್ಕಳ ಈ ಪ್ರವೃತ್ತಿಯು, ಉತ್ತಮ ಪೌರತ್ವದ ಮೌಲ್ಯಗಳನ್ನು ಬಿತ್ತುವ ಜೊತೆಗೆ ಅನುಕೂಲಕರ–ವಾಗಿಯೂ ಕೆಲಸ ಮಾಡುತ್ತದೆ.

ಚಾರ್ಲ್ಸ್‌ಕಿಂಗ್ಸ್ಲಿ ಅವರ 'ವಾಟರ್ ಬೇಬೀಸ್'ನಿಂದ ಪಡೆದ ಒಂದು ಮೂಲಭೂತ ಪರಿಕಲ್ಪನೆಯನ್ನು ಕೇಂದ್ರಬಿಂದುವಾಗಿ ಪರಿಗಣಿಸ–ಬಹುದಾಗಿದೆ: 'ಇತರರು ನಿಮ್ಮ ಜೊತೆ ಹೇಗೆ ವರ್ತಿಸಬೇಕು ಎಂದು ನೀವು ಇಚ್ಛಿಸುತ್ತೀರೊ, ನೀವೂ ಅದೇ ರೀತಿ ಮಾಡಿ.' ಉದಾಹರಣೆಗೆ, ಒಂದು ವೇಳೆ ಬೇರೆ ಯಾರಾದರೂ ಶೌಚಾಲಯವನ್ನು ಹೊಲಸು ಮಾಡಿ ಹಾಗೆಯೇ ಬಿಟ್ಟರೆ ಅಥವಾ ಗೇಟ್‌ನ ಹೊರಗಡೆ ತ್ಯಾಜ್ಯವನ್ನು ಬಿಸಾಡಿದರೆ ನಿಮಗೆ ಹೇಗೆ ಅನಿಸುತ್ತದೆ ಎಂದು ಕೇಳಿ, ಕ್ರಿಯೆಗಳ ಕುರಿತು ಪರ್ಯಾಲೋಚನೆ ಮಾಡುವಂತೆ ಪ್ರೇರೇಪಿಸಬೇಕು. ಎಳೆಯ ಮಕ್ಕಳು ಮನಃ–ಪೂರ್ವಕವಾಗಿ ಮಾಡಬಹುದಾದ ಮತ್ತು ಶಾಲೆಯಲ್ಲಿ ಶಿಕ್ಷಕರು ಚರ್ಚಿಸಬಹುದಾದ ಕೆಲವು ಸರಳ ಚಟುವಟಿಕೆಗಳನ್ನು ಈ ಕೆಳಗೆ ನೀಡಲಾಗಿದೆ:

- ಹಲ್ಲುಜ್ಜುವಾಗ ನಲ್ಲಿಯನ್ನು ಮುಚ್ಚುವುದು (ಮತ್ತು ಕುಟುಂಬದ ಇತರ ಸದಸ್ಯರಿಗೂ ಇದೇ ರೀತಿ ಮಾಡಲು ಹೇಳುವುದು).

- ಮನೆಯಲ್ಲಿ ಅನಗತ್ಯವಾಗಿ ತಿರುಗುತ್ತಿರುವ ಫ್ಯಾನ್‌ಗಳು ಅಥವಾ ಉರಿಯುತ್ತಿರುವ ದೀಪಗಳನ್ನು ಆರಿಸುವುದು.

- ರಾತ್ರಿಯಿಡೀ ಎಲೆಕ್ಟ್ರಾನಿಕ್ ಉಪಕರಣಗಳನ್ನು ಚಾರ್ಜ್ ಮಾಡದಂತೆ ಹಿರಿಯ ಸಹೋದರ–ಸಹೋದರಿಯರು ಮತ್ತು ಪೋಷಕರನ್ನು ವಿನಂತಿಸುವುದು.

- ತ್ಯಾಜ್ಯವನ್ನು ಪ್ರತ್ಯೇಕಿಸಿ ಪುರಸಭೆಯ ಕಾರ್ಮಿಕರಿಗೆ ಹಸ್ತಾಂತರಿಸುವುದು ಹಾಗು ಯಾವ ಕಾರಣಕ್ಕೂ ಇದನ್ನು ಬೀದಿಯಲ್ಲಿ ಅಥವಾ ಖಾಲಿ ನಿವೇಶನದಲ್ಲಿ ಎಸೆಯದಂತೆ ನೋಡಿಕೊಳ್ಳುವುದು.

- ಸಿಹಿತಿಂಡಿಗಳ ಅಥವಾ ಸ್ನ್ಯಾಕ್ಸ್‌ಗಳ ಹೊದಿಕೆಗಳನ್ನು ಬೀದಿಯಲ್ಲಿ ಅಥವಾ ನೆಲದ ಮೇಲೆ ಬಿಸಾಡದೆ ಇರುವುದು; ಕಸದ ಬುಟ್ಟಿಯಲ್ಲಿಯೇ ಅವುಗಳನ್ನು ಹಾಕುವುದು.

- ಮನೆಗೆಲಸದವರು ಮತ್ತು ಪುರಸಭೆ ಕಾರ್ಮಿಕರು ಸೇರಿದಂತೆ ಎಲ್ಲರ ಜೊತೆ ಗೌರವದಿಂದ ಮಾತನಾಡುವುದು.

- ಬೇಸಿಗೆ ಕಾಲದಲ್ಲಿ ಹಕ್ಕಿಗಳಿಗಾಗಿ ಒಂದು ಸಣ್ಣತಟ್ಟೆಯಲ್ಲಿ ನೀರನ್ನು ಇಡುವುದು.

- ಶಾಪಿಂಗ್‌ಗಾಗಿ ಪೋಷಕರು ಮನೆಯಿಂದ ಹೊರ ಹೋಗುವಾಗ ಅವರು ಚೀಲವನ್ನು ತೆಗೆದುಕೊಂಡು ಹೋಗುವಂತೆ ನೆನಪಿಸುವುದು. ಇದನ್ನು ಕೋವಿಡ್‌ಗೆ ತಕ್ಕುದಾದ ಅಭ್ಯಾಸಕ್ಕೂ ವಿಸ್ತರಿಸಬಹುದು. ಮನೆಯಿಂದ ಹೊರಹೋಗುವ ಮೊದಲು ಎಲ್ಲರೂ ಮುಖಗವುಸನ್ನು ಧರಿಸುವಂತೆ ನೆನಪಿಸುವುದು, ಮನೆಗೆ ಮರಳಿದ ನಂತರ ಕೈಗಳನ್ನು ಸಾಬೂನಿನಿಂದ ತೊಳೆಯುವುದು ಇತ್ಯಾದಿಗಳನ್ನು ಸೇರ್ಪಡೆಗೊಳಿಸಬಹುದು.

- ವಾಹನ ಚಾಲನಾ ಪರವಾನಗಿ ಇಲ್ಲದೆ ವಾಹನ ಚಲಾಯಿಸದಂತೆ ಹಾಗು ದ್ವಿಚಕ್ರ ವಾಹನ ಚಲಾಯಿಸುವಾಗ ಕಡ್ಡಾಯವಾಗಿ ಹೆಲ್ಮೆಟ್ ಧರಿಸುವಂತೆ ತಮಗಿಂತ ಹಿರಿಯ ಸಹೋದರ–ಸಹೋದರಿಯರಿಗೆ ವಿನಂತಿಸುವುದು.

ಇಂತಹ ಅನೇಕ ಚಟುವಟಿಕೆಗಳನ್ನು ಕುರಿತು ಯೋಚಿಸಬಹುದು. ಅಲ್ಲದೆ ಎಳೆಯ ಮಕ್ಕಳು ತಾವಾಗಿಯೇ ಅಭಿವ್ಯಕ್ತಿಗೊಳಿಸಲು ಹಾಗು ತಮ್ಮ ಅನುಭವಗಳ ಕುರಿತು ಮಾತನಾಡಲು ಉತ್ತೇಜಿಸಿದರೆ, ಅವರು ಮಾಧ್ಯಮಿಕ ಶಾಲೆಗೆ ತಲುಪಿದ ಮೇಲೆ ಇದು ಅವರಲ್ಲಿ ಇನ್ನಷ್ಟು ಆತ್ಮವಿಶ್ವಾಸವನ್ನು ತುಂಬುತ್ತದೆ. ಈ ಎಳೆಯ ಮಕ್ಕಳು ಹದಿಹರೆಯವನ್ನು ತಲುಪುವ ಹೊತ್ತಿಗೆ, ಸರಿಯಾದ ದಿಶೆಯಲ್ಲಿರುವ ಪೌರತ್ವದ ವರ್ತನೆಗಳು ಮತ್ತು ಅಭ್ಯಾಸಗಳು ಅವರಲ್ಲಿ ಭದ್ರವಾಗಿ ಬೇರೂರಿರುತ್ತವೆ.

***ಮಕ್ಕಳ ಗುರುತನ್ನು ಕಾಪಾಡುವ ಉದ್ದೇಶದಿಂದ ಹೆಸರುಗಳನ್ನು ಬದಲಾಯಿಸಲಾಗಿದೆ.**



**ರಾಧಿಕಾ ರಾಜ್‌ನಾರಾಯಣ್** ಅವರು ಎಂಡೋಕ್ರೈನೋಲಜಿಯಲ್ಲಿ ಸ್ನಾತಕೋತ್ತರ ಪದವೀಧರರಾಗಿದ್ದು, ವ್ಯವಹಾರ ನಿರ್ವಹಣೆಯಲ್ಲಿ ಡಿಪ್ಲೊಮಾವನ್ನು ಪಡೆದಿದ್ದಾರೆ. ಅವರು ರಾ ಡೆಲ್ ಎಲೆಕ್ಟ್ರಾನಿಕ್ಸ್ ಪ್ರೈವೇಟ್ ಲಿಮಿಟೆಡ್‌ನ ಸಹಸಂಸ್ಥಾಪರು ಮತ್ತು ನಿರ್ದೇಶಕರು (ಸೇಲ್ಸ್ ಮತ್ತು ಮಾರ್ಕೆಟಿಂಗ್) ಆಗಿದ್ದಾರೆ. ಅವರು ಪೌರ ವಿಚಾರಗಳ ಕುರಿತು ಹಾಗು ಎಳೆಯ ಮಕ್ಕಳಲ್ಲಿ ಪೌರತ್ವದ ಮೌಲ್ಯಗಳನ್ನು ಬಿತ್ತುವ ವಿಚಾರದಲ್ಲಿ ಸಾಕಷ್ಟು ಆಸಕ್ತಿ ಹೊಂದಿದ್ದಾರೆ. ರಾಧಿಕಾ ಅವರು ಭಾರತೀಯ ಶಾಸ್ತ್ರೀಯ ಸಂಗೀತ ಹಾಡುಗಾರ್ತಿಯೂ ಆಗಿದ್ದಾರೆ. ಹಿರಿಯ ವೀಣಾವಾದಕರೂ ಆಗಿರುವ ಇವರು, ಅನೇಕ ಸಂಗೀತ ಕಚೇರಿಗಳಲ್ಲಿ, ರೇಡಿಯೋ ಮತ್ತು ಟಿ.ವಿಯಲ್ಲಿ ತನ್ನ ಕಾರ್ಯಕ್ರಮವನ್ನು ನೀಡಿದ್ದಾರೆ. ಹಿರಿಯರ ಆರೈಕೆಯಲ್ಲಿ ಪರಿಣತಿ ಹೊಂದಿರುವ ಇವರು, ಈ ಕ್ಷೇತ್ರದಲ್ಲಿ ಎರಡು ದಶಕಗಳ ಸಮೃದ್ಧ ಅನುಭವವನ್ನು ಹೊಂದಿದ್ದಾರೆ. ಅವರನ್ನು radhika.r2@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** । ಪರಿಶೀಲನೆ: **ಲತಾ ಕೆ.ಸಿ.**

# ಸಮಾಜಕ್ಕೆ ಮರಳಿ ನೀಡುವ ಕ್ರಮ

ಸಮೀರಾ ವಾಸಾ

ನಮ್ಮ ಗುಂಪಿನಲ್ಲಿ ಪೌರತ್ವ ಶಿಕ್ಷಣದ ಬಗ್ಗೆ ಲೇಖನವೊಂದನ್ನು ಬರೆಯುವುದಕ್ಕೆ ಸಂಬಂಧಿಸಿದ ಸುದ್ದಿ ಪ್ರಸ್ತಾಪವಾದಾಗ ನನಗೆ ಅಚ್ಚರಿ ಎನಿಸಿತು ಮತ್ತು ತಕ್ಷಣ ಮಾರ್ಗದರ್ಶಕರೊಬ್ಬರು ದಿ ಬ್ಯಾಸ್ಟಿನ್ (The Bastion)ನಲ್ಲಿ ಪ್ರಕಟವಾದ ಲೇಖನವೊಂದರ ಮೂಲಕ ನನ್ನಲ್ಲಿ ಅರಿವನ್ನು ಹೆಚ್ಚಿಸಿದರು. ಈ ಲೇಖನವು ಶಾಲೆಗಳಲ್ಲಿನ ಪೌರ ಶಿಕ್ಷಣ ಹಾಗು ನಮ್ಮ ದೇಶದಲ್ಲಿರುವ ವಾಸ್ತವಕ್ಕೆ ಪ್ರತಿಯಾಗಿ ಪಠ್ಯ-ಕ್ರಮದಲ್ಲಿರುವ ವ್ಯತ್ಯಾಸಗಳ ಮೇಲೆ ಬೆಳಕು ಚೆಲ್ಲಿದೆ. ಈ ಲೇಖನವು ನಿಶ್ಚಿತವಾಗಿ ಪೌರತ್ವ ಶಿಕ್ಷಣದ ಬಗ್ಗೆ ಒಂದಷ್ಟು ಹೊಳಹುಗಳನ್ನು ನೀಡಿದೆ. ಆದರೆ ಒಟ್ಟಾರೆಯಾಗಿ ಇದು ನಮ್ಮ ಬದುಕಿನಲ್ಲಿ ಹೇಗೆ ಹಾಸುಹೊಕ್ಕಾಗಿದೆ ಎಂಬುದಕ್ಕೆ ಸಂಬಂಧಿಸಿದಂತೆ ನನ್ನ ತಿಳುವಳಿಕೆಯಲ್ಲಿ ಸಾಕಷ್ಟು ಅಂತರವಿರುವುದು ಕಂಡುಬಂದಿತು.

ಇದು ಪೌರ ಶಿಕ್ಷಣದ ಬಗೆಗಿನ ನನ್ನ ಜ್ಞಾನವನ್ನು ಇನ್ನಷ್ಟು ವಿಸ್ತರಿಸಲು ದಾರಿ ಮಾಡಿಕೊಟ್ಟಿತಾದರೂ ಅದಾದ ಮರುದಿನವೇ ನನಗೆ 7ನೇ ತರಗತಿಯ ಮಕ್ಕಳ ಜೊತೆ ಕುಳಿತು ಪಾಠ ಕೇಳುವ ಅವಕಾಶ ಲಭ್ಯವಾಯಿತು. ಆ ತರಗತಿಯಲ್ಲಿ ಬ್ರಿಟಿಷ್ ಆಡಳಿತಕ್ಕೆ ಸೆಡ್ಡು ಹೊಡೆದ ಭಾರತದ ಕ್ರಾಂತಿಕಾರಿ ವೀರ, ಕರ್ನಾಟಕದವರೇ ಆದ ಮೈಲಾರ ಮಹಾದೇವನ ಬಗ್ಗೆ ಶಿಕ್ಷಕಿ ಪಾಠ ಹೇಳುತ್ತಿದ್ದರು. ಅಂದು ಪುರಾಣಕ್ಕೆ ಸಂಬಂಧಿಸಿದ ಪಾಠ ಮಾಡಿದ ಶಿಕ್ಷಕಿಯನ್ನು ನಾನು ಈಗಾಗಲೇ ಅನೇಕ ಬಾರಿ ಭೇಟಿ ಮಾಡುವ ಅವಕಾಶ ಲಭ್ಯವಾಗಿತ್ತು. ಅವರ ಬಳಿ ಕಥೆಗಳು ಹಾಗು ಸಾದೃಶ್ಯಗಳ ದೊಡ್ಡ ಭಂಡಾರವೇ ಇತ್ತು. ಆ ಕಥೆಯ ನಾಯಕನಾದವನು ಬ್ರಿಟಿಷರು ತಯಾರಿಸಿದ ಟೊಪ್ಪಿಯನ್ನು ಹೇಗೆ ವಿದೇಶಿ ಎಂದು ಭಾವಿಸಿದ ಮತ್ತು ಅದನ್ನು ತಕ್ಷಣ ಕಿತ್ತೆಸೆದ ಎಂಬುದನ್ನು ಶಿಕ್ಷಕಿ ವಿವರಿಸಲು ಆರಂಭಿಸಿದ್ದರು. ಆ ಬಳಿಕ ಆಕೆ ವಿದೇಶಿ ಮತ್ತು ಸ್ವದೇಶಿಯ ಬಗ್ಗೆ ವಿವರಣೆ ನೀಡುತ್ತ ಹೋದರು. ಈ ಹಂತದಲ್ಲಿ ಆಕೆ ಮಕ್ಕಳ ಬಳಿ ಆ ವಿಷಯವನ್ನು ಮಂಡಿಸಿದ ರೀತಿ ಸುಂದರವಾಗಿತ್ತು; ಒಂದು ಗಿಡವನ್ನು ನೆಟ್ಟು, ಅದಕ್ಕೆ ನೀರೆರೆದು ಪೋಷಿಸಿ, ಕಾಳಜಿ ಮಾಡಿ ಅಂತಿಮವಾಗಿ ಅದು ಸುಂದರವಾದ ಹೂವು ಬಿಡುವುದನ್ನು ಕಲ್ಪಿಸಿಕೊಳ್ಳಿ ಎಂದು ಆಕೆ ಹೇಳಿದರು.

ಇಂತಹ ಒಂದು ಉದಾಹರಣೆಯ ಮೂಲಕ ಸ್ವದೇಶಿ ಎಂಬುದರಲ್ಲಿ ತಮ್ಮದು, ತಮಗೆ ಸೇರಿದ್ದು ಎಂಬ ಭಾವನೆ ಹೇಗೆ ತಳುಕು ಹಾಕಿಕೊಂಡಿರುತ್ತದೆ ಎಂಬುದನ್ನು ಆಕೆ ವಿವರಿಸಲು ಬಯಸಿದ್ದರು. ತಾವೇ ಪೋಷಿಸಿ ಬೆಳೆಸಿದ ಗಿಡದಿಂದ ಹೂವನ್ನು ಪಡೆಯುವುದಕ್ಕೂ, ಮಾರುಕಟ್ಟೆಯಿಂದ ತರುವ ಹೂವಿನ ಬಗ್ಗೆ ಇರುವ ಭಾವನೆಗೂ ಎಷ್ಟು ವ್ಯತ್ಯಾಸವಿದೆ ಎಂಬುದನ್ನು ವಿವರಿಸುವಂತೆ ಶಿಕ್ಷಕಿ ಮಕ್ಕಳನ್ನು ಕೇಳಿದ್ದರು.

ಅದಾದ ಬಳಿಕ ಶಿಕ್ಷಕಿ ಜವಾಬ್ದಾರಿಯ ಬಗ್ಗೆ ವ್ಯಾಖ್ಯಾನವನ್ನು ನೀಡಲು ಪ್ರತಿಯೊಬ್ಬರಿಗೂ ಅನ್ವಯವಾಗುವಂತಹ ಇನ್ನೊಂದು ಕಥೆಯನ್ನು ಹೇಳಿದರು. ಭಾರತದ ಸರ್ಕಾರಿ ಶಾಲೆಯಲ್ಲಿ ಕಲಿತ ವ್ಯಕ್ತಿಯೊಬ್ಬ ಅಂತಿಮವಾಗಿ ಉತ್ತಮವಾದ ಜೀವನವನ್ನು ಸಾಗಿಸಲು ವಿದೇಶಕ್ಕೆ ವಲಸೆ ಹೋದ ಕಥೆ ಅದಾಗಿತ್ತು. ಆ ನಂತರ ಅವರು, ಈ ದೇಶದ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ಬಳಸಿಕೊಂಡು, ಆದರೆ ದೇಶಕ್ಕೆ ಮರಳಿ ಏನನ್ನೂ ಕೊಡದವರು ಯಾರಾದರೂ ನಿಮಗೆ ತಿಳಿದಿದ್ದಾರೆಯೇ ಎಂದು ಮಕ್ಕಳನ್ನು ಕೇಳಿದರು. ಶಿಕ್ಷಕಿ ಮಕ್ಕಳಿಗೆ ಯೋಚನೆ ಮಾಡಲು ಆಹಾರವನ್ನು ಕೊಟ್ಟಿದ್ದರು ಮತ್ತು ನನ್ನ ಮೇಲೆ ಸಮಾಜದ ಋಣ ಎಷ್ಟಿದೆ ಎಂದು ನಾನೂ ಕೂಡ ಯೋಚನೆ ಮಾಡುವಂತಾಯಿತು. ಒಂದು ಮಗುವಾಗಿ, ಕುಟುಂಬದ ಸದಸ್ಯರಾಗಿ ಮತ್ತು ವಿದ್ಯಾರ್ಥಿಯಾಗಿ ಪಾಲಕರ ಬಗ್ಗೆ ತಮ್ಮ ಜವಾಬ್ದಾರಿ ಏನು ಎಂಬುದನ್ನು ಯೋಚನೆ ಮಾಡುವಂತೆ ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಕೇಳುವ ಮೂಲಕ ಅವರು ತಮ್ಮ ತರಗತಿಯನ್ನು ಅಂದು ಮುಕ್ತಾಯಗೊಳಿಸಿದ್ದರು.

ಆದರೆ ತರಗತಿಯೇನೂ ಅಲ್ಲಿಗೇ ಮುಗಿದಿರಲಿಲ್ಲ. ಶಿಕ್ಷಕರು ಶೌಚಾಲಯಕ್ಕೆ ಹೋಗಲು, ಅವರ ತಟ್ಟೆಗಳನ್ನು ಸ್ವಚ್ಛಗೊಳಿಸಲು, ಅವರ ಬುತ್ತಿಯನ್ನು ತೆರೆಯಲು ಮಕ್ಕಳು ತಾವಾಗಿಯೇ ಮುಂದೆ ಬಂದು ಸಹಾಯ ಮಾಡಿದರು. ಶಿಕ್ಷಕರು ಮುಂದಿನ ತರಗತಿಗೆ ಹೋಗುವ ತನಕ ಅವರಿಗೆ ಬೇಕಾದ ಸಹಾಯವನ್ನು ಮಕ್ಕಳು ಮಾಡಿದ್ದು ವಿಶೇಷವಾಗಿತ್ತು. ಇದಕ್ಕೆ ಕಾರಣವನ್ನು ನಾನು ಹೇಳಲೇಬೇಕಾಗಿದೆ– ಆ ಶಿಕ್ಷಕಿಗೆ ಅಂಗವಿಕಲತೆ ಇದ್ದು ಅವರಿಗೆ ಓಡಾಡಲು ಸಹಾಯದ ಅಗತ್ಯವಿತ್ತು. ಇನ್ನೊಂದು ಅಚ್ಚರಿಯ ಸಂಗತಿ ಏನೆಂದರೆ ಅವರ ತರಗತಿಯಲ್ಲಿ ಸಹಾಯ ಮಾಡುವಂತೆ ಯಾರೂ ಮಕ್ಕಳಿಗೆ ವಿಶೇಷವಾಗಿ ಹೇಳಬೇಕಾದ ಅಗತ್ಯವಿರಲಿಲ್ಲ. ಎಲ್ಲರೂ ಅವರಾಗಿಯೇ ಎದ್ದು ಬಂದು ಅತ್ಯಂತ ವ್ಯವಸ್ಥಿತವಾದ ರೀತಿಯಲ್ಲಿ ಶಿಕ್ಷಕಿಗೆ ಸಹಾಯ ಮಾಡುತ್ತಿದ್ದರು.

ಈ ಶಿಕ್ಷಕಿಯು ಅನೇಕ ಗೌರವಗಳಿಗೆ ಪಾತ್ರರಾಗಿದ್ದರು. ಇಲ್ಲಿ ಪ್ರಸ್ತಾಪ ಮಾಡಲೇಬೇಕಾದ ಅವರ ಇನ್ನೊಂದು ವಿಶೇಷ ಗುಣ ಏನೆಂದರೆ ಆಕೆ ಪಾಠ ಮಾಡುವುದನ್ನೆಲ್ಲ ಪ್ರಯೋಗದ ರೂಪದಲ್ಲಿ ಜಾರಿಗೆ ತರುತ್ತಿದ್ದರು. ಅವರು ಮಾಡುವ ಇಂತಹ ಕೆಲಸಗಳು ಇತರರಿಗೆ ಸ್ಫೂರ್ತಿಯಾಗುತ್ತಿತ್ತು ಮತ್ತು ಇನ್ನಷ್ಟು ಉತ್ತಮ ಜೀವನವನ್ನು ನಡೆಸಲು ಪ್ರೇರಣೆ ನೀಡುತ್ತಿತ್ತು. ಶಿಕ್ಷಕಿಯಾಗಿ ನಿವೃತ್ತಿಯಾಗಲು ಇನ್ನೇನು ಏಳು ತಿಂಗಳು ಮಾತ್ರ ಬಾಕಿಯಿದ್ದ ಅವರು, ನಿವೃತ್ತಿಯ ಬಳಿಕ ತಮ್ಮ ಸಮಯವನ್ನು ತನ್ನ ಊರಿಗೆ ತೆರಳಿ ತಾನು ಚಿಕ್ಕವಳಿದ್ದಾಗ ಕಲಿತ ಶಾಲೆಯಲ್ಲಿ ಸ್ವಯಂಸೇವಕಿಯಾಗಿ ಕೆಲಸ ಮಾಡುವ ಯೋಜನೆಯನ್ನು ಹೊಂದಿದ್ದರು. ಈಗಾಗಲೇ ನೂರು ವರ್ಷಗಳನ್ನು ಪೂರೈಸಿರುವ ಅವರ ತವರಿನ ಆ ಶಾಲೆಯಿಂದಾಗಿಯೇ ಇಂದು ತಾನು ಹೀಗಿರುವುದಕ್ಕೆ ಕಾರಣ, ಮತ್ತೆ ಅಲ್ಲಿ ಹೋಗಿ ಸೇವೆ ಸಲ್ಲಿಸುವುದು ತನ್ನ ಜವಾಬ್ದಾರಿ. ತನಗೆ ಕಲಿಸಿದ ಶಿಕ್ಷಕರಿಗೆ, ತವರೂರಿಗೆ ಮತ್ತು ತನ್ನ ಸಮುದಾಯಕ್ಕೆ ಋಣ ಸಂದಾಯ ಮಾಡುವುದು ಕರ್ತವ್ಯ ಎಂದು ಅವರು ವಿವರಿಸಿದ್ದು ವಿಶೇಷವಾಗಿತ್ತು.

ನಾವು ಕೇವಲ ಮನುಷ್ಯರಾಗಿರುವುದು ಮಾತ್ರವಲ್ಲದೆ ಅದಕ್ಕಿಂತ ಹೆಚ್ಚಿನದನ್ನು ಸಮಾಜಕ್ಕಾಗಿ ಮಾಡಬೇಕು ಎನ್ನುವುದಕ್ಕೆ ಈ

ಶಿಕ್ಷಕಿಯೇ ನನಗೆ ಸದಾ ಪ್ರೇರಣೆ ಮತ್ತು ಸ್ಫೂರ್ತಿಯಾಗಿದ್ದಾರೆ. ಆಕೆ ತಮ್ಮ ಭಾಷೆ, ಗಣಿತ ವಿಷಯ ಮತ್ತು ಸಾಮಾನ್ಯ ಚರ್ಚೆಯ ಮೂಲಕ ವಿದ್ಯಾರ್ಥಿಗಳಲ್ಲಿ ಉತ್ತಮ ಮೌಲ್ಯಗಳನ್ನು ತುಂಬುವ ಸಾಮರ್ಥ್ಯವನ್ನು ಹೊಂದಿದವರು ಎನ್ನುವುದರಲ್ಲಿ ಯಾವುದೇ ಅನುಮಾನವಿರಲಿಲ್ಲ. ಮಕ್ಕಳಲ್ಲಿ ಇಂತಹ ಮೌಲ್ಯಗಳನ್ನು ತುಂಬುವುದರಿಂದ ಅವರ ನಡವಳಿಕೆಯಲ್ಲಿ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ ಮತ್ತು ಅದು ಮಕ್ಕಳ ಕಲಿಕೆಯಲ್ಲಿ ಧನಾತ್ಮಕ ನಿಟ್ಟಿನಲ್ಲಿ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ನಾನು ಕಂಡುಕೊಂಡಿದ್ದೇನೆ. ಇದಕ್ಕೆ ಆ ಶಿಕ್ಷಕಿಯ ತರಗತಿಯಲ್ಲಿದ್ದ ವಿದ್ಯಾರ್ಥಿಗಳೇ ಸಾಕ್ಷಿಯಾಗಿದ್ದರು. ಆ ಮಕ್ಕಳು ಖುಷಿಖುಷಿಯಿಂದ ಕಲಿಯುತ್ತಿದ್ದರು, ಸದಾ ಸಹಾನುಭೂತಿಯನ್ನು ಹೊಂದಿದ್ದರು, ದೃಢನಿಶ್ಚಯವನ್ನು ಹೊಂದಿದ್ದರು, ಸಮಸ್ಯೆಗಳನ್ನು ಪರಿಹರಿಸುವ ಮನೋಭಾವದವರಾಗಿದ್ದರು ಮತ್ತು ಒಟ್ಟಿಗೆ ಸೇರಿ ಕೆಲಸ ಮಾಡುವ ಮನೋಭಾವವನ್ನು ಹೊಂದಿದ್ದರು. ಆಕೆ ಪಾಠ ಮಾಡಿದ್ದನ್ನು ಪ್ರಯೋಗದ ಮೂಲಕ ಜಾರಿಗೆ ತರುತ್ತಿದ್ದರು ಎಂಬುದಕ್ಕೆ ಆ ಮಕ್ಕಳೇ ಮಾದರಿಗಳಾಗಿದ್ದರು. ಜವಾಬ್ದಾರಿ, ಪ್ರಾಮಾಣಿಕತೆ, ಸಮಾಜಕ್ಕೆ ಮರಳಿ ನೀಡುವುದು ಮುಂತಾದ ಬೋಧನೆಗಷ್ಟೇ ಸೀಮಿತವಾದ ಪದಗಳು ಭಾವನೆಗಳನ್ನು ಪ್ರಚೋದಿಸಲು ಕಲಿಸಿದಾಗ, ಮಕ್ಕಳಿಗೆ ಇವುಗಳನ್ನು ಸಮರ್ಪಕವಾಗಿ ಮಾಡಿದಾಗ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಮಾತಿನಲ್ಲಿ ಹೇಳಿದ್ದನ್ನು ಪ್ರತಿ ದಿನವೂ ಅತ್ಯಂತ ತಾಳ್ಮೆಯಿಂದ ಮತ್ತು ಸಂತೋಷದಿಂದ ಕಾರ್ಯರೂಪಕ್ಕೆ ತಂದಾಗ ಹೆಚ್ಚು ಪರಿಣಾಮಕಾರಿಯಾಗುತ್ತವೆ.



**ಸಮೀರಾ ವಾಸಾ** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಸೃಜನಾತ್ಮಕ ಕಲೆಗಳನ್ನು ಇಷ್ಟಪಡುವ ಅವರಿಗೆ ಮಕ್ಕಳೊಂದಿಗೆ ಕೆಲಸ ಮಾಡುವುದೆಂದರೆ ಅಚ್ಚುಮೆಚ್ಚು. ಹಾಗಾಗಿ ಅವರು ಮಕ್ಕಳೊಂದಿಗೆ ಕೆಲಸ ಮಾಡಲು ಮತ್ತು ಅವರ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ನಿಟ್ಟಿನಲ್ಲಿ ಸೃಜನಾತ್ಮಕ ದಾರಿಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಸಮೀರಾ ಅವರನ್ನು ಈ ಮಿಂಚಂಚೆ ಮೂಲಕ ಸಂಪರ್ಕಿಸಬಹುದಾಗಿದೆ: sameera.vasa@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಲತಾ ಕೆ.ಸಿ.**

ಯಾರೋ ಒಬ್ಬರು ಮಾತನಾಡುತ್ತಿದ್ದಾಗ ಶಿಕ್ಷಕರು ಸೇರಿದಂತೆ ಪ್ರತಿಯೊಬ್ಬರು ಕೂಡ ತಮ್ಮ ಮಾತಿಗೆ ಅವಕಾಶ ಸಿಗುವ ತನಕ ಕಾಯಬೇಕು, ಕೈ ಎತ್ತುವುದು ಮತ್ತು ಮಧ್ಯಪ್ರವೇಶ ಮಾಡುವಂತಿಲ್ಲ ಎಂಬುದು ನಮ್ಮ ನಿಯಮಗಳ ಭಾಗವಾಗಿದೆ. ಪ್ರತಿಯೊಂದು ಮಾತನ್ನೂ ಕೇಳಲಾಗುತ್ತದೆ ಮತ್ತು ಯಾವುದಾದರೂ ಭಿನ್ನಾಭಿಪ್ರಾಯಗಳಿದ್ದರೆ ನಾವು ಅದಕ್ಕೆ ಕಾರಣಗಳನ್ನು ಕೇಳಲಿದ್ದೇವೆ. ಇದನ್ನು ಪರಸ್ಪರ ಒಪ್ಪಿತವೇ ಎಂಬುದನ್ನು ಮಕ್ಕಳೇ ನಿರ್ಧಾರ ಮಾಡಲು ಬಿಡಲಾಗುತ್ತದೆ. ಇಂತಹ ಒಂದು ವ್ಯವಸ್ಥೆಯು ಪ್ರತಿಯೊಂದು ವಿಷಯವೂ ತನಗೆ ತಿಳಿದಿದೆ ಮತ್ತು ಯಾವತ್ತೂ ತಾನೇ ಮಾತನಾಡಬೇಕು ಮತ್ತು ಮೊದಲು ಉತ್ತರ ಕೊಡಬೇಕು ಎಂದು ಭಾವಿಸುವ ವಿದ್ಯಾರ್ಥಿಗಳಿಗೆ ಸಹಾಯವಾಗುತ್ತದೆ. ಅವರು ತಮಗೆ ಅವಕಾಶ ಸಿಗುವವರೆಗೂ ಕಾಯುವುದನ್ನು ಕಲಿತರು, ಇತರರ ಅಭಿಪ್ರಾಯಗಳನ್ನು ಗೌರವಿಸುವುದು ಹಾಗೂ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವುದನ್ನು ಕಲಿತರು.

**–ಪೂಜಾ ವಿಷ್ಣೋಯ್, ಸಮಾಜದ ಸೂಕ್ಷ್ಮಪದರವಾಗಿ ಶಾಲೆ, (ಸ್ಕೂಲ್ ಆ್ಯಸ್ ಎ ಮೈಕ್ರೋಕಾಸ್ಮ್ ಆಫ್ ಸೊಸೈಟಿ) ಪುಟ–74**

# ಒಳಗೊಳ್ಳುವ ಅವಕಾಶವಾಗಿ ಶಾಲೆ: ನನ್ನ ಅನುಭವಗಳು

ಸುಹೈಲ್ ಹಮೀದ್

ಈಗ ನಮ್ಮ ಬಗ್ಗೆ ಆಲೋಚಿಸೋಣ. ನಮ್ಮ ಕುಟುಂಬದಲ್ಲಿ ಅಕ್ಷರಸ್ಥರ ಸಾಲಿನಲ್ಲಿ ನಾವು ಎಷ್ಟನೆಯ ಪೀಳಿಗೆಯವರು? ಈ ಪ್ರಶ್ನೆಗೆ ಉತ್ತರವು ನಮ್ಮ ಸಾರ್ವಜನಿಕ ವಿಶೇಷ ಸವಲತ್ತುಗಳನ್ನು ಗುರುತಿಸಲು ಇರುವ ಮಾರ್ಗಗಳಲ್ಲಿ ಒಂದು. ಜಾತಿಯ ಇಂಥ ಶ್ರೇಣೀಕೃತ ಸಾಮಾಜಿಕ ವರ್ಗೀಕರಣವು ಅಧಿಕಾರ ರಚನೆಗೆ ಸಂಬಂಧಿಸಿದಂತೆ, ಕಡಿಮೆ ಸಂಖ್ಯೆಯಲ್ಲಿರುವ ಹಲವಾರು ಸಮುದಾಯಗಳನ್ನು ಚಾರಿತ್ರಿಕವಾಗಿ ಮೂಲೆಗುಂಪು ಮಾಡಿದೆ. ಸಮುದಾಯಗಳು ಹಾಗು ಅವುಗಳ ಸಾಮಾಜಿಕ ಸವಲತ್ತುಗಳನ್ನು ರಾಜ್ಯದ ನಾನಾ ಸಂಸ್ಥೆಗಳಲ್ಲಿ ಅವುಗಳ ಪ್ರಾತಿನಿಧ್ಯದ ಆಧಾರದಲ್ಲೂ ನೋಡಬಹುದು. ಅದೇ ಹೊತ್ತಿನಲ್ಲಿ ಈ ಭಾರೀ ಅಂತರದ ಮೂಲವನ್ನು ಪತ್ತೆ ಹಚ್ಚಬೇಕು ಹಾಗು ಅದಕ್ಕೆ ಶಿಕ್ಷಣ ಸಂಸ್ಥೆಗಳಲ್ಲೇ ಚಿಕಿತ್ಸೆ ನೀಡಬೇಕು. ಈ ಲೇಖನದಲ್ಲಿ 2019–20ರ ಅವಧಿಯಲ್ಲಿ ನನ್ನ ಶಾಲೆಯಲ್ಲಿ ನಾನು ಸಾಕ್ಷೀಕರಿಸಿದ ಕೆಲವು ಘಟನೆಗಳ ಬಗ್ಗೆ ಹಾಗು ಇವು ಸಾಮಾಜಿಕವಾಗಿ ಬದಿಗೊತ್ತಲ್ಪಟ್ಟ ಸಮುದಾಯದ ವಿದ್ಯಾರ್ಥಿಗಳ ಬದುಕನ್ನು ಹೇಗೆ ಪ್ರತಿಫಲಿಸುತ್ತವೆ ಎಂಬುದರ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸುತ್ತೇನೆ. ಕೆಳಗಿನ ಘಟನೆಯು ನಾನು ಶಾಲೆಯೊಂದಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಸಂಭವಿಸಿತು.

ಶಿಕ್ಷಕರು ತರಗತಿಯಲ್ಲಿ ನಾನಾ ವೃತ್ತಿಗಳ ಬಗ್ಗೆ ಚರ್ಚಿಸುತ್ತಿದ್ದರು. ನಿಮ್ಮ ತಂದೆ ಹಾಗುಸೋದರರು ಯಾವ ಕಸುಬು ಮಾಡುತ್ತಿದ್ದಾರೆ ಎಂದು ಅವರು ವಿದ್ಯಾರ್ಥಿಗಳನ್ನು ಪ್ರಶ್ನಿಸಿದರು.

'ಸರ್, ನನ್ನ ತಂದೆ ಕೃಷಿಕ'

'ಸರ್, ನನ್ನ ಸೋದರ ಟ್ರ್ಯಾಕ್ಟರ್ ಚಾಲಕ'

ಅಂಗಡಿ ವ್ಯಾಪಾರಿ, ಕಟ್ಟಡ ನಿರ್ಮಾಣ ಕಾರ್ಮಿಕ, ಪೇಂಟರ್, ಅಕ್ಕಿ ಗಿರಣಿ ನೌಕರ... ಎಂದೆಲ್ಲ ಉತ್ತರಗಳು ಕೊಠಡಿಯ ಬೇರೆಬೇರೆ ಭಾಗಗಳಿಂದ ಬಂತು.

'ಇದು ಇರುವುದು ಇದೇ ರೀತಿ. ಮನೆಯಲ್ಲಿರುವ ಪುರುಷರು ಕುಟುಂಬ ನಿರ್ವಹಣೆಗೆ ಬೇರೆಬೇರೆ ಕೆಲಸ ಮಾಡುತ್ತಾರೆ,' ಎಂದು ಶಿಕ್ಷಕ ಹೇಳಿದರು.

ಒಂದು ಮಗು ಹೇಳಿತು, 'ನನ್ನ ತಂದೆ ಮೀನು ಹಿಡಿಯುತ್ತಾರೆ,'

ಇದಕ್ಕೆ ಶಿಕ್ಷಕನಿಂದ ಊಹಿಸಲೂ ಆಗದ ಪ್ರತಿಕ್ರಿಯೆ ಬಂದಿತು. 'ಹೌದು. ಇಂಥ ಕೆಲಸವನ್ನು ಮಾಡುವ ಜನರಿದ್ದಾರೆ. ಆದರೆ, ನಿಮ್ಮ ಜನ ಮಾತ್ರ ಈ ಕೆಲಸ ಮಾಡುತ್ತಾರೆ. ಬೇರೆಯವರು ಮಾಡುವುದಿಲ್ಲ.'

ಪ್ರಾಥಮಿಕ ಶಾಲೆಯ ಮಕ್ಕಳಿಗೆ ಸರ್ಕಾರಿ ನೌಕರನೊಬ್ಬನ ಸಾಮಾಜಿಕ ಶ್ರೇಣೀಕರಣ ಕುರಿತ ಇಂಥ ಆಘಾತಕಾರಿ ಹೇಳಿಕೆಗೆ ನಾನು ಸಾಕ್ಷಿಯಾಗಿದ್ದೆ. ತಾನು ಏನು ಹೇಳಿದೆ ಎನ್ನುವ ಬಗ್ಗೆ ಆತನಿಗೆ ಅರಿವಿಲ್ಲ ಎಂದು ನಾನು ಭಾವಿಸಲಾರೆ.

ಇನ್ನೊಂದು ಶಾಲೆಯಲ್ಲಿ ಒಂದು ವರ್ಷ ಕಾಲ ಸಹಾಯಕನಾಗಿ ನಾನು ಕೆಲಸ ಮಾಡಿದ್ದೆ. ಆ ಸ್ಥಳವು ಭತ್ತದ ಗದ್ದೆಗಳಿಂದ ಸುತ್ತುವರೆದಿತ್ತು ಮತ್ತು ಆ ಗ್ರಾಮದ ಮಧ್ಯದಲ್ಲಿ ನಾಲೆ ಹರಿಯುತ್ತಿತ್ತು. ನಾಲೆಯು ಥೇಲಿ–ಚಂದ್ರಾಕರ್ (ಒಬಿಸಿ ಸಮುದಾಯ) ವಸತಿಗಳನ್ನು ಸತ್ನಾಮಿ ಬಸ್ತಿ (ಹೆಚ್ಚಿನವರು ಪರಿಶಿಷ್ಟ ವರ್ಗಕ್ಕೆ ಸೇರಿದವರು) ವಸತಿಗಳಿಂದ ಪ್ರತ್ಯೇಕಿಸುತ್ತಿತ್ತು. ನಾನು ಮಾತನಾಡಿಸಿದ ಗ್ರಾಮಸ್ಥರು ಗ್ರಾಮದಲ್ಲಿ ಜಾತಿ ಆಚರಣೆಗಳು ಹಾಗು ಪ್ರತ್ಯೇಕಿಸುವಿಕೆ ಇಲ್ಲ ಎಂದಿದ್ದರೂ, ಸಮುದಾಯಗಳ ಭೌಗೋಳಿಕ ಪ್ರತ್ಯೇಕಿಸುವಿಕೆ ಅದರ ಇರುವಿಕೆಗೆ ಸಾಕ್ಷಿಯಾಗಿತ್ತು.

ಈ ಗ್ರಾಮದಲ್ಲಿ ಎರಡು ಪ್ರಾಥಮಿಕ ಶಾಲೆಗಳು ಇದ್ದವು. ಒಂದು ನಾಲೆಯ ಉತ್ತರ ಭಾಗದಲ್ಲಿ (ಸತ್ನಾಮಿ ಬಸ್ತಿ ಬಳಿ) ಹಾಗು ಇನ್ನೊಂದು ದಕ್ಷಿಣ ಭಾಗ (ಹೆಚ್ಚಾಗಿ ಓಬಿಸಿ ಸಮುದಾಯಗಳಿದ್ದ ಪ್ರದೇಶ)ದಲ್ಲಿತ್ತು. ನಾನು ಎರಡನೇ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದೆ. ಶಾಲೆಗೆ ಗ್ರಾಮದ ಎಲ್ಲಾ ಭಾಗಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಆದರೆ, ಸತ್ನಾಮಿ ಬಸ್ತಿಯಿಂದ ಬರುತ್ತಿದ್ದವರು ಅತ್ಯಂತ ಕಡಿಮೆ ಹಾಗು ವಿದ್ಯಾರ್ಥಿಗಳು ತರಗತಿ ಕೊಠಡಿಯಲ್ಲಿ ಕುಳಿತುಕೊಳ್ಳುತ್ತಿದ್ದ ರೀತಿಯು ವ್ಯತ್ಯಾಸಗಳನ್ನು ಎತ್ತಿ ತೋರಿಸುವಂತಿತ್ತು.

ಒಂದು ಮತ್ತು ಎರಡನೇ ತರಗತಿಯಲ್ಲಿ ಇಬ್ಬರು ಬಾಲಕರು ಮತ್ತು ಒಬ್ಬಳು ಬಾಲಕಿ ಸಾಮಾನ್ಯವಾಗಿ ಒಟ್ಟಿಗೆ ಕುಳಿತುಕೊಳ್ಳುತ್ತಿದ್ದರು. ನಾಚಿಕೆಯ ಸ್ವಭಾವದ ಅವರು ಯಾರೊಡನೆಯೂ ಬೆರೆಯುತ್ತಿರಲಿಲ್ಲ; ತರಗತಿಯ ಒಂದು ಮೂಲೆಯಲ್ಲಿ ತಲೆ ತಗ್ಗಿಸಿಕೊಂಡು, ಕಣ್ಣಿಗೆ ಕಣ್ಣು ಬೆರೆಸದೆ ಕುಳಿತುಕೊಳ್ಳುತ್ತಿದ್ದರು. ಗ್ರಾಮದ ಒಂದೇ ಭಾಗದಿಂದ ಬರುತ್ತಿದ್ದ ಅವರು, ನೆರೆಹೊರೆಯವ–ರಾಗಿದ್ದರು. ಒಂದು ದಿನ ಸಂಭವಿಸಿದ ಘಟನೆ ಇದು.

ರಾಣಿ ಆ ದಿನ ತರಗತಿಗೆ ತಡವಾಗಿ ಬಂದಳು ಹಾಗು ಎರಡನೇ ಸಾಲಿನಲ್ಲಿ ಕುಳಿತಳು. ಹೆಚ್ಚಿನ ವಿದ್ಯಾರ್ಥಿಗಳು ಅಷ್ಟರೊಳಗೆ ಬಂದು ಕುಳಿತಿದ್ದರು. ರಾಣಿಯ ಪಕ್ಕದಲ್ಲಿದ್ದ ಬಾಲಕ, ಪ್ರತಿಭಟಿಸಿದ. ಆಕೆ ಅಲ್ಲಿ ಕುಳಿತುಕೊಳ್ಳುವುದು ಅವನಿಗೆ ಇಷ್ಟವಿರಲಿಲ್ಲ ಮತ್ತು ಎಂದಿನಂತೆ ಹಿಂದಿನ ಸಾಲಿನಲ್ಲಿ ಕುಳಿತುಕೊಳ್ಳಲು ಹೇಳಿದ. ಇದು ನಾವೆಲ್ಲರೂ ಕೇಳಬೇಕಾದ ಪ್ರಶ್ನೆ: ಬದಿಗೊತ್ತಲ್ಪಟ್ಟ ಸಮುದಾಯದ ಮಕ್ಕಳು ಏಕೆ ಯಾವಾಗಲೂ ತರಗತಿಯ ಮೂಲೆಯೊಂದರಲ್ಲೇ ಕುಳಿತು–ಕೊಂಡಿರುತ್ತಾರೆ? ರಾಣಿ ಇಂಥ ಪ್ರತಿಕ್ರಿಯೆಯನ್ನು ನಿರೀಕ್ಷಿಸಿರಲಿಲ್ಲ–ವೇನೋ. ಆಕೆ ತನ್ನ ಸ್ಥಾನವನ್ನು ಬದಲಿಸಿದ್ದು ಏಕೆ ಎನ್ನುವುದು ಆಗ ನನಗೆ ಗೊತ್ತಿರಲಿಲ್ಲ. ನಾನು ಸುಮ್ಮನಿದ್ದು, ಗಮನಿಸಲಾರಂಭಿಸಿದೆ: ಮುಂದೇನು ಆಗಲಿದೆ ಎನ್ನುವುದನ್ನು ತಿಳಿದುಕೊಳ್ಳಬೇಕಿತ್ತು. ಆ ಹುಡುಗನ ಮಾತು ವಿನಂತಿ ಆಗಿರಲಿಲ್ಲ: ಬೆದರಿಕೆಯಾಗಿತ್ತು. ಆಕೆ ಪ್ರತಿಭಟಿಸಲಿಲ್ಲ. ಎದ್ದು ಹೊರಡಲು ನಿಂತಳು. ಮಧ್ಯಪ್ರವೇಶಿಸಿದ ನಾನು, ನೀನು ಅಲ್ಲಿಂದ ಏಳಬೇಡ ಎಂದೆ. ಬಾಲಕ ನನ್ನ ಮಾತಿಗೂ ಪ್ರತಿಭಟಿಸಿದನು. ಆದರೆ ಆಕೆ ಅಲ್ಲಿ ಏಕೆ ಕೂರಬಾರದು ಎನ್ನುವ ನನ್ನ ಪ್ರಶ್ನೆಗೆ ಅವನಲ್ಲಿ ಉತ್ತರ ಇರಲಿಲ್ಲ.

ಆನಂತರ ಬಂದಿದ್ದು ಕೆಟ್ಟ ವರ್ತನೆ. ರಾಣಿಯ ಪಕ್ಕದಲ್ಲಿ ಕುಳಿತುಕೊಳ್ಳಲೇಬಾರದು ಎಂದು ನಿರ್ಧರಿಸಿದ್ದ ಆತ, ಪ್ರತಿದಿನ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದವನಿಗೆ ಸ್ಥಳ ಬದಲಾವಣೆ ಮಾಡಿಕೊಳ್ಳಲು ಕೋರಿದ.

ರಾಣಿ ತೀರ ದುರ್ಬಲ ಹಿನ್ನೆಲೆಯಿಂದ ಬಂದವಳಾಗಿದ್ದು, ಹಲವು ಮಕ್ಕಳಿದ್ದ, ಛಿದ್ರಗೊಂಡ ಮನೆಯುಳ್ಳ ಕುಟುಂಬದ ಕೊನೆಯ ಮಗಳಾಗಿದ್ದಳು. ಕಳೆದ ವರ್ಷ ಒಂದನೇ ತರಗತಿಗೆ ಸೇರ್ಪಡೆಗೊಂಡಿದ್ದರೂ, ವರ್ಷವಿಡೀ ಶಾಲೆಗೆ ಬಂದಿದ್ದು ಕೇವಲ 6–7 ದಿನಗಳು ಮಾತ್ರ ಎಂದು ಆಕೆಯ ಶಿಕ್ಷಕರು ಹೇಳಿದರು. ಶಿಕ್ಷಣ ಪಡೆಯಲೇಬೇಕು ಎಂದು ಆಕೆಯ ಸೋದರಿ ಹಠ ಹಿಡಿದಿದ್ದರಿಂದ, ರಾಣಿ ಶಾಲೆಗೆ ಬರುತ್ತಿದ್ದಳು. ಹಿರಿಯ ಸೋದರಿ ಎಲ್ಲಾ ಮಕ್ಕಳ ಜವಾಬ್ದಾರಿ ಹೊತ್ತುಕೊಂಡಿದ್ದು, ಏಳನೇ ತರಗತಿಯಲ್ಲಿಯೇ ಶಾಲೆ ತೊರೆದಿದ್ದಳು.

ಎನ್‌ಇಪಿ 2020 ಹೇಳುವಂತೆ,, '2016–17ರ ಯು–ಡೈಸ್ (U-DISE 2016-17) ಅಂಕಿ–ಅಂಶದ ಪ್ರಕಾರ, ಪ್ರಾಥಮಿಕ ಹಂತದಲ್ಲಿ ಶೇ.19.6ರಷ್ಟು ಪರಿಶಿಷ್ಟ ಜಾತಿಗೆ ಸೇರಿದ ಮಕ್ಕಳು ಇದ್ದು, ಉನ್ನತ ಪ್ರಾಥಮಿಕ ಶಾಲೆ ಹಂತದಲ್ಲಿ ಇದು ಶೇ.17.3ಕ್ಕೆ ಕುಸಿಯುತ್ತದೆ. ಶಾಲೆ ತೊರೆಯುವ ಪರಿಶಿಷ್ಟ ವರ್ಗದ ಮಕ್ಕಳ ಪ್ರಮಾಣ ಶೇ.10.6ರಿಂದ ಶೇ.6.8 ಹಾಗು ವಿಶೇಷ ಸಾಮರ್ಥ್ಯದ ಮಕ್ಕಳಲ್ಲಿ ಶೇ.1.1ರಿಂದ ಶೇ.0.25ಕ್ಕೆ ಕುಸಿಯುತ್ತದೆ. ಈ ವರ್ಗದಲ್ಲಿ ಶಾಲೆ ತೊರೆಯುವ ಹೆಣ್ಣುಮಕ್ಕಳ ಪ್ರಮಾಣ ಇನ್ನಷ್ಟು ಹೆಚ್ಚು ಇದೆ. ಉನ್ನತ ಶಿಕ್ಷಣಕ್ಕೆ ದಾಖಲಾಗುವವರ ಪ್ರಮಾಣ ತೀರ ಕಡಿಮೆ' (ಸಚಿವಾಲಯ, 2020).

ಭಾರತದ ಇನ್ನಿತರ ಶಾಲೆಗಳಂತೆ ಈ ಶಾಲೆಯಲ್ಲಿನ ವಿದ್ಯಾರ್ಥಿಗಳು ಕೂಡ ನಾನಾ ಸಾಮಾಜಿಕ ಹಾಗು ಕೌಟುಂಬಿಕ ಹಿನ್ನೆಲೆಯಿಂದ ಬಂದವರು. ಅವರು ವಿಷಯವನ್ನು ಗ್ರಹಿಸುವ ರೀತಿ, ಕಲಿಕೆ, ಮನೆಕೆಲಸ, ತರಗತಿಯಲ್ಲಿ ನಿದ್ದೆ ಮಾಡುವುದು, ಅವರ ಉಡುಗೆತೊಡುಗೆ, ಮಾತುಕತೆ ಇತ್ಯಾದಿ ಅವರ ಬದುಕಿನ ಪರಿಸ್ಥಿತಿ ಹಾಗು ಅವರು ಹೇಗೆ ಬದುಕಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೋ, ಅದನ್ನು ಆಧರಿಸಿರುತ್ತದೆ. ಸಣ್ಣ ವಯಸ್ಸಿನ ಹೆಣ್ಣು ಮಗು, ಪ್ರತಿದಿನ ಶಾಲೆಗೆ ಬರುವುದು ಹೊರತುಪಡಿಸಿ ಬೇರೇನು ಮಾಡಲು ಸಾಧ್ಯವಿದೆ? ತರಗತಿಯಲ್ಲಿರುವ ಇತರರಿಗೆ ಹೋಲಿಸಿದರೆ, ಆಕೆ ಓದಿನಲ್ಲಿ ಬಹಳ ಹಿಂದುಳಿದಿದ್ದರೆ, ಅದನ್ನು ನಾವು ಗಂಭೀರವಾಗಿ ಪರಿಗಣಿಸಬೇಕೆಂದಿಲ್ಲ. ಏಕೆಂದರೆ, ಶಿಕ್ಷಕರೊಬ್ಬರು ಹೇಳಿದಂತೆ, 'ಅವಳು ಶಾಲೆಗೆ ಬರುತ್ತಿದ್ದಾಳಲ್ಲ, ಅದೇ ದೊಡ್ಡದು'.

ಈ ಹೊರಗಿಡುವಿಕೆಗೆ ಬೇರೆಬೇರೆ ಕಾರಣಗಳಿರಬಹುದು. ಆಕೆ ಬಹುತೇಕ ಗೈರುಹಾಜರಾಗಿದ್ದ ಹಿಂದಿನ ವರ್ಷದ ಅಂತ್ಯದಲ್ಲಿ ಆಕೆಯ ತರಗತಿಯ ಹೆಚ್ಚಿನ ವಿದ್ಯಾರ್ಥಿಗಳು ಪರಸ್ಪರ ನಿಕಟವಾಗಿದ್ದರು. ಅವರ ಮನೆಗಳು ಅಕ್ಕಪಕ್ಕದಲ್ಲೇ ಇದ್ದವು ಹಾಗು ಶಾಲೆ ಮುಗಿದ ಬಳಿಕವೂ ಅವರು ಪರಸ್ಪರ ಭೇಟಿಯಾಗುತ್ತಿದ್ದರು. ನಾನಾ ಹಬ್ಬಗಳನ್ನು ಒಟ್ಟಿಗೆ ಆಚರಿಸುತ್ತಿದ್ದರು. ಆದರೆ, ರಾಣಿಯ ಪ್ರಕರಣ ಭಿನ್ನವಾಗಿತ್ತು. ಆಕೆ ಗ್ರಾಮದ ಇನ್ನೊಂದು ಭಾಗದಿಂದ ಬರುತ್ತಿದ್ದಳು. ಆಕೆಯನ್ನು ಹೊರತುಪಡಿಸಿ ಅದೇ ಸಮುದಾಯದ ಇಬ್ಬರು ಬಾಲಕರು ಬಿಟ್ಟರೆ, ಬೇರೆ ಯಾರೂ ಆ ಪ್ರದೇಶದಿಂದ ಬರುತ್ತಿರಲಿಲ್ಲ. ಇದನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು ಎನ್ನುವುದನ್ನು ನಿಮಗೇ ಬಿಡುತ್ತೇನೆ: ಜಗತ್ತಿನ ಅತ್ಯಂತ ರಾಚನಿಕ ಹಾಗುಅಧಿಕಾರ ಸಂಬಂಧಿತವಾದ ಅಸಮಾನತೆ, ಆದರೆ, ಆಳವಾಗಿ ಬೇರೂರಿರುವ ಆಚರಣೆಯಾದ ಜಾತಿಯನ್ನು ಅರ್ಥೈಸುವುದು ಹೇಗೆ?

ಆನಂತರ, ನವೆಂಬರ್ 14ರ ಮಕ್ಕಳ ದಿನಾಚರಣೆಯಂದು, ಈ ಘಟನೆ ಸಂಭವಿಸಿತು:

ಅಂದು ಸಂಪೂರ್ಣ ತಮಾಷೆಯ ಹಾಗು ಸಂತಸಕರ ದಿನವಾಗಿತ್ತು. ಬಾಲಕರನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿ, ಕಬಡ್ಡಿ ಆಡಿಸಲಾಯಿತು. ಶಿಕ್ಷಕರು ಹೇಳಿದರು, 'ಹೆಣ್ಣು ಮಕ್ಕಳಿಗೆ ಕರವಸ್ತ್ರ ಎತ್ತಿಕೊಳ್ಳುವ ಆಟ ಆಡಿಸಲಾಗುತ್ತದೆ'. ಬಾಲಕಿಯರನ್ನು ನಾಲ್ಕು ಗುಂಪುಗಳಾಗಿ ವಿಭಾಗಿಸಲಾಯಿತು. ಆ ಆಟ ಆಡುವುದು ಹೀಗೆ: ಕರವಸ್ತ್ರವನ್ನು ಮಧ್ಯದಲ್ಲಿರಿಸಿ, ತಂಡದ ಪ್ರತಿಯೊಬ್ಬರಿಗೂ ಒಂದೊಂದು ಸಂಖ್ಯೆಯನ್ನು ನೀಡಲಾಗುತ್ತದೆ. ಬೇರೆ ತಂಡದ ಸದಸ್ಯರಿಗೂ ಇದೇ ರೀತಿ ಸಂಖ್ಯೆಯೊಂದನ್ನು ಕೊಡಲಾಗುತ್ತದೆ. ಆಟ ಆಡಿಸುವಾತ ಯಾವುದೇ ಸಂಖ್ಯೆಯೊಂದನ್ನು ಹೇಳಿದಾಗ, ಎರಡೂ ತಂಡದಲ್ಲಿರುವ ಆ ಸಂಖ್ಯೆಯನ್ನು ಹೊಂದಿರುವ ಬಾಲಕಿಯರು ಓಡಿ ಹೋಗಿ ಕರವಸ್ತ್ರ ಎತ್ತಿಕೊಳ್ಳಬೇಕು. ಹಾಗೆ ಎತ್ತಿಕೊಳ್ಳುವ ಸದಸ್ಯೆಯ ತಂಡಕ್ಕೆ ಒಂದು ಅಂಕ ದೊರೆಯುತ್ತದೆ.

ರಾಣಿ ಆಟಕ್ಕೆ ಸೇರುವ ಆಸಕ್ತಿ ತೋರಿಸಲಿಲ್ಲ. ಆಕೆಯನ್ನು ನಾವು ಒತ್ತಾಯಿಸಿ ಸೇರಿಸಿದೆವು. ಆಟ ಮುಂದುವರಿದು, ಒಂದು ತಂಡ ಗೆಲುವು ಸಾಧಿಸಿತು. ಆನಂತರ ಶಿಕ್ಷಕಿಯೊಬ್ಬರು ಧ್ವನಿವರ್ಧಕದ ಮೂಲಕ ಹಾಡೊಂದನ್ನು ಕೇಳಿಸಿದರು. ಅದು ಛತ್ತೀಸ್‌ಗಢದ ಜನಪ್ರಿಯ ಹಾಡು. ಹಾಡಿಗೆ ಬಾಲಕಿಯರು ಜೋಡಿಯಲ್ಲಿ ನರ್ತಿಸಬೇಕಿತ್ತು. ಹಾಡಿಗೆ ಅನುಗುಣವಾಗಿ ನರ್ತಿಸುವುದು ರಾಣಿಗೆ ಕಷ್ಟವಾಗುತ್ತಿತ್ತು. ಸಹಪಾಠಿ ಲಾಲಿ, ರಾಣಿಯ ಕೈಹಿಡಿದುಕೊಂಡು ಹಾಡಿಗೆ ನರ್ತಿಸಲಾರಂಭಿಸಿದ್ದನ್ನು ನಾನು ನೋಡಿದೆ. ಆಗ ರಾಣಿಯ ಮುಖ ವಿಶಿಷ್ಟವಾಗಿ ಬೆಳಗಿದ್ದನ್ನು ನಾನು ಕಂಡೆ. ಅದೊಂದು ಸುಂದರ ಕ್ಷಣವಾಗಿತ್ತು. ಅದು ನನ್ನ ಬದುಕಿನ ಅತ್ಯಂತ ಉತ್ತಮ ಮಕ್ಕಳ ದಿನಾಚರಣೆಯಾಗಿತ್ತು.

ದಿನ ಕಳೆದಂತೆ ತರಗತಿಯಲ್ಲಿ ಮಕ್ಕಳು ಹೆಚ್ಚು ಕ್ರಿಯಾಶೀಲರಾಗುತ್ತಿದ್ದುದನ್ನು ನಾನು ಗಮನಿಸಿದೆ. ಜೊತೆಗೆ, ವಿದ್ಯಾರ್ಥಿಗಳ ಬಗ್ಗೆ ಶಿಕ್ಷಕರ ಕಾಳಜಿ ಹಾಗು ಔದಾರ್ಯ ಕೂಡ ಹೆಚ್ಚಿದ್ದನ್ನೂ ಕಂಡೆ. ಪ್ರತಿಯೊಂದು ಮಗುವಿನ ಬಗ್ಗೆ, ಆತ/ಕೆಯ ಕಲಿಕಾಮಟ್ಟ, ಅವರ ಹಿನ್ನೆಲೆಯು ಕಲಿಕೆ ಮೇಲೆ ಹೇಗೆ ಪರಿಣಾಮ ಬೀರುತ್ತಿದೆ ಹಾಗುನಾವು ಏನು ಸಹಾಯ ಮಾಡಬೇಕು ಎನ್ನುವ ಬಗ್ಗೆ ಶಿಕ್ಷಕರು ಸುದೀರ್ಘ ಚರ್ಚೆ ಮಾಡಲಾರಂಭಿಸಿದರು. ನಾನು ತರಗತಿಯ ಸಮ್ಮಿಶ್ರ ಗುಂಪನ್ನು ನೆನಪಿನಲ್ಲಿ ಇಟ್ಟುಕೊಂಡು, ಪ್ರತಿಯೊಂದು ಪಾಠವನ್ನೂ ಹೆಚ್ಚು ಸಮಗ್ರವಾಗಿರುವಂತೆ, ಒಳಗೊಳ್ಳುವಂತೆ ಹಾಗು ಕಲಿಕೆಯು ಖುಷಿಯಾಗಿರುವಂತೆ ಯೋಜಿಸುತ್ತಿದ್ದೆ. ಒಂದು ವಾರ ಕಾಲ ವಿದ್ಯಾರ್ಥಿಗಳ ಹೆಸರಿನಲ್ಲಿ ನಾನಾ ಚಟುವಟಿಕೆಗಳನ್ನು ನಡೆಸಿದೆವು. ಸಂಪೂರ್ಣ ತಮಾಷೆಮಯವಾಗಿತ್ತು. ಕೊನೆಯ ದಿನ ಒಗಟಿನ ಆಟವನ್ನು ಯೋಜಿಸಿದೆವು. ಕೊಠಡಿಯ ಒಂದು ಬದಿಯಲ್ಲಿ ಒಗಟನ್ನು ಹಾಗು ಇನ್ನೊಂದು ಬದಿಯಲ್ಲಿ ಅಕ್ಷರಗಳ ಕಾರ್ಡ್‌ಗಳನ್ನು ಇರಿಸಿದೆವು.

ಶಿಕ್ಷಕರು ಸೀಟಿ ಊದಿದರು.. 1....2....3....

ಅಯಾನ್, ಮನು, ವಾಸು, ನಿಮ್ಮಿ, ಹೇಮಾ ಹಾಗು ಕ್ರಿಷ್ ಓಡಿಹೋಗಿ, ಕಾರ್ಡ್ ಎತ್ತಿಕೊಂಡು ಹಿಂದಿರುಗಿ, ಅದನ್ನು ಒಗಟಿನ ಮೇಲೆ ಇರಿಸಿದರು. ಆದರೆ, ಮನುಗೆ ಬೇಕಿದ್ದ ಅಕ್ಷರದ ಕಾರ್ಡ್ ಸಿಗಲಿಲ್ಲ, ಆತ ಹುಡುಕುತ್ತಲೇ ಇದ್ದ. ಅದೇ ಹೊತ್ತಿನಲ್ಲಿ ಆತನ ಸ್ನೇಹಿತರು ಅತ್ತಿಂದಿತ್ತ ಓಡಾಡುತ್ತಿದ್ದರು. ಒಗಟು ಪೂರ್ಣಗೊಳಿಸಿದ ಕ್ರಿಷ್ ಕೂಗಿಕೊಂಡ, 'ನಾನು ಗೆದ್ದೆ, ನಾನು ಗೆದ್ದೆ'.

ಉಳಿದವರೂ ಇದನ್ನೇ ಮಾಡಿದರು. ಆನಂತರ, ಮೂಲೆಯಲ್ಲಿ ಬೇಸರದಿಂದ ಕುಳಿತಿದ್ದ ಮನು ಅವರ ಕಣ್ಣಿಗೆ ಬಿದ್ದನು. ಕ್ರಿಷ್ ಹಾಗು ವಾಸು, ಮನುವಿನ ಒಗಟಿನ ಅಕ್ಷರಗಳನ್ನು ಹುಡುಕಿ, ಪೂರ್ಣಗೊಳಿಸಿದರು. ಬಳಿಕ ಕೂಗಿದರು, 'ಮನು ಗೆದ್ದ, ಮನು ಗೆದ್ದ'.

ನಾನು ಹಳೆಯ ಆಲೋಚನೆಗಳನ್ನು ತ್ಯಜಿಸುತ್ತ ಮತ್ತು ನಿರಚನಗೊಳಿಸುತ್ತ, ಮಕ್ಕಳಿಂದ ಪ್ರತಿದಿನವೂ ಹೆಚ್ಚುಹೆಚ್ಚು ಕಲಿಯುತ್ತಿದ್ದೆ. ಒಳಗೊಳ್ಳುವಿಕೆಯು, ಅದರಲ್ಲೂ ವಿಶೇಷವಾಗಿ ಮಕ್ಕಳ ವಿಷಯದಲ್ಲಿ, ಪರಸ್ಪರ ತೊಡಗಿಸಿಕೊಳ್ಳುವುದರಿಂದ ಆರಂಭವಾಗುತ್ತದೆ ಎಂದು ಅವರು ನನಗೆ ಕಲಿಸಿದರು. ಒಳಗೊಳ್ಳುವಿಕೆಯು ಒಟ್ಟಾಗಿರುವುದು ಹಾಗು ಪರಸ್ಪರ ಒಬ್ಬರಿಗೊಬ್ಬರು ನೆರವಾಗುವುದರ ತೆಳುಪದರವಾಗಿದೆ.

---




**ಸುಹೈಲ್ ಅಬ್ದುಲ್ ಹಮೀದ್**, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಛತ್ತೀಸ್‌ಗಢದ ಧಮ್‌ತರಿ ಜಿಲ್ಲೆಯ ನಾಗ್ರಿ ವಿಭಾಗದ ಸಹಾಯಕ ಸಂಪನ್ಮೂಲ ವ್ಯಕ್ತಿ. ಜಮಿಯಾ ಮಿಲಿಯಾ ಇಸ್ಲಾಮಿಯಾದಿಂದ ಪದವಿ ಹಾಗು ಪಾಂಡಿಚೆರಿ ವಿಶ್ವವಿದ್ಯಾಲಯದಿಂದ ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಕೊಚ್ಚಿ–ಮುಜ್ರೀಸ್–ಬೈಯೆನಾಯಲ್‌ನಲ್ಲಿ ಚಿಲ್ಡ್ರನ್ಸ್ ಆರ್ಟ್ ರೂಂ ಪ್ರಾಜೆಕ್ಟ್‌ನಲ್ಲಿ ಸ್ವಯಂಸೇವಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಇಮೇಲ್: suhail.hameed@azimpremjifoundation.org



ಅನುವಾದ: **ಮಾಧವ ಐತಾಳ** । ಪರಿಶೀಲನೆ: **ಲತಾ ಕೆ.ಸಿ.**


**ಲಿಂಗ ಅಸ್ಮಿತೆಯ ಅರಿವು ಎಳವೆಯಲ್ಲೇ ಪ್ರಾರಂಭವಾಗುತ್ತದೆ. ಹೀಗಾಗಿ, ನಾವು ಲಿಂಗ ಎನ್ನುವುದು ಯುಗ್ಮವಲ್ಲ; ಬದಲಾಗಿ, ಒಂದು ವರ್ಣಪಟಲ ಎಂಬುದನ್ನು ತಿಳಿದುಕೊಳ್ಳಬೇಕು. ನಿಮ್ಮ ತರಗತಿಗಳಲ್ಲಿ ಮಕ್ಕಳಿಂದ ನಿಗದಿತ ಲಿಂಗಸಂಬಂಧಿತ ಪಾತ್ರ ಹಾಗು ವರ್ತನೆಗಳನ್ನು ನಿರೀಕ್ಷಿಸಬೇಡಿ. ಬದಲಾಗಿ, ಕತೆಗಳಲ್ಲಿ ಲಿಂಗ ಪಾತ್ರಗಳಿಗೆ ಸವಾಲೆಸೆಯಿರಿ ಮತ್ತು ವಿದ್ಯಾರ್ಥಿಗಳು ತಮ್ಮದೇ ಊಹೆಗಳನ್ನು ಹಾಗು ಆಲೋಚನೆಗಳನ್ನು ಪರಿಶೀಲಿಸಲು, ಅವರಿಗೆ ನೆರವಾಗಿ.**

**–ಪ್ರಿಯಾ ಕೃಷ್ಣಮೂರ್ತಿ, ಕ್ರಿಯೇಟಿಂಗ್ ಜೂನಿಯರ್ ಸಿಟಿಜನ್ಸ್–ಫೈವ್ ಕಾಮನ್ ಪಾಥ್‌ವೇಸ್, ಪು. 82.**

# ನಾಟಕದ ಮೂಲಕ ಗಾಂಧೀಜಿ ಮೌಲ್ಯಗಳ ಶೋಧ

ಉಷಾ ಪ್ರೆಸಿಲ್ಲಾ ಅಂಬ್ರೋಸ್

ಗಾಂಧೀಜಿಯವರ 150ನೇ ಜನ್ಮದಿನಾಚರಣೆ ಸಂದರ್ಭದಲ್ಲಿ ಶಾಲಾ ಮಕ್ಕಳು ಮತ್ತು ಶಿಕ್ಷಕರನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳುವ ನಿಟ್ಟಿನಲ್ಲಿ, ಗಾಂಧೀಜಿಯ ಬದುಕು, ಚಿಂತನೆಗಳು ಮತ್ತು ಅವರು ಬಲವಾಗಿ ನಂಬಿದ್ದ ಮೌಲ್ಯಗಳ ಕುರಿತಾದ ಅನುಭವಗಳನ್ನು ಕಟ್ಟಿಕೊಡಲು ನಾವು ಯೋಜಿಸಿದೆವು. ಇದನ್ನು ಒಂದಷ್ಟು ಪ್ರೇಕ್ಷಕರ ಮುಂದೆ ವೇದಿಕೆಯಲ್ಲಿ ಪ್ರದರ್ಶಿಸಲು ನಾವು ತೀರ್ಮಾನಿಸಿದೆವು. ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಕ್ಷೇತ್ರ ಸದಸ್ಯರ ಜೊತೆಗೆ ಕೊಪ್ಪಳದ ಟೀಚರ್ಸ್ ಥಿಯೇಟರ್ ಗ್ರೂಪ್ ಮತ್ತು ನಂದೀಶ್ ಕುಮಾರ್ ಈ ಕಾರ್ಯಕ್ರಮವನ್ನು ಸಂಯೋಜಿಸಿದರು. ಮೊದಲಿಗೆ ನಾವು ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಗಾಂಧೀಜಿಯವರ ಬದುಕಿನ ಬಗ್ಗೆ ಕಲಿಯಲು ಆಸಕ್ತಿ ಹುಟ್ಟುವಂತೆ ಮಾಡಲು ಒಂದು ದಿನದ ಕಾರ್ಯಾಗಾರವನ್ನು ಹಮ್ಮಿಕೊಂಡೆವು. ನಾಲ್ಕು ಕಿರು ನಾಟಕಗಳಲ್ಲಿ ನಟಿಸಲು ಮಕ್ಕಳನ್ನು ಆಯ್ಕೆ ಮಾಡುವುದು ಮುಖ್ಯವಾಗಿತ್ತು. ಎಲ್ಲಾ ಮಾಧ್ಯಮಿಕ ಶಾಲೆಯ ಮಕ್ಕಳನ್ನು ಒಂದು ಕಡೆ ಸಮಾವೇಶಗೊಳಿಸಿ, ಎಲ್ಲರೂ ಪಾಲ್ಗೊಳ್ಳಲು ಅನುಕೂಲ-ವಾಗುವಂತೆ ಕೆಲವು ತಮಾಷೆಯ ಸರಳ ಆಟಗಳನ್ನು ನಡೆಸಿದೆವು. ನಂತರ ಮಕ್ಕಳ ಅಭಿಪ್ರಾಯಗಳನ್ನೂ ಸಂಗ್ರಹಿಸಿ ನಾಟಕದ ಗುಂಪುಗಳನ್ನು ರಚಿಸಲಾಯಿತು.

ಮಕ್ಕಳು ತಮ್ಮ ತರಗತಿಗಳನ್ನಾದರೂ ತಪ್ಪಿಸಿಕೊಳ್ಳುತ್ತಿದ್ದರು, ಆದರೆ ನಾಟಕದ ಅಭ್ಯಾಸವರ್ಗಗಳಿಗೆ ಮಾತ್ರ ತಪ್ಪದೆ ಹಾಜರಾಗುತ್ತಿದ್ದರು. ಗಾಂಧೀಜಿಯ ಪಾತ್ರವನ್ನು ತಮ್ಮದಾಗಿಸಿಕೊಳ್ಳಲು ಅವರು ಪರಸ್ಪರ ಸ್ಪರ್ಧೆಯಲ್ಲಿ ತೊಡಗಿದ್ದರು. ತಮ್ಮ ತಲೆಗೂದಲನ್ನು ಬೋಳಿಸಿಕೊಳ್ಳಲೂ ಅವರು ಸಿದ್ಧರಿದ್ದರು! ಬೆಳಗ್ಗೆ ಶಾಲೆಯ ಗಂಟೆ ಬಾರಿಸುವುದಕ್ಕೂ ಮುನ್ನವೇ ಟೀಚರ್ಸ್ ಲರ್ನಿಂಗ್ ಸೆಂಟರ್‌ನಲ್ಲಿ (ಟಿ.ಎಲ್.ಸಿ) ಎಲ್ಲರೂ ಸೇರಿ ನಾಟಕದ ಅಭ್ಯಾಸ ಆರಂಭಿಸುತ್ತಿದ್ದರು. ಅಲ್ಲದೆ, ಸಂಜೆ ಶಾಲೆ ಬಿಟ್ಟ ಬಳಿಕ, ಕತ್ತಲು ಆವರಿಸುತ್ತಿದ್ದರೂ ಕೇಂದ್ರದಿಂದ ಹೊರಡಲು ಅವರಿಗೆ ಮನಸ್ಸೇ ಇರುತ್ತಿರಲಿಲ್ಲ. ನಾಟಕ ಅಭ್ಯಾಸದ ಮೂಲಕ ಗಾಂಧೀಜಿಯವರನ್ನು ಅರ್ಥ ಮಾಡಿ-ಕೊಳ್ಳುತ್ತಾ ಮೋಜಿನೊಂದಿಗೆ ಜೊತೆಗೆ ಕಲಿಯಲು ಈ ನಮ್ಮ 'ಗಾಂಧಿ ನಾಟಕೋತ್ಸವ'ವು ಎಲ್ಲಾ ಮಕ್ಕಳಿಗೂ ಒಳ್ಳೆಯ ಅವಕಾಶವನ್ನು ಒದಗಿಸಿತು ಎಂದು ನಮಗೂ, ಶಿಕ್ಷಕರಿಗೂ ಮನವರಿಕೆಯಾಯಿತು. ನಾವು ಅವರೊಂದಿಗೆ ಬೆರೆತು ಆತ್ಮೀಯತೆಯಿಂದ ಮಾತನಾಡುತ್ತಾ ಹೋದಂತೆ ಅವರು ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ಹಂಚಿಕೊಳ್ಳತೊಡಗಿದರು. ಮಕ್ಕಳಿಗೆ ಮಹತ್ವದ ವಿಷಯವನ್ನು ಆಸಕ್ತಿಯಿಂದ ಮತ್ತು ಮೋಜಿನೊಂದಿಗೆ ಕಲಿಸಿ ಮಕ್ಕಳ ಮನಸ್ಸಿನಲ್ಲಿ ಅಚ್ಚೊತ್ತುವಂತೆ ಮಾಡಲು ರಂಗಭೂಮಿಯು ಅದ್ಭುತ ಮತ್ತು ಸರಳವಾದ ಮಾಧ್ಯಮ ಎಂಬ ಅಂಶ ಈ ಮೂಲಕ ಸ್ಪಷ್ಟವಾಯಿತು. ಹೀಗೆ, ಈ ಕಲಿಕೆಯ ಪ್ರಕ್ರಿಯೆಯಲ್ಲಿ ಮಕ್ಕಳು ಮಾತ್ರ ಕಲಿಯದೆ, ನಾವೂ ಹೊಸ ಸಂಗತಿಗಳನ್ನು ಅವರಿಂದ ಕಲಿತೆವು.

ನಾವು ನಾಟಕದ ತಿರುಳು ಮತ್ತು ಚೌಕಟ್ಟಿನ ಬಗ್ಗೆ ಮಕ್ಕಳೊಂದಿಗೆ ಚರ್ಚಿಸಿದೆವು. ಅವರು ಗಾಂಧೀಜಿಯ ಬಗ್ಗೆ ತಮಗೆ ತಿಳಿದ ವಿಷಯಗಳನ್ನು ಹಂಚಿಕೊಂಡರು. ಇಂದಿನ ಜಗತ್ತಿಗೆ ಗಾಂಧೀಜಿಯ ಪ್ರಸ್ತುತತೆಯ ಬಗ್ಗೆ ಹೇಳಿದಾಗ ಮಕ್ಕಳು ಮಂತ್ರಮುಗ್ಧರಾದರು. ದಕ್ಷಿಣ ಆಫ್ರಿಕಾದಲ್ಲಿ ಕ್ಷೌರಿಕನೊಬ್ಬ ಗಾಂಧೀಜಿಯ ವರನ್ನು ಗದರಿಸಿದ್ದನಲ್ಲದೆ, 'ಕಪ್ಪು ವರ್ಣೀಯ'ನ ಕೂದಲು ಕತ್ತರಿಸಲು ನಿರಾಕರಿಸಿದ್ದನೆಂಬ ವಿಚಾರ ತಿಳಿದು ಮಕ್ಕಳು ಆಶ್ಚರ್ಯ-ಚಕಿತರಾದರು. ಈ ಸಂಗತಿಗಳನ್ನೆಲ್ಲ ಕೇಳಿಸಿಕೊಂಡ ವಿದ್ಯಾರ್ಥಿಗಳು ನಾಟಕದ ಸಂಭಾಷಣೆಗಳನ್ನು ದೈನಂದಿನ ಬದುಕಿನ ಸಾದಾ ಭಾಷೆಯಲ್ಲಿ ಹೇಳತೊಡಗಿದರು.

ಗಾಂಧೀಜಿ ಸ್ವತಃ ಬ್ಯಾರಿಸ್ಟರ್ ಆಗಿದ್ದರೂ ಚರಕದಲ್ಲಿ ನೂಲು ತೆಗೆದು ಬಟ್ಟೆ ತಯಾರಿಸುತ್ತಿದ್ದರು, ಸರಳ ಆಹಾರ ಸೇವಿಸುತ್ತಿದ್ದರು, ಕೇವಲ ಎರಡು ತುಂಡು ಬಟ್ಟೆ ಧರಿಸುತ್ತಿದ್ದರು, ತಮ್ಮ ಎಲ್ಲಾ ಕೆಲಸಗಳನ್ನು ತಾವೇ ಮಾಡುತ್ತಿದ್ದರು ಎಂಬ ಬಗ್ಗೆ ಚರ್ಚಿಸಿದೆವು. ಅವರು ಸದಾ ಸ್ವದೇಶಿ ಉತ್ಪನ್ನಗಳನ್ನೇ ಬಳಸುತ್ತಿದ್ದರು ಹಾಗು ಅವರಲ್ಲಿ ಕೆಲವೇ ಕೆಲವು ಸ್ವತ್ತುಗಳಿದ್ದವು. ಎಲ್ಲರನ್ನೂ ಪ್ರೀತಿಸು, ಇತರರ ಬಗ್ಗೆ ಕಾಳಜಿ ತೋರಿಸು, ಕ್ಷಮಿಸು ಮತ್ತು ಯಾರನ್ನೂ ನೋಯಿಸಬೇಡ ಎಂಬುದು ಅವರ ಸಂದೇಶವಾಗಿತ್ತು. ತಮ್ಮ ಕಿರು ನಾಟಕದ ಮೂಲಕ ಮಕ್ಕಳು ಪರಿಸರದ ಕುರಿತ ಗಾಂಧೀಜಿಯವರ ಕಾಳಜಿ ಮತ್ತು ಸ್ವಚ್ಛತೆ ಮುಂತಾದ ಅನೇಕ ಅಭ್ಯಾಸಗಳನ್ನು ಅಭಿನಯಿಸಿ ತೋರಿಸಿದರು.

**ಮಕ್ಕಳ ಮೇಲೆ ಪರಿಣಾಮ**

ಗಬ್ಬೂರ್‌ನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ (ಜಿಹೆಚ್‌ಪಿಎಸ್) ಮಲಯಾ ಎಂಬ ಪುಟ್ಟ ಬಾಲಕ, ಈ ಕಿರುನಾಟಕದಲ್ಲಿ ಅಭಿನಯಿಸಿದ್ದ. ಅದುವರೆಗೂ ತನ್ನ ವಿಜ್ಞಾನದ ಚಟುವಟಿಕೆ ಬಗ್ಗೆ ಅವನು ನಿರಾಸಕ್ತಿ ಹೊಂದಿದ್ದ. ಆದರೆ ನಾಟಕದಲ್ಲಿ ಪಾತ್ರ ವಹಿಸಿದ ಮೇಲೆ ಬಾಲಕನ ಆತ್ಮಗೌರವ ಹೆಚ್ಚಿದ್ದು, ತನ್ನ ಶಾಲಾ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸಿ ತನ್ನ ಶಿಕ್ಷಕರಿಗೆ ತೋರಿಸತೊಡಗಿದ್ದ. ಅಷ್ಟೇ ಅಲ್ಲ, ಪ್ರತಿದಿನದ ಶಾಲಾ ಕೆಲಸಗಳ (ಅಸೈನ್ಮೆಂಟ್) ಬಗ್ಗೆ ಹೆಚ್ಚು ಗಮನ ಕೊಟ್ಟು ಅವುಗಳನ್ನು ಮುಗಿಸಲು ಪ್ರಯತ್ನಿಸತೊಡಗಿದ. ಜೊತೆಗೆ, ಶಾಲೆಯಲ್ಲಿ ಸದಾ ಮೌನವಾಗಿರುತ್ತಿದ್ದ ರತ್ನಾ ಕೂಡಾ, ತರಗತಿಯಲ್ಲಿ ಆತ್ಮವಿಶ್ವಾಸದಿಂದ ತನ್ನ ಅಭಿಪ್ರಾಯ ವ್ಯಕ್ತಪಡಿಸಲಾರಂಭಿಸಿದಳು. ನಾಟಕದಲ್ಲಿ ಅಭಿನಯಿಸಿದ ಪರಿಣಾಮವಾಗಿ ಸ್ವಾತಂತ್ರ್ಯ ಹೋರಾಟದ ದೃಶ್ಯಗಳಲ್ಲಿ ಅಭಿನಯಿಸಿದ ಬಳಿಕ ಮೌನಿ ಹುಡುಗ ಸುಹೈಲ್ ಸೇರಿದಂತೆ ಬಹುತೇಕ ಮಕ್ಕಳು ಆತ್ಮವಿಶ್ವಾಸದಿಂದ ತರಗತಿಯಲ್ಲಿ ಅಭಿಪ್ರಾಯ ಹಂಚಿಕೊಳ್ಳತೊಡಗಿದರು.

ಸದಾ ಕಲಿಕೆಯಲ್ಲಿ ತೊಂದರೆ ಅನುಭವಿಸುತ್ತಿದ್ದ ಫೈರುಲ್, ತರಗತಿಯಲ್ಲೂ, ಇತರ ಎಲ್ಲಾ ಚಟುವಟಿಕೆಗಳಲ್ಲೂ ಹಿಂದೆ ಉಳಿಯಲು ಬಯಸುತ್ತಿದ್ದ. ಅವನು ಸಾಕಷ್ಟು ಹಿಂಜರಿಕೆ ವ್ಯಕ್ತಪಡಿಸಿ ಕೊನೆಗೂ ನಾಟಕದಲ್ಲಿ ಪಾತ್ರ ಮಾಡಲು ಒಪ್ಪಿಕೊಂಡ. ನಂತರ, ಒಂದು ನಾಟಕದಲ್ಲಿ ಉತ್ತಮವಾಗಿ ಪಾತ್ರ ನಿರ್ವಹಣೆ ಮಾಡಿದ

ಕಾರಣ ಶಾಲೆಯ ನಾಟಕ ತಂಡದಲ್ಲಿ ಮಕ್ಕಳು ಅವನನ್ನೂ ಸಂತೋಷದಿಂದ ಸೇರಿಸಿಕೊಂಡರು.

ಸರ್ದಾರ್‌ಗಲ್ಲಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಬರುತ್ತಿದ್ದ ಸರ್ಕಾರಿ ಬಾಲಮಂದಿರದ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧೀನದ ಬಾಲಕರ ಮಂದಿರ) ಮಕ್ಕಳು ನಾಟಕದಲ್ಲಿ ಕಸ ಗುಡಿಸುವಾತನ ಪಾತ್ರ ಮಾಡುತ್ತಿದ್ದ ಮಗುವನ್ನು ಹಾಸ್ಯ ಮಾಡಿ ನಗುತ್ತಿದ್ದರು. ಇದರಿಂದಾಗಿ ಎದೆಗುಂದಿದ ಆ ಬಾಲಕ ತಾನು ಪಾತ್ರ ಮಾಡುವುದಿಲ್ಲ ಎಂದು ಹೇಳಿದ. ಆದರೆ ನಾಟಕದ ಅಭ್ಯಾಸ ಮುಂದುವರಿದಂತೆ ಆ ಬಾಲಕ ತನ್ನ ಪಾತ್ರವನ್ನು ಚೆನ್ನಾಗಿ ಅರ್ಥ ಮಾಡಿಕೊಂಡನಲ್ಲದೆ, ನಾಟಕದಲ್ಲಿ ಆ ಪಾತ್ರಕ್ಕಿರುವ ಮಹತ್ವವನ್ನೂ ತಿಳಿದುಕೊಂಡು ಚೆನ್ನಾಗಿ ಅಭಿನಯಿಸತೊಡಗಿದ.

ಸರ್ದಾರ್‌ಗಲ್ಲಿ ಸ.ಹಿ.ಪ್ರಾ. ಶಾಲೆಯ ಇಬ್ಬರು ಮಕ್ಕಳ ಮಧ್ಯೆ ಗಾಂಧೀಜಿಯ ಪಾತ್ರಕ್ಕಾಗಿ ಸ್ಪರ್ಧೆ ಇತ್ತು. 'ಗಾಂಧೀಜಿಯ ಪಾತ್ರವನ್ನು ನಿರ್ವಹಿಸಲು ಬಯಸುವವರು ತಲೆಗೂದಲನ್ನು ಬೋಳಿಸಬೇಕು ಎಂದು ನಿರ್ದೇಶಕರು ಹೇಳಿದರು,. ಇಬ್ಬರುಅದಕ್ಕೂ ಸಿದ್ಧರಿದ್ದರು! ಅದೇ ವೇಳೆ, ಅವರಲ್ಲೊಬ್ಬ ಕೆಲದಿನ ಶಾಲೆಗೆ ಗೈರುಹಾಜರಾದ. ನಾಟಕದ ದಿನ ಇಬ್ಬರೂ ತಲೆ ಬೋಳಿಸಿಕೊಂಡು ಶಾಲೆಗೆ ಬಂದರು. ಕೊನೆಗೆ, ಅವರಲ್ಲೊಬ್ಬ ಮತ್ತೊಬ್ಬನಿಗೆ ಪಾತ್ರವನ್ನು ಬಿಟ್ಟುಕೊಟ್ಟ. ಆದರೆ ನಿರ್ದೇಶಕರು ಇಬ್ಬರಿಗೂ ಬೇರೆಬೇರೆ ದೃಶ್ಯಗಳಲ್ಲಿ ಗಾಂಧೀಜಿಯ ಪಾತ್ರ ನಿರ್ವಹಿಸಲು ಅವಕಾಶ ಮಾಡಿಕೊಟ್ಟರು. ಈ ಇಬ್ಬರ ಜೊತೆಗೆ, ಕಸ ಗುಡಿಸುವವನ (ಜಾಡಮಾಲಿ) ಪಾತ್ರ ಮಾಡಿದ ಹುಡುಗನಿಗೂ ಗಾಂಧೀಜಿ ಪಾತ್ರ ಮಾಡಲು ಅವಕಾಶ ನೀಡಲಾಯಿತು. ಒಂದೇ ನಾಟಕದಲ್ಲಿ ಮೂವರು ಬಾಲಕರು ಬೇರೆಬೇರೆ ದೃಶ್ಯಗಳಲ್ಲಿ ಗಾಂಧೀಜಿಯ ಪಾತ್ರವನ್ನು ನಿರ್ವಹಿಸಿದರು.

**ಶಿಕ್ಷಕರ ಪ್ರತಿಕ್ರಿಯೆಗಳು**

ಈ ನಾಟಕ ತಯಾರಿಯ ಸಂಪೂರ್ಣ ಪ್ರಕ್ರಿಯೆಯಲ್ಲಿ ಶಿಕ್ಷಕರು ಅತ್ಯಂತ ಮುತುವರ್ಜಿಯಿಂದ ಮತ್ತು ಆಸ್ಥೆಯಿಂದ ಭಾಗವಹಿಸಿ ಬೆಂಬಲಿಸಿದರು. ಕೊಪ್ಪಳ ಪಟ್ಟಣದ ಸರ್ದಾರ್‌ಗಲ್ಲಿಯ ಸ.ಹಿ.ಪ್ರಾ. ಶಾಲೆಗೆ ಬರುತ್ತಿದ್ದ ಸರ್ಕಾರಿ ಬಾಲಮಂದಿರದ ಬಾಲಕರು ಮುಕ್ತವಾಗಿ ನಾಟಕದಲ್ಲಿ ತೊಡಗಿಸಿಕೊಂಡಿದ್ದರು. ಪೂರ್ವಾನುಮತಿ ಇಲ್ಲದೆ ಯಾವುದೇ ಮಕ್ಕಳನ್ನು ಹೊರಗೆ ಕಳುಹಿಸಲು ಒಪ್ಪದ ಬಾಲಮಂದಿರದ ವಾರ್ಡನ್, ನಾಟಕಕ್ಕಾಗಿ ಮಕ್ಕಳನ್ನು ನಮ್ಮ ವಿನಂತಿಯಂತೆ ಹಲವು ಬಾರಿ ಬಾಲಮಂದಿರದಿಂದ ಶಾಲೆಗೆ ಕಳುಹಿಸಿಕೊಡುತ್ತಿದ್ದರು. ಮಕ್ಕಳಿಗೆ ಉತ್ತೇಜನ ನೀಡಲು ಅವರೂ ಮಕ್ಕಳೊಂದಿಗೆ ನಾಟಕದ ಅಭ್ಯಾಸವರ್ಗಕ್ಕೆ ಬರುತ್ತಿದ್ದರು. ಮಕ್ಕಳು ಅಭಿನಯದಲ್ಲಿ ತಲ್ಲೀನರಾಗಿರುವುದನ್ನು ಕಂಡು ಅವರೂ ಖುಷಿಪಟ್ಟರು. ನಾಟಕ ಪ್ರದರ್ಶನದ ದಿನ ಬಾಲಮಂದಿರದ ಎಲ್ಲಾ ಮಕ್ಕಳನ್ನು ಅವರು ಕರೆತಂದರು.

ಶಾಲೆಯೊಂದರಲ್ಲಿ ವಿಜ್ಞಾನ ಶಿಕ್ಷಕರಾಗಿದ್ದ, ನಾಟಕ ಕಲಾವಿದರೂ ಆಗಿದ್ದ ದಯಾನಂದ ಸಾಗರ್, ಈ ಹಿಂದೆ ವೇದಿಕೆ ಹತ್ತಲು ಹಿಂಜರಿಯುತ್ತಿದ್ದ ತಮ್ಮ ಶಾಲೆಯ ಎಂಟನೇ ತರಗತಿಯ ವಿದ್ಯಾರ್ಥಿನಿಯರು ಈ ನಾಟಕೋತ್ಸವದಲ್ಲಿ ಪಾಲ್ಗೊಂಡ ಬಳಿಕ ಹಿಂಜರಿಯುವುದು ಕಡಿಮೆಯಾಗಿದೆ ಎಂದು ಸಂತೋಷದಿಂದ ತಮ್ಮ ಅನುಭವವನ್ನು ಹಂಚಿಕೊಂಡರು. ನಾಟಕದಲ್ಲಿ ಸ್ವಚ್ಛತೆಯ ದೃಶ್ಯಗಳಲ್ಲಿ ಭಾಗವಹಿಸಿದ್ದ ಮಕ್ಕಳು ತಮ್ಮ ಸುತ್ತಲಿನ ಪರಿಸರವನ್ನು ಶುಚಿಯಾಗಿಡಲು ಬಯಸುತ್ತಿದ್ದುದನ್ನು ನಿಲೋಗಿಪುರ ಸ.ಹಿ.ಪ್ರಾ. ಶಾಲೆಯ ಶಿಕ್ಷಕ ಮುತ್ತುರಾಜ್ ಗುರುತಿಸಿದ್ದಾರೆ. ಅದೇ ಶಾಲೆಯ ಮಕ್ಕಳು ರಾಷ್ಟ್ರೀಯ ಹಬ್ಬಗಳ ಆಚರಣೆಯ ಬಗ್ಗೆ ಒಂದು ಕಿರುನಾಟಕವನ್ನು ಅರ್ಥಪೂರ್ಣವಾಗಿ ಪ್ರದರ್ಶಿಸಿದರು. ಆ ಮೂಲಕ ಪ್ರತಿ ರಾಷ್ಟ್ರೀಯ ಹಬ್ಬಗಳು ಮತ್ತು ಪ್ರಮುಖ ವ್ಯಕ್ತಿಗಳ ಜನ್ಮದಿನಾಚರಣೆಯ ಹಿನ್ನೆಲೆಯನ್ನು ಮಕ್ಕಳಿಗೆ ತಿಳಿಸಿಕೊಡಬೇಕಾದ ಪ್ರಾಮುಖ್ಯತೆಯನ್ನು ಶಿಕ್ಷಕರು ಅರಿತುಕೊಂಡರು. ಇದರ ಪರಿಣಾಮವಾಗಿ ವಿಶೇಷ ದಿನಗಳಲ್ಲಿ ರಾಷ್ಟ್ರೀಯ ನಾಯಕರ ಭಾವಚಿತ್ರಗಳನ್ನು ಇರಿಸಿ ಕಾಟಾಚಾರಕ್ಕೆಂಬಂತೆ ಗೌರವ ಅರ್ಪಿಸುವ ಸಂಪ್ರದಾಯವನ್ನು ಬಿಟ್ಟು, ಅಂಥ ದಿನಗಳ ಮಹತ್ವದ ಬಗ್ಗೆ ವಿದ್ಯಾರ್ಥಿಗಳಿಗಾಗಿ ಚರ್ಚೆ ಏರ್ಪಡಿಸಲು ಆರಂಭಿಸಿದರು.

ತಮ್ಮ ಶಾಲಾ ವಿದ್ಯಾರ್ಥಿಗಳು ಗಿಡಗಳಿಗೆ ನೀರುಣಿಸಲು, ಶಾಲಾ ಆವರಣವನ್ನು ಸ್ವಚ್ಛವಾಗಿಡಲು ಸ್ವಯಂಪ್ರೇರಣೆಯಿಂದ ಮುಂದೆ ಬರತೊಡಗಿದರಲ್ಲದೆ, ಗಾಂಧಿ ನಾಟಕದಲ್ಲಿ ಮಾಡಿದ ಪಾತ್ರವನ್ನು, ಅದರಿಂದ ಕಲಿತದ್ದನ್ನು ಶಾಲೆಯಲ್ಲಿ ಅನುಸರಿಸುತ್ತಾರೆಂದು ಹನುಮನಹಳ್ಳಿಯ ಸ. ಹಿ.ಪ್ರಾ. ಶಾಲೆಯ ಪ್ರಾಣೇಶ್ ಪೂಜಾರ್ ನೆನಪಿಸಿಕೊಳ್ಳುತ್ತಾರೆ. ಅಲ್ಲದೆ ಮಕ್ಕಳು ಶಾಲೆಯಲ್ಲಿ ಖುಷಿಯಲ್ಲಿ ದಿನವಿಡೀ ನಾಟಕದ ಸಂಭಾಷಣೆಗಳನ್ನು ಹೇಳಿಕೊಳ್ಳುತ್ತ ತಿರುಗುತ್ತಿರುತ್ತಾರೆಂದು ಗುರುತಿಸುತ್ತಾರೆ. ಇಷ್ಟೆಲ್ಲಾ ಧನಾತ್ಮಕ ಬದಲಾವಣೆಗಳನ್ನು ಗಮನಿಸಿದ ಬಳಿಕ, ಅವರಿಗೆ ವಿದ್ಯಾರ್ಥಿಗಳ ಮೂಲಕ ಮತ್ತಷ್ಟು ನಾಟಕಗಳನ್ನು ಪ್ರದರ್ಶಿಸುವ ಹುಮ್ಮಸ್ಸು ಬಂದಿದೆ ಎಂದು ಹೇಳುತ್ತಾರೆ.

**ಇತರ ಪರಿಣಾಮಗಳು**

ನಾಟಕದ ಪ್ರತಿ ಅಭ್ಯಾಸದ ವೇಳೆ, ಸನ್ನಿವೇಶ ಒಂದೇ ಇದ್ದರೂ ಸಂಭಾಷಣೆಗಳನ್ನು ನೆನಪಿಟ್ಟು ಹೇಳಲು ಸಾಧ್ಯವಾಗದೆ ಮಕ್ಕಳು ಬದಲಾಯಿಸಿ ಹೇಳುತ್ತಿದ್ದರು. ಆದರೂ ಮಕ್ಕಳ ಸಂಭಾಷಣೆಗಳು ನಾಟಕದ ಚೌಕಟ್ಟಿನಿಂದಾಚೆ ಹೋಗುತ್ತಿರಲಿಲ್ಲ. ಇಡೀ ನಾಟಕದ ಸಂಭಾಷಣೆಗಳನ್ನು ಮಕ್ಕಳು ವ್ಯಕ್ತಪಡಿಸಿದ ಗಾಂಧೀಜಿಯ ವಿವಿಧ ಸನ್ನಿವೇಶಗಳ ಬಗೆಗಿನ ಅಭಿಪ್ರಾಯಗಳನ್ನು ಅವಲಂಬಿಸಿಯೇ ಬರೆಯಲಾಗಿತ್ತು. ಗಾಂಧೀಜಿಯ ಬದುಕಿನ ವಿವಿಧ ಹಂತಗಳನ್ನು ಅಂದರೆ ಬಾಲ್ಯ, ಯೌವ್ವನ, ಶಿಕ್ಷಣ, ವೃತ್ತಿ ಮತ್ತು ದಕ್ಷಿಣ ಆಫ್ರಿಕಾದಲ್ಲಿನ ಹೋರಾಟ, ಸತ್ಯಾಗ್ರಹ ಮತ್ತು ಅವರು ನಂಬಿದ ಮತ್ತು ಬದುಕಿದ ಮೌಲ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಪರಿಣಾಮಕಾರಿಯಾಗಿ ರಂಗಕ್ಕೆ ತರುವ ನಿಟ್ಟಿನಲ್ಲಿ ವಿದ್ಯಾರ್ಥಿಗ–ಳೊಂದಿಗೆ ಗಂಭೀರ ಚರ್ಚೆ ನಡೆಸಲಾಗಿತ್ತು. ಗಾಂಧೀಜಿಯ ವ್ಯಕ್ತಿತ್ವದಲ್ಲಿ ಒರಟುತನದಂತೆ ಕಾಣುತ್ತಿದ್ದ ಗಟ್ಟಿತನವನ್ನು ಮಕ್ಕಳು ಮನವರಿಕೆ ಮಾಡಿಕೊಂಡರು.

ಶಾಲೆಯಲ್ಲಿ, ಪಠ್ಯಪುಸ್ತಕದಲ್ಲಿ ಮತ್ತು ರೂಪಾಯಿ ನೋಟುಗಳಲ್ಲಿ ಮಾತ್ರ ನೋಡಿದ್ದ, 'ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು ಎಂದು ರಾಷ್ಟ್ರೀಯ ದಿನಾಚರಣೆಗಳ ವೇಳೆ ಭಾಷಣದಲ್ಲಿ ಕೇಳಿದ್ದ ಗಾಂಧೀಜಿಯ ಚಿತ್ರ ಮತ್ತು ಬದುಕನ್ನು, ಅದರ ಗಂಧವನ್ನು ಮಕ್ಕಳು ಈಗ ನಾಟಕದ ಮೂಲಕ ಸ್ವತಃ ಅನುಭವಿಸತೊಡಗಿದರು. ಅಲ್ಲದೆ, ಅದನ್ನು ಪ್ರೇಕ್ಷಕರಿಗೂ ಉಣಬಡಿಸಿದರು.

ಯಾರಾದರೂ, ನೀವ್ಯಾಕೆ ಈ ನಾಟಕವನ್ನು ಪ್ರದರ್ಶಿಸುತ್ತಿದ್ದೀರಿ ಎಂದು ಮಕ್ಕಳನ್ನು ಪ್ರಶ್ನಿಸಿದರೆ, ಗಾಂಧೀಜಿ ತಮ್ಮ ಬದುಕಿನ ಮೂಲಕ ತಾವು ನಂಬಿದ ತತ್ವಗಳಂತೆ ಬದುಕಲು ಸಾಧ್ಯ ಎಂದು ಎಲ್ಲರಿಗೂ ತೋರಿಸಿಕೊಟ್ಟವರು. ಹಾಗಾಗಿ ಎಲ್ಲರೂ ಅವರನ್ನು ಅರ್ಥ ಮಾಡಿಕೊಂಡು ಅನುಸರಿಸಬೇಕು ಎಂದು ಉತ್ತರಿಸುತ್ತಿದ್ದರು. ಶೌಚಾಲಯಗಳನ್ನು ತೊಳೆಯುವುದರಿಂದ, ತಮ್ಮ ತಲೆಕೂದಲನ್ನು

ತಾವೇ ಕತ್ತರಿಸಿಕೊಳ್ಳುವ ಮೂಲಕ ಯಾವುದೇ ಕೆಲಸವೂ ಮೇಲು ಅಲ್ಲ ಕೀಳೂ ಅಲ್ಲ ಎಂಬುದನ್ನು ಗಾಂಧೀಜಿ ನಿರೂಪಿಸಿದರು ಎಂದು ಮಕ್ಕಳು ಗುರುತಿಸಬಲ್ಲವರಾಗಿದ್ದರು. ತಮ್ಮ ಹಕ್ಕುಗಳಿಗಾಗಿ ಅಹಿಂಸೆಯ ಮೂಲಕವೇ ಪರಿಣಾಮಕಾರಿಯಾಗಿ ಹೋರಾಡಲು ಸಾಧ್ಯ ಎಂಬುದನ್ನೂ ಗಾಂಧೀಜಿ ತೋರಿಸಿಕೊಟ್ಟರು ಎಂದು ಮಕ್ಕಳು ಅರ್ಥ ಮಾಡಿಕೊಂಡರು.

ಗಾಂಧೀಜಿ ತಮ್ಮ ಬದುಕಿನ ಮೂಲಕ ಯಾವ ಸಂದೇಶ ರವಾನಿಸಿದರು? ಅವುಗಳಲ್ಲಿ ವೈಯಕ್ತಿಕವಾಗಿ ನಿಮಗಿಷ್ಟವಾದುದು ಯಾವುದು? ಬದಲಾವಣೆ ತರುವುದು ಕಷ್ಟವೇ? ಹೌದಾದರೆ ಯಾಕೆ?– ಇಂತಹ ಪ್ರಶ್ನೆಗಳನ್ನು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಚರ್ಚಿಸಿದ್ದರು.

ಹುಡುಗರು ಮನೆಗೆಲಸಗಳಲ್ಲಿ ಸಹಾಯ ಮಾಡುವ ಕುರಿತ ಚರ್ಚೆ ಮಾತ್ರ ಅವರಿಗೆ ಹೊಸದಾಗಿತ್ತು ಹಾಗು ಅದು ಅವರಿಗೆ ಅಚ್ಚರಿಯದಾಗಿತ್ತು, ಮುಜುಗರ ಉಂಟು ಮಾಡಿತ್ತು ಆದರೆ ಮಕ್ಕಳು ಗಾಂಧಿ ತತ್ವ ಮತ್ತು ಸಂದೇಶಗಳನ್ನು ಮಾತ್ರ ಸಮರ್ಪಕವಾಗಿ ಮನವರಿಕೆ ಮಾಡಿಕೊಳ್ಳುತ್ತಿದ್ದರು. ಈ ಪ್ರಕ್ರಿಯೆಯಲ್ಲಿ, ವಿದ್ಯಾರ್ಥಿಗಳು ಮತ್ತು ಶಿಕ್ಷಕರು, ತಮ್ಮ ಹಳ್ಳಿಗಳಲ್ಲಿ ಜಾತಿ ಮತ್ತು ಲಿಂಗಾಧಾರಿತ ತಾರತಮ್ಯ ಜೀವಂತವಿರುವುದನ್ನು ಮುಕ್ತವಾಗಿ ಒಪ್ಪಿಕೊಂಡರು. ಅದನ್ನು ನಿರ್ಮೂಲನೆ ಮಾಡಬೇಕಾದರೆ ಎಲ್ಲರೂ ಒಗ್ಗಟ್ಟಿನಿಂದ ಹೋರಾಡಬೇಕು ಎಂಬುದು ಅವರೆಲ್ಲರ ದೃಷ್ಟಿಕೋನವಾಗಿತ್ತು.

ಸ್ವೀಕೃತಿಮಂಗಳೂರಿನ ರಂಗಭೂಮಿ ಕಲಾವಿದೆ, ಲೇಖಕಿಯಾಗಿರುವ ವಾಣಿ ಪೆರಿಯೋಡಿ ನಮಗೆ ಈ ಪ್ರಕ್ರಿಯೆಯಲ್ಲಿ ಸಹಕರಿಸಿದರು. ಅವರು ನಾಟಕಕ್ಕೆ ಬೇಕಾದ ಸಂಪನ್ಮೂಲ ಪರಿಕರಗಳನ್ನು ತಯಾರಿಸಿ ನೀಡಿದರಲ್ಲದೆ, ನಾಲ್ಕು ಶಾಲೆಗಳಿಗೆ ಭೇಟಿ ನೀಡಿ ಮಕ್ಕಳೊಂದಿಗೆ ಚರ್ಚಿಸಿದರು. ರಂಗ ಕಲಾವಿದ ಹಾಗೂ ವಿಸ್ತಾರ್ ನಾಟಕ ಶಾಲೆಯ ಪ್ರಾಂಶುಪಾಲರಾಗಿರುವ ಕೊಪ್ಪಳದ ಲಕ್ಷ್ಮಣ್ ಪಿರಾಗರ್ ಅವರು ಈ ನಾಟಕಗಳನ್ನು ಸಿದ್ಧಪಡಿಸಲು ನೆರವಾದರು.

***Acknowledgements***

*Vani Periodi, theatre activist and writer from Mangalore, helped us with the process. She prepared and provided the resource materials for the plays and visited and interacted with the children of the four schools. Laxman Piragar, theatre activist and Principal of Visthar Theatre School of Koppal, helped us in preparing these plays.*

***ಮಕ್ಕಳ ವೈಯಕ್ತಿಕ ಕಾರಣಕ್ಕಾಗಿ ಹೆಸರುಗಳನ್ನು ಬದಲಿಸಲಾಗಿದೆ.**



**ಉಷಾ ಪ್ರೆಸಿಲ್ಲಾ ಅಂಬ್ರೋಸ್** ಅವರು, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ದಶಕದಿಂದ ಕಾರ್ಯನಿರ್ವಹಿಸುತ್ತಿದ್ದು, ಕೊಪ್ಪಳದಲ್ಲಿ ತಂಡದ ಮುಖ್ಯಸ್ಥೆಯಾಗಿದ್ದಾರೆ. ರಾಜಕೀಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಅವರು, ಹಿಂದುಳಿದ ವರ್ಗಗಳು ಮತ್ತು ಮಹಿಳಾ ಸಶಕ್ತೀಕರಣಕ್ಕಾಗಿ ಶ್ರಮಿಸುತ್ತಿದ್ದಾರೆ. ಚಿತ್ರಕಲೆ, ಸಾಹಿತ್ಯ, ಸಂಗೀತ ಮತ್ತು ಪ್ರವಾಸ ಅವರ ಆಸಕ್ತಿಯ ಕ್ಷೇತ್ರವಾಗಿದೆ. ಉಷಾ ಪ್ರೆಸಿಲ್ಲಾ ಅಂಬ್ರೋಸ್ ಅವರ ಸಂಪರ್ಕಕ್ಕೆ:

usha.ambrose@azimpremjifoundation.org

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಮಕ್ಕಳು ತಮ್ಮ ಶಾಲೆಯ ಸಂಸ್ಕೃತಿಯನ್ನೇ ಮೈಗೂಡಿಸಿಕೊಳ್ಳುತ್ತಾರೆ

ವಿಜಯಲಕ್ಷ್ಮೀ ಪಿ.ಎಸ್.

ಅನುಭವ

ನನ್ನ ಸಂಶೋಧನಾ ಅಧ್ಯಯನದ (Fellowship) ಅವಧಿಯಲ್ಲಿ ನಾನು ಕೆಲಸ ಮಾಡಿದ ಶಾಲೆಯೊಂದರಲ್ಲಿ ದೊರೆತ ಅನುಭವವಿದು.

ಕ್ಲಸ್ಟರ್ ಮಟ್ಟದ ಮೇಳವೊಂದಕ್ಕೆ ಯೋಜನೆಯನ್ನು ರೂಪಿಸಲಾಗುತ್ತಿತ್ತು. ಸಂಶೋಧನಾ ವಿದ್ಯಾರ್ಥಿಗಳಾಗಿದ್ದ ನಮಗೆ ಅನೇಕ ಶಾಲೆಗಳ ಜೊತೆಗೂಡಿ ಕೆಲಸ ಮಾಡಬೇಕಾಗಿತ್ತು. ಅಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆ ಗರಿಷ್ಠ ಸಮಯವನ್ನು ಕಳೆಯಬೇಕಿತ್ತು. ಶಿಕ್ಷಕರು ಮಕ್ಕಳೊಂದಿಗೆ ಅನೌಪಚಾರಿಕವಾಗಿ ವಿಚಾರ ವಿನಿಮಯ ನಡೆಸುವುದನ್ನು ಖಾತ್ರಿಪಡಿಸಿಕೊಳ್ಳಲು ನಾವು ಚಟುವಟಿಕೆಗಳು / ಆಟಗಳನ್ನು ನಡೆಸಿ, ಅವರನ್ನು ಪರೀಕ್ಷಿಸಿ ನೋಡಬೇಕಿತ್ತು. ಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳ ಜೊತೆ ವ್ಯವಹರಿಸಿದರೆ ಮತ್ತು ಸಂವಹನ ನಡೆಸಿದರೆ ಅದರಿಂದ ಕಲಿಕೆ–ಬೋಧನೆಯ ಚಟುವಟಿಕೆಯು ಹೆಚ್ಚು ಪರಿಣಾಮಕಾರಿಯಾಗುತ್ತದೆ ಎಂಬುದನ್ನು ಶಿಕ್ಷಕರು ಕಲಿಯಬೇಕಿತ್ತು. ಮೇಳ ಮುಗಿಯುವ ಹೊತ್ತಿಗೆ, ಸಂವಾದ ಮತ್ತು ಕಲಿಕೆಯ ಅನುಭವದ ಈ ಪ್ರಯಾಣವು ಶಿಕ್ಷಕರು ಹಾಗೂ ಕಲಿಯುವವರಿಗೆ ಒಂದು ನಿದರ್ಶನವನ್ನು ಒದಗಿಸುತ್ತದೆ ಎನ್ನುವ ಭರವಸೆ ನಮಗಿತ್ತು.

ಸಹೋದ್ಯೋಗಿಗಳ ನಡುವಿನ ಪೈಪೋಟಿಯನ್ನು 'ಕಾರ್ಯ–ಸ್ಥಳದಲ್ಲಿರುವ ಸ್ಪರ್ಧೆ' ಎಂದು ನೋಡುವುದು ಸಾಮಾನ್ಯ. ಇದರಿಂದಾಗಿಯೇ ಕೆಲವು ಗುಂಪುಗಳು ಹುಟ್ಟಿಕೊಳ್ಳುತ್ತವೆ ಹಾಗೂ ಲಘುವಾಗಿ ಒಂದಷ್ಟು ಗಾಳಿಸುದ್ದಿ ಮತ್ತು ತಮಾಷೆಗೂ ಕಾರಣವಾಗುತ್ತವೆ. ನಾನು ಸುಮಾರು ಎರಡು ದಿನಗಳ ಕಾಲ ಆ ಶಾಲೆಯಲ್ಲಿದ್ದೆ. ಈ ಸಂದರ್ಭದಲ್ಲಿ, ಶಿಕ್ಷಕರು ಮಧ್ಯಾಹ್ನದ ಊಟದ ವೇಳೆ ಎರಡು ಗುಂಪುಗಳಾಗಿ ತಮ್ಮ ಲಂಚ್ ಬಾಕ್ಸ್‌ಗಳನ್ನು ಹಿಡಿದುಕೊಂಡು ಎರಡು ಪ್ರತ್ಯೇಕ ಕೋಣೆಗಳಿಗೆ ಹೋಗುವುದನ್ನು ಗಮನಿಸಿದೆ. ಸಂಶೋಧನಾ ವಿದ್ಯಾರ್ಥಿಯಾದ ನನಗೆ, ಯಾವ ಗುಂಪಿನ ಜೊತೆ ಕುಳಿತುಕೊಳ್ಳಬೇಕು ಅಥವಾ ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕೇ ಎನ್ನುವ ಗೊಂದಲ ಉಂಟಾಯಿತು. ಅಲ್ಲಿಯ ಮುಖ್ಯ ಶಿಕ್ಷಕಿ ನನ್ನ ಸಂದಿಗ್ಧತೆಯನ್ನು ಗಮನಿಸಿ ತಮ್ಮ ತಂಡದ ಜೊತೆ ಕುಳಿತುಕೊಳ್ಳಲು ನನ್ನನ್ನು ಆಹ್ವಾನಿಸಿದರು (ಈ ಗುಂಪನ್ನು 'ಹ್ಯಾರಿ' ಎಂದು ಕರೆಯೋಣ). ಆಹಾರ, ಸಂಸ್ಕೃತಿ ಮತ್ತು ಬೆಂಗಳೂರಿನ ಸಂಚಾರ ದಟ್ಟಣೆಯ ಕುರಿತು ನಮ್ಮ ನಡುವೆ ಉತ್ತಮ ಮಾತುಕತೆ ನಡೆಯಿತು.

ಕೆಲವು ದಿನಗಳು ಕಳೆದವು. ನಾನು ಎಲ್ಲಾ ಶಿಕ್ಷಕರ ಜೊತೆ ಉತ್ತಮ ಬಾಂಧವ್ಯವನ್ನು ಬೆಳೆಸುತ್ತಿದ್ದೆ. ಒಂದು ದಿನ ಇನ್ನೊಂದು ಗುಂಪಿನ (ಇದನ್ನು 'ಪಾಟರ್' ಎಂದು ಕರೆಯೋಣ) ಶಿಕ್ಷಕರು ನನ್ನನ್ನು ಕರೆದು ಅವರೊಂದಿಗೆ ಊಟ ಮಾಡಲು ಆಹ್ವಾನಿಸಿದರು. ನಾನು ಅವರ ಆಹ್ವಾನವನ್ನು ಅಕ್ಕರೆಯಿಂದಲೇ ಸ್ವೀಕರಿಸಿದೆ ಹಾಗೂ ಎರಡೂ ಗುಂಪುಗಳ ಜೊತೆ ಉತ್ತಮ ಬಾಂಧವ್ಯವನ್ನು ಕಾಪಾಡುತ್ತಲೇ ಕೆಲವು ದಿನಗಳ ಕಾಲ ಅವರೊಂದಿಗೆ ಮಧ್ಯಾಹ್ನದ ಊಟ ಮಾಡಿದೆ. 20 ದಿನಗಳ ಕಾಲ ಈ ಎರಡೂ ಗುಂಪುಗಳ ಜೊತೆಗೆ ನಾನು ಊಟ ಮಾಡಿದರೂ, ಈ ಎರಡು ಗುಂಪುಗಳಲ್ಲಿ ನಾನು ಯಾವುದೇ ಗಾಳಿಸುದ್ದಿ ಅಥವಾ ಚರ್ಚೆಯನ್ನಾಗಲೀ ಗಮನಿಸಲಿಲ್ಲ. ಉಳಿದ ಸಮಯದಲ್ಲಿ ಈ ಎರಡೂ ಗುಂಪುಗಳು ಪರಸ್ಪರ ಉತ್ತಮ ಬಾಂಧವ್ಯವನ್ನು ಹೊಂದಿದ್ದವು ಮಾತ್ರವಲ್ಲದೆ ಪಠ್ಯ ಯೋಜನೆ ಹಾಗೂ ಮಕ್ಕಳ ಕುರಿತ ಕಿರುಗತೆಗಳನ್ನು, ಖುಷಿಯನ್ನು ಪರಸ್ಪರ ಹಂಚಿಕೊಳ್ಳುತ್ತಿದ್ದರು ಎಂಬುದನ್ನು ನಾನು ಗಮನಿಸಿದೆ. ಕೊನೆಗೆ, ಒಂದು ಮಧ್ಯಾಹ್ನ ನಾನು ಹ್ಯಾರಿ ಗುಂಪಿನ ಜೊತೆ ಊಟ ಮಾಡುತ್ತಿದ್ದಾಗ, ಪ್ರಧಾನ ಬಾಣಸಿಗ ಮುಖ್ಯ ಶಿಕ್ಷಕಿಯನ್ನು ಭೇಟಿಯಾದರು. ಆ ದಿನ ತಯಾರಿಸಿದ ಸಾಂಬಾರು ಮತ್ತು ಬರ್ಫಿಯ ರುಚಿ ತುಂಬಾ ಚೆನ್ನಾಗಿದ್ದು, ಒಂದಷ್ಟು ರುಚಿ ನೋಡುವಂತೆ ಅವರು ಮುಖ್ಯ ಶಿಕ್ಷಕಿಯನ್ನು ಕೇಳಿಕೊಂಡರು. ಒಬ್ಬ ವಿದ್ಯಾರ್ಥಿಯ ಮೂಲಕ ಒಂದಷ್ಟು ಕಳುಹಿಸಿಕೊಡುವಂತೆ ಮುಖ್ಯ ಶಿಕ್ಷಕಿಯು ಮುಖ್ಯ ಬಾಣಸಿಗನಿಗೆ ತಿಳಿಸಿದರು. ಬಾಣಸಿಗ, ತಲೆಅಲ್ಲಾಡಿಸಿ ಹೊರಟು ಹೋದರು. ಕೆಲ ನಿಮಿಷಗಳ ನಂತರ, ಯಾವ ವಿದ್ಯಾರ್ಥಿಯು ಆಹಾರ ತೆಗೆದುಕೊಂಡು ಬರುತ್ತಿದ್ದಾನೆ ಎಂದು ಶಿಕ್ಷಕಿಯೊಬ್ಬರು ಬಾಗಿಲ ಬಳಿ ಕುಳಿತಿದ್ದ ಇನ್ನೊಬ್ಬ ಶಿಕ್ಷಕಿಯನ್ನು ಇದ್ದಕ್ಕಿದ್ದಂತೆ ಕೇಳಿದರು. ಮುಖ್ಯ ಬಾಣಸಿಗನು ಯಾರನ್ನಾದರೂ ಕಚೇರಿಯ ಒಳಗೆ ಕಳುಹಿಸಬಹುದು ಎಂದು ಗೊಣಗಿದರು. ಆ ವೇಳೆಗಾಗಲೇ ನಾನು ಅವರ ಆಡುಭಾಷೆಯನ್ನು ಅರ್ಥ ಮಾಡಿಕೊಂಡೆ ಹಾಗೂ ಶಿಕ್ಷಕರು 'ಯಾರನ್ನೋ' ಎಂದು ಯಾಕೆ ಹೇಳಿದರು ಎನ್ನುವುದನ್ನು ಗ್ರಹಿಸಿಕೊಂಡೆ. ಈ ನಡುವೆ, ಬಾಗಿಲ ಬಳಿ ಕುಳಿತಿದ್ದ ಶಿಕ್ಷಕಿಯು ತಕ್ಷಣವೇ ಎದ್ದು, ಯಾವ ವಿದ್ಯಾರ್ಥಿ ಆಹಾರವನ್ನು ತೆಗೆದುಕೊಂಡು ಬರುತ್ತಿದ್ದಾರೆ ಎಂಬುದನ್ನು ನೋಡಲು ಹೊರ ಹೋದರು. ಅವರು ತನ್ನ ಜೊತೆ ಹುಡುಗಿಯೊಂದನ್ನು ಕರೆದುಕೊಂಡು ಬಂದರು ಹಾಗೂ ಅವರೆಲ್ಲರಿಗೂ ಆ ಹುಡುಗಿಯೇ ಆಹಾರ ಬಡಿಸುವಂತೆ ನೋಡಿಕೊಂಡರು. ಎಲ್ಲರೂ ಊಟವನ್ನು ಸವಿದರು.

ಇಡೀ ಘಟನೆಯು ನನ್ನಲ್ಲಿ ಕುತೂಹಲವನ್ನು ಹುಟ್ಟುಹಾಕಿತು. ಸಂಜೆಯ ವೇಳೆ, ಎಲ್ಲಾ ಸಂಶೋಧನಾ ವಿದ್ಯಾರ್ಥಿಗಳು, ನಗರಕ್ಕೆ ಹಿಂದಿರುಗುವುದಕ್ಕಾಗಿ ಪಟ್ಟಣದ ಬಸ್ ನಿಲ್ದಾಣದಲ್ಲಿ ಭೇಟಿಯಾದೆವು. ಅವರಲ್ಲಿ ಸ್ಥಳೀಯರೂ ಆಗಿದ್ದ ಒಬ್ಬರಲ್ಲಿ, ಮಧ್ಯಾಹ್ನದ ಊಟದ ವೇಳೆ ನಡೆದ ಘಟನೆಯ ಕುರಿತು ಪ್ರಸ್ತಾಪಿಸಿ, 'ಯಾರನ್ನೋ' ಎಂದಾಗ, ಅದು ಜಾತಿಯ ಕುರಿತಾಗಿತ್ತೇ' ಎಂದು ನಾನು ಕೇಳಿದೆ. 'ಹೌದು, ಮೊದಲ ದಿನದಿಂದಲೇ ನೀನು ಅದನ್ನು ಗಮನಿಸಿಲ್ಲವೇ? ಇನ್ನು ಯಾವ ಕಾರಣಕ್ಕಾಗಿ ಶಿಕ್ಷಕರಲ್ಲಿ ಎರಡು ಗುಂಪುಗಳಿವೆ!' ಎಂದು ನನ್ನ ಸಹೋದ್ಯೋಗಿ ಉತ್ತರಿಸಿದರು. ನನಗೆ ದಂಗು ಬಡಿದಂತಾಯಿತು. ನಾನು ಎಲ್ಲ ಘಟನೆಗಳನ್ನೂ ಒಂದಕ್ಕೊಂದು ಜೋಡಿಸಿ ಅದರ ಅರ್ಥ ಹುಡುಕಲು ಪ್ರಯತ್ನಿಸಿದೆ. ಶಿಕ್ಷಕರು ಪ್ರತ್ಯೇಕವಾಗಿ ಗುಂಪು–ಗೂಡುವುದಕ್ಕೂ ಕಾರ್ಯಸ್ಥಳದ ಸ್ಪರ್ಧೆಗೂ ಯಾವುದೇ ಸಂಬಂಧವಿರಲಿಲ್ಲ. ಇದು ಜನರ ಎರಡು ವರ್ಗಗಳ ನಡುವೆ ಆಹಾರವನ್ನು ಹಂಚಿ ತಿನ್ನಲು ಇರುವ ನಿರ್ಬಂಧದ ಕುರಿತ ಸಾಮಾಜಿಕ ರೂಢಿಯನ್ನು ಆಧರಿಸಿದ ಎಲ್ಲೆಯ ಸ್ಪಷ್ಟ ಗುರುತಿಸುವಿಕೆಯಾಗಿತ್ತು. ನಮ್ಮ ಸಮಾಜ ಇರುವುದೇ ಹೀಗೆ ಮತ್ತು ಎಲ್ಲರೂ ಈ ಸಮಾಜದ ನಿಯಮಗಳನ್ನು ಅನುಸರಿಸಲೇ–

ಬೇಕಾದುದರಿಂದ ಶಿಕ್ಷಕರ ಕ್ರಮಗಳ ಕುರಿತು ತೀರ್ಪು ನೀಡುವುದು ನನ್ನಿಂದ ಸಾಧ್ಯವಾಗಲಿಲ್ಲ.

ಪೌರತ್ವದ ಕುರಿತು ನಮ್ಮ ನಡುವೆ ಹೆಚ್ಚು ಚರ್ಚೆಯಾಗುವುದಿಲ್ಲ. ನಾವಿದನ್ನು ನಮ್ಮ ಸಮಾಜವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಓದುತ್ತೇವೆ. ಬಹುಶಃ ನಾವು ಮಕ್ಕಳಾಗಿದ್ದಾಗ, ನಮ್ಮ ಪೋಷಕರು ತಮ್ಮ ಮತ ಚಲಾಯಿಸಿದ ನಂತರ ಅವರ ಉಗುರಿನ ಮೇಲೆ ಹಾಕುವ ಕಡುನೀಲಿ ಶಾಯಿಯ ಗುರುತನ್ನು ಕಂಡಾಗಲೇ ನಾಗರೀಕರ ಹಕ್ಕುಗಳ ಕುರಿತು ಮೊದಲ ಬಾರಿಗೆ ನಮಗೆ ಅರಿವಾಗಿದ್ದು. ಚುನಾವಣೆ ಹೊರತುಪಡಿಸಿ, ಬೇರೆ ಯಾವ ಸಂದರ್ಭದಲ್ಲಿ ನಾವು 'ಪೌರ' ಎಂಬ ಶಬ್ದವನ್ನು ಕೇಳಿದ್ದೇವೆ? ಪೌರತ್ವ ಎಂದರೇನು? ನಮ್ಮ ಸಮಾಜ ಹೇಗಿದೆಯೋ, ಹಾಗೆಯೇ ನಾವು ಇರುತ್ತೇವೆ. ನಾವು ಸಾಮಾಜಿಕ ನಿಯಮಗಳನ್ನು ಅನುಕರಿಸುತ್ತೇವೆ ಮತ್ತು ಅನುಸರಿಸುತ್ತೇವೆ– ಎಂಬಷ್ಟೇ ಇದು ತುಂಬಾ ಸರಳವಾದ ವಿಚಾರ. ನಮ್ಮ ಸಮೀಪದ ಸಮಾಜದಲ್ಲಿ, ನಾವು ಉತ್ತಮ ನಾಗರಿಕರು ಎಂಬುದನ್ನು ಸಾಬೀತುಪಡಿಸಬೇಕೇ ಹೊರತು, ಎಲ್ಲೋ ರಾಜಧಾನಿಯ ಮಹಾನಗರದಲ್ಲಿ ಅಥವಾ ನಮ್ಮ ದೇಶದ ಯಾವುದೋ ಗಡಿಯಲ್ಲಿ ಇದನ್ನು ಸಾಬೀತುಪಡಿಸುವ ಅಗತ್ಯವಿಲ್ಲ.

ಈ ಘಟನೆಯಲ್ಲಿ ಕಂಡುಬಂದಂತೆ, ಶಿಕ್ಷಕರು ಸಹ ಅವರು ಹುಟ್ಟಿ ಬೆಳೆದ ಸಮಾಜದ ಇಂಥ ನಿಯಮಗಳನ್ನು ಕೂಡ ಪಾಲಿಸುತ್ತಾರೆ. ಸಮಾಜವು ಇದೇ ರೀತಿ ವರ್ತಿಸುತ್ತದೆ ಹಾಗೂ ಈ ನಿಯಮಗಳನ್ನು ಅವರು ಪಾಲಿಸಬೇಕು ಎಂಬುದನ್ನು ಅವರು ಅರಿತುಕೊಂಡಿದ್ದಾರೆ. ಅದೇ ಶಾಲೆಯಲ್ಲಿ, ಬೆಳಗ್ಗಿನ ಸಭೆಯಲ್ಲಿ ಹಾಗೂ ಶಾಲಾ ದಿನದ ಅಂತ್ಯದಲ್ಲಿ – ಹೀಗೆ ಎರಡು ಬಾರಿ ರಾಷ್ಟ್ರಗೀತೆಯನ್ನು ಹಾಡಲಾಗುತ್ತದೆ. ಈ ವಿಚಾರದಲ್ಲಿ ತುಂಬಾ ನಿರ್ದಿಷ್ಟವಾಗಿದ್ದ ಮುಖ್ಯ ಶಿಕ್ಷಕಿಯು, ರಾಷ್ಟ್ರಗೀತೆ ಹಾಡದೆ ಯಾರೂ ಹೊರಗೆ ಹೋಗಬಾರದು ಎನ್ನುವ ಕಾರಣಕ್ಕೆ ಶಾಲೆಯ ಗೇಟುಗಳಿಗೆ ಬೀಗ ಹಾಕಿಸಿ ಬಿಡುತ್ತಿದ್ದರು. ಪೌರತ್ವವನ್ನು ವಿದ್ಯಾರ್ಥಿಗಳಲ್ಲಿ ಅಚ್ಚೊತ್ತುವುದೇ ಎರಡು ಬಾರಿ ರಾಷ್ಟ್ರಗೀತೆಯನ್ನು ಹಾಡಿಸುವುದರ ಮೂಲ ಉದ್ದೇಶವಾಗಿತ್ತು. ತಮಗೆ ಕಲಿಸಿದ್ದೆಲ್ಲವನ್ನು ವಿದ್ಯಾರ್ಥಿಗಳು ಕಲಿಯಲಾರರು. ಆದರೆ, ಶಿಕ್ಷಕರ ಕ್ರಮಗಳು ಮತ್ತು ವರ್ತನೆಗಳನ್ನು ಇವರು ಖಂಡಿತವಾಗಿಯೂ ಅನುಸರಿಸುತ್ತಾರೆ. ತಿಳಿದೋ, ತಿಳಿಯದೆಯೋ, ಅವರು ತಮ್ಮ ಶಾಲೆಯ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುತ್ತಾರೆ.



**ವಿಜಯಶ್ರೀ ಪಿ.ಎಸ್**. ಅವರು ಸಂಪನ್ಮೂಲ ವ್ಯಕ್ತಿಯಾಗಿದ್ದು, ಕಲಬುರ್ಗಿ ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಪ್ರತಿಷ್ಠಾನ ಇದರೊಂದಿಗೆ ಗುರುತಿಸಿಕೊಂಡಿದ್ದಾರೆ. ಇವರನ್ನು vijayashree.ps@azimpremjifoundation.org ಮೂಲಕ ಸಂಪರ್ಕಿಸಬಹುದು.

**ವಿಜ್ಞಾನದ ಶಿಕ್ಷಕಿಯು ತರಗತಿ ಕೋಣೆಯಲ್ಲಿ ಕೆಲವು ಮೂಲಭೂತ ಪ್ರಜಾತಾಂತ್ರಿಕ ಅಭ್ಯಾಸಗಳನ್ನು ಹೇಗೆ ಅಚ್ಚೊತ್ತಬಹುದು ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅವರಿಗೆ ಖಂಡಿತವಾಗಿಯೂ ಇದು ನೆರವಾಗುತ್ತದೆ. ಉದಾಹರಣೆಗೆ, ಪರಿಸರದಲ್ಲಿ ಒದಗಿಸುವ ಸಾಮಾನ್ಯ ಸಂಪನ್ಮೂಲಗಳ ಬಳಕೆ. ಇದು, ಮುಖ್ಯವಾಗಿ, ಪ್ರಯೋಗಾಲಯದಲ್ಲಿ ಅವಕಾಶವು ಎಲ್ಲರಿಗೂ ಸಮಾನ ಎಂದು ಅರಿತಿರುವುದರಿಂದ, ಪ್ರಯೋಗಾಲಯದಲ್ಲಿ ಕಾರ್ಯನಿರ್ವಹಿಸುವ ವೇಳೆ, ವಿಜ್ಞಾನದ ಪ್ರಮುಖ ಗುಣಲಕ್ಷಣವೆನಿಸಲಿದೆ.**

**–ಚಂದ್ರಿಕಾ ಮುರಳೀಧರನ್, ಡೆಮಾಕ್ರಸಿ ಇನ್ ದ ಸೈನ್ಸ್ ಕ್ಲಾಸ್‌ರೂ, ಪು 30**

# ಸಮಾಜದ ಕಿರುಪ್ರತಿರೂಪವಾಗಿ ಶಾಲೆ

ಪೂಜಾ ವೈಷ್ಣೋಯ್

ಒಬ್ಬ ವ್ಯಕ್ತಿಯ ಸಾಮಾಜಿಕ ಪರಿಸರ ಎಂದರೆ ಆಕೆ ಅಥವಾ ಆತನ ಅತ್ಯಂತ ಹತ್ತಿರದ ಜಗತ್ತಾಗಿರುತ್ತದೆ. ನಾವು ನಮ್ಮ ಈ ತಕ್ಷಣದ ಜಗತ್ತನ್ನು ಅನುಭವಿಸುತ್ತಾ ಬೆಳೆಯುತ್ತೇವೆ. ನಮ್ಮ ಬಾಲ್ಯದಿಂದಲೇ ಆ ಪರಿಸರವು ನಮ್ಮ ದೃಷ್ಟಿಕೋನಗಳನ್ನು ಮತ್ತು ಆಲೋಚನೆಗಳನ್ನು ರೂಪಿಸುತ್ತವೆ. ಶಾಲೆ ಎನ್ನುವುದು ಈ ಜಗತ್ತಿನ ಅವಿಭಾಜ್ಯ ಘಟಕ. ಬದುಕಿನ ಮೌಲ್ಯಗಳನ್ನು ಅರ್ಥೈಸಿಕೊಳ್ಳಲು ಯಾವುದು ಸರಿ, ಯಾವುದು ತಪ್ಪು ಎಂದು ನಿರ್ಧರಿಸುವುದಕ್ಕೆ ಮತ್ತು ಉತ್ತಮ ನಾಗರಿಕನಾಗುವುದಕ್ಕೆ ತರಬೇತಿ ನೀಡುವ ಕೆಲಸವನ್ನು ಶಾಲೆಗಳು ಮಾಡಬೇಕೆಂದು ನಿರೀಕ್ಷಿಸಲಾಗುತ್ತದೆ. ಶಾಲೆಗಳು ಇಂತಹ ಸಾಮಾಜಿಕ ಪರಿಸರದಲ್ಲಿ ಕೆಲಸ ಮಾಡುತ್ತವೆ. ಶಾಲಾ ಅಭ್ಯಾಸಗಳಲ್ಲಿ ಸಾಮಾಜಿಕ ಅಭ್ಯಾಸಗಳೂ ಪ್ರತಿಫಲನಗೊಳ್ಳುತ್ತವೆ. ಶಾಲೆಗಳು ವ್ಯಕ್ತಿಗಳನ್ನು ನೌಕರಿಗಾಗಿ ತರಬೇತು ನೀಡುವುದಷ್ಟೇ ಅಲ್ಲ, ಚಿಕ್ಕಂದಿನಲ್ಲೇ ನಮ್ಮಲ್ಲಿ ಅವು ಸಮಾನತೆ, ನ್ಯಾಯ, ಗೌರವ ಮೊದಲಾದ ಪ್ರಜಾಪ್ರಭುತ್ವದ ಮೌಲ್ಯಗಳನ್ನು ತುಂಬಿಸುವ ಕೆಲಸವನ್ನು ಮಾಡುತ್ತವೆ.

ಹೀಗೆ ಮಕ್ಕಳಿಗೆ ಶಿಕ್ಷಣ ನೀಡುವುದರ ಉದ್ದೇಶದ ಬಗ್ಗೆ ಸಂಪೂರ್ಣ ಜ್ಞಾನ ಇರುವ ಶಾಲೆಯೊಂದರಲ್ಲಿ ಪಾಠ ಮಾಡುವ ಅವಕಾಶ ನನಗೆ ಸಿಕ್ಕಿತ್ತು. ಬರ್ಮೇರ್‌ನ ಅಜೀಂ ಪ್ರೇಮ್‌ಜಿ ಶಾಲೆ ನೂತನ ವಿಚಾರಗಳನ್ನು ಅರಿತುಕೊಳ್ಳುವ, ಉತ್ತಮ ಮತ್ತು ಜವಾಬ್ದಾರಿಯುತ ನಾಗರಿಕನಾಗಿರಲು ಬೇಕಾದ ಮೌಲ್ಯಗಳನ್ನು ತಮ್ಮಷ್ಟಕ್ಕೆ ಕಲಿಯುವಂಥ ಅವಕಾಶವಿರುವ, ವಿದ್ಯಾರ್ಥಿಗಳಿಗೆ ಸಮಗ್ರ ಕಲಿಕಾ ಪರಿಸರವನ್ನು ಒದಗಿಸಬೇಕೆಂಬ ದೃಷ್ಟಿಕೋನದಲ್ಲಿ ಹುಟ್ಟಿಕೊಂಡ ಸಂಸ್ಥೆಯಾಗಿದೆ. ಪ್ರಸ್ತುತ ಶಾಲೆಯಲ್ಲಿ 1ರಿಂದ 4ರವರೆಗೆ ತರಗತಿಗಳಿವೆ. 139 ವಿದ್ಯಾರ್ಥಿಗಳು ಮತ್ತು 9 ಶಿಕ್ಷಕರಿದ್ದಾರೆ. ಶಾಲೆಯು ಸಹಶಿಕ್ಷಣವನ್ನು ನೀಡುತ್ತಿದ್ದು, ಎಲ್ಲ ಬಗೆಯ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳಿದ್ದಾರೆ. ವೈವಿಧ್ಯಮಯ ಸಂವಾದ ಮತ್ತು ಅಭಿಪ್ರಾಯಗಳಿಗಾಗಿ ವಿವಿಧ ಸಮಾಜೋ – ಆರ್ಥಿಕ ಹಿನ್ನೆಲೆಯ ವಿದ್ಯಾರ್ಥಿಗಳನ್ನು ಬರಮಾಡಿಕೊಳ್ಳುವುದೇ ಶಾಲೆಯ ಉದ್ದೇಶ.

ಶಾಲೆಯಲ್ಲಿ ಎಲ್ಲ ಬಗೆಯ ಸಾಮಾಜಿಕ ವರ್ಗಕ್ಕೆ ಸೇರಿದ ಮಕ್ಕಳಿದ್ದಾರೆ. ಬೇರೆಬೇರೆ ವೃತ್ತಿಯಲ್ಲಿರುವ, ವಿಭಿನ್ನ ನಂಬಿಕೆಗಳ ಪಾಲಕರು ಇದ್ದು, ಮಕ್ಕಳಲ್ಲಿ ಅವರ ಕುಟುಂಬ ಮತ್ತು ಸಮುದಾಯದ ಆಲೋಚನೆಗಳು ಮತ್ತು ನಂಬಿಕೆಗಳು ತುಂಬಿಕೊಂಡಿರುತ್ತವೆ. ಇದು ಪ್ರತಿಯೊಬ್ಬರ ಪರಸ್ಪರ ನಡವಳಿಕೆಗಳಲ್ಲೂ ಪ್ರತಿಫಲಿಸುತ್ತವೆ. ವಿವಿಧ ವಿಷಯಕ್ಕೆ ಸಂಬಂಧಿಸಿದ ಅವರ ಅಲೋಚನೆಗಳು ಇದನ್ನೇ ತಿಳಿಸುತ್ತವೆ. ವಿದ್ಯಾರ್ಥಿಗಳು ಶೈಕ್ಷಣಿಕ ಗಟ್ಟಿತನ ಬೆಳೆಸಿಕೊಳ್ಳಲು ಮತ್ತು ಉತ್ತಮ ಮನುಷ್ಯರಾಗಲು ಮಾರ್ಗದರ್ಶನ ನೀಡಬೇಕು ಎಂದು ಶಿಕ್ಷಕರಾಗಿ ನಾವು ಅಲ್ಲಿ ತಿಳಿದುಕೊಂಡಿದ್ದೇವೆ. ಸಾಮಾನ್ಯವಾಗಿ ಶಾಲೆಗಳಲ್ಲಿ ಮೌಲ್ಯ ಶಿಕ್ಷಣಕ್ಕೆ ನಿಗದಿಪಡಿಸಿದ ತರಗತಿ ಇದೆ. ಸಣ್ಣ ವಯಸ್ಸಿನಿಂದಲೇ ಕಥೆಗಳ ಅಥವಾ ಪಾಠಗಳ ಮೂಲಕ ನೀತಿಗಳನ್ನು ಕಲಿಸಲಾಗುತ್ತದೆ. ಆದರೆ, ಇಲ್ಲಿ ಈ ಮೌಲ್ಯಗಳು ಮತ್ತು ಆದರ್ಶಗಳು ಆಚರಣೆಯಲ್ಲಿರುವುದನ್ನು ವಿದ್ಯಾರ್ಥಿಗಳಿಗೆ ಕಾಣುವಂತೆ ಮಾಡಲು ಪ್ರಯತ್ನಿಸಿದ್ದೇವೆ. ಮೌಲ್ಯಗಳು ಎಂದರೆ ನಮ್ಮ ಸಂವಿಧಾನದಲ್ಲಿ ಉಲ್ಲೇಖಿಸಿರುವ ವಿದ್ಯಾರ್ಥಿಗಳನ್ನು ಜವಾಬ್ದಾರಿಯುತ ನಾಗರಿಕರನ್ನಾಗಿ ಮಾಡಬಲ್ಲಂಥ ಮೌಲ್ಯಗಳು. ಇತರರ ಹಕ್ಕುಗಳನ್ನು ಅಳೆಯಬಲ್ಲ, ಯಾವುದು ಸರಿ ಎಂದೆನಿಸುತ್ತದೋ ಅದಕ್ಕಾಗಿ ಧ್ವನಿ ಎತ್ತಬಲ್ಲ – ಪ್ರಜೆಗಳನ್ನು ರೂಪಿಸುವ ಮೌಲ್ಯಗಳಾಗಿವೆ. ಇದಕ್ಕಾಗಿ ಶಾಲೆಯೊಂದು ಇಂತಹ ಅಭ್ಯಾಸಗಳನ್ನು ಪ್ರದರ್ಶಿಸಬೇಕು. ಎಲ್ಲರನ್ನು ಸಮಾನವಾಗಿ ಕಾಣುವ, ವಿಚಾರ ಮತ್ತು ಚರ್ಚೆಯ ಮೂಲಕ ಸಮಸ್ಯೆಗಳನ್ನು ಬಗೆಹರಿಸುವ, ಭಿನ್ನಾಭಿಪ್ರಾಯಗಳ ಹೊರತಾಗಿಯೂ ಎಲ್ಲರನ್ನು ಗೌರವಿಸುವ – ಇತ್ಯಾದಿ ಅಭ್ಯಾಸಗಳು ವಿದ್ಯಾರ್ಥಿಗಳಿಗೆ ಕಾಣಿಸಬೇಕು. ಮಕ್ಕಳು ಏನನ್ನು ಕಾಣುತ್ತಾರೋ ಅದನ್ನೇ ಕಲಿಯುತ್ತಾರೆ. ಹಾಗಾಗಿ, ತರಗತಿ ಕೊಠಡಿಯಾಗಲಿ, ಮೈದಾನವಾಗಲಿ, ಮಧ್ಯಾಹ್ನದ ಊಟದ ಸಮಯವಾಗಲಿ ಅಥವಾ ಶಾಲಾ ಸಭೆಗಳೇ ಆಗಲಿ– ಹೀಗೆ ನಾವು ಎಲ್ಲೆಡೆಯೂ ವಿದ್ಯಾರ್ಥಿಗಳು ಮೌಲ್ಯಗಳನ್ನು ನೋಡುವಂತಹ ಶಾಲಾ ಸಂಸ್ಕೃತಿಯನ್ನು ಬೆಳೆಸಬೇಕೆಂಬ ಉದ್ದೇಶವನ್ನು ಇರಿಸಿಕೊಂಡೆವು.

**ಸಂವಾದ ಸಂಸ್ಕೃತಿಯ ನಿರ್ಮಾಣ**

ಸಂವಾದ ಅಥವಾ ಸಂಭಾಷಣೆಯು ನಮ್ಮ ಆಲೋಚನೆಗಳನ್ನು ಸಂವಹನ ಮಾಡುವುದಕ್ಕೆ ಇರುವ ಸಾಧನ. ಮಾತುಕತೆಯ ಮೂಲಕ ಸಮಸ್ಯೆಗಳನ್ನು ಪರಿಹರಿಸುವ ಮಹತ್ವವನ್ನು ನಾವು ಗುರುತಿಸುವುದು ಅಗತ್ಯ. ನಾವು ಕಲಿಸುವ ಮೊದಲ ಮೂರು ತರಗತಿಗಳಲ್ಲಿ ಸಂವಾದ ಸಂಸ್ಕೃತಿಯನ್ನು ಅಭಿವೃದ್ಧಿ–ಪಡಿಸುವುದಕ್ಕಾಗಿ ಎಲ್ಲಾ ಶಿಕ್ಷಕರು ಸಾಕಷ್ಟು ಶ್ರಮಪಟ್ಟೆವು. 1ನೇ ತರಗತಿಯ ಮಕ್ಕಳು ಶಾಲಾ ವ್ಯವಸ್ಥೆಗೆ ಹೊಸಬರಾಗಿದ್ದರು. ಆದರೆ 2ನೇ ಮತ್ತು 3ನೇ ತರಗತಿಯ ವಿದ್ಯಾರ್ಥಿಗಳು ಈಗಾಗಲೇ ಶಿಸ್ತು ಮತ್ತು ಶಿಕ್ಷೆ ಪರಸ್ಪರ ಹೆಣೆದುಕೊಂಡ ವ್ಯವಸ್ಥೆಯ ಭಾಗವಾಗಿದ್ದರು. ಭಯರಹಿತ ವಾತಾವರಣದಲ್ಲಿ ಮಕ್ಕಳು ಕಲಿಯುವಾಗ ಅತ್ಯುತ್ತಮವಾಗಿ ಕಲಿಯುತ್ತಾರೆ ಎಂದು ನಾವು ನಂಬಿದೆವು. ಹಾಗಾಗಿ ಮಕ್ಕಳು ಸುತ್ತ ಓಡಿದಾಗ, ಪರಸ್ಪರ ಡಿಕ್ಕಿ ಹೊಡೆದಾಗ, ಕೆಟ್ಟಬಾಷೆ ಬಳಸಿದಾಗ, ತರಗತಿಯಲ್ಲಿ ಮಾತನಾಡಿದಾಗ ಬೊಬ್ಬೆ ಹಾಕಿ ಗದರಿಸುವ ಅಥವಾ ದಂಡಿಸುವ ಬದಲು ನಾವು ಅವರಲ್ಲಿ ಮಾತಿಗೆ ತೊಡಗಿದೆವು. ನಿಯಮ ಪಾಲಿಸದಿರುವ ಕುರಿತು ಕಾರಣ ಕೇಳಿದೆವು. ಮಕ್ಕಳು ಕೆಲವೊಮ್ಮೆ ಪ್ರತಿಕ್ರಿಯಿಸುತ್ತಿದ್ದರು ಅಥವಾ ಸುಮ್ಮನೆ ಇರುತ್ತಿದ್ದರು.

ಹೀಗೆ ಹೊಸದಾಗಿ ಕಂಡ ಸ್ವಾತಂತ್ರ್ಯ ಅವರನ್ನು ಸ್ವಲ್ಪ ವಿಚಲಿತಗೊಳಿಸಿತು. ಇದನ್ನು ಹೇಗೆ ನಿರ್ವಹಿಸಬೇಕು ಎಂದು ಅವರಿಗೆ ಗೊತ್ತಿರಲಿಲ್ಲ. ಕೆಲವು ವಿದ್ಯಾರ್ಥಿಗಳು ಇದರ ಲಾಭ ಪಡೆದುಕೊಂಡರು. ಯಾಕೆಂದರೆ ಅವರ ವಿರುದ್ಧ ಯಾರೂ ಬೊಬ್ಬೆ ಹಾಕುವುದಿಲ್ಲ ಎಂದೂ, ಅವರನ್ನು ಯಾರೂ ದಂಡಿಸುವುದಿಲ್ಲ ಎಂದೂ ಅವರಿಗೆ ಗೊತ್ತಿತ್ತು. ಇದು ಒಂದೆರಡು ತಿಂಗಳವರೆಗೆ

ಮುಂದುವರೆಯಿತು. ಒಂದು ಹಂತದಲ್ಲಿ, ನಿಯಮ ಅನುಸರಿಸುವುದರ ಬಗ್ಗೆ ನಾವು ಇಷ್ಟೊಂದು ಹೊತ್ತು ಮಾತನಾಡಿದರೆ ನನಗೆ ಪಠ್ಯಕ್ರಮ ಹೇಗೆ ಮುಗಿಸುವುದು ಎಂದು ನನಗೆ ಸೋಜಿಗವಾಯಿತು. ಆದರೂ ನಾವು ಅದನ್ನು ಸಾಧಿಸಿದ್ದೆವು. ಮೊಗಸಾಲೆಗಳಲ್ಲಾಗಲೀ, ತರಗತಿ ಕೊಠಡಿಗಳಲ್ಲಾಗಲೀ, ಮಧ್ಯಾಹ್ನದೂಟದ ವೇಳೆಯಾಗಲೀ, ಸಭೆಯಲ್ಲಾಗಲೀ ವಿದ್ಯಾರ್ಥಿಗಳು ಏನಾದರೂ ಅಡಚಣೆ ಮಾಡಿದಾಗ ನಾವು ಅವರಲ್ಲಿ ಮಾತನಾಡುತ್ತಿದ್ದೆವು. ಐದು ತಿಂಗಳು ಕಳೆದ ನಂತರ ಇದು ಹೇಗೆ ವಿದ್ಯಾರ್ಥಿಗಳ ಯೋಚನಾ ಪ್ರಕ್ರಿಯೆಯ ಮೇಲೆ ಪರಿಣಾಮ ಬೀರಿತು ಎನ್ನುವುದನ್ನು ಕಾಣಬಹುದಾಗಿತ್ತು. ಗೆಳೆಯರ ಜೊತೆಗೆ ಗಲಾಟೆಮಾಡುವುದರ ಬದಲು ಅವರು ತಮ್ಮ ಗೆಳೆಯರೊಂದಿಗೆ ಮಾತನಾಡಿ ಸಮಸ್ಯೆಗಳನ್ನು ತಮ್ಮತಮ್ಮಲ್ಲೇ ಬಗೆಹರಿಸ-ತೊಡಗಿದರು.

**ಜೊತೆಗೂಡಿ ನಿಯಮ ರೂಪಿಸುವುದು**

ನಾವು ನಮ್ಮ ಶಾಲೆಯಲ್ಲಿ ಸಂವಾದ ಸಂಸ್ಕೃತಿಯನ್ನು ಬೆಳೆಸುವುದಕ್ಕಾಗಿ ಕಾರ್ಯತತ್ಪರರಾದಾಗ ಶಿಸ್ತಿನ ಮಹತ್ವವನ್ನು ಗುರುತಿಸಿದೆವು. ಸ್ವಾತಂತ್ರ್ಯ ಮತ್ತು ಶಿಸ್ತು ಜೊತೆಗೂಡಿ ಕೆಲಸ ಮಾಡಬೇಕಿತ್ತು. ಅದರಲ್ಲಿ ಯಾವುದೂ ಇನ್ನೊಂದರ ಮೇಲೆ ಸವಾರಿ ಮಾಡುವಂತಿರಲಿಲ್ಲ. ಹಾಗಾಗಿ ಎಲ್ಲರಿಗೂ ಅನ್ವಯ ಆಗುವಂಥ ಸಾಮಾನ್ಯ ನಿಯಮಗಳ ರಚನೆಗಾಗಿ ಶ್ರಮಿಸಿದೆವು ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ಸ್ವೀಕರಿಸಬಾರದು, ಯಾರಾದರೂ ನಿಯಮ ಮುರಿದಾಗ ಏನು ಮಾಡಬೇಕು– ಇತ್ಯಾದಿ. ಇಂತಹ ನಿಯಮಗಳನ್ನು ನಾವು ಸಾಮಾನ್ಯ ಸಭೆಯಲ್ಲೇ ರೂಪಿಸಿದೆವು. ಸಾಮಾನ್ಯ ಸಭೆಗೆ ವಿದ್ಯಾರ್ಥಿಗಳು ಅನೇಕ ಹೊಸಹೊಸ ಆಲೋಚನೆಗಳೊಂದಿಗೆ ಬರುವುದರಿಂದ ಎಲ್ಲರೂ ಸೇರಿಕೊಂಡು ನಮ್ಮ ಶಾಲೆಯ ನಿಯಮಗಳನ್ನು ನಿರ್ಧರಿಸಿದೆವು. ಅನಂತರ ನಾವು ತರಗತಿ ನಿಯಮಗಳನ್ನು ಕೂಡ ರೂಪಿಸಿದೆವು. ಉತ್ತಮ ಕಲಿಕಾ ವಾತಾವರಣಕ್ಕಾಗಿ ಶಿಕ್ಷಕರು ಮತ್ತು ಮಕ್ಕಳು ಕೂಡಿ ಈ ನಿಯಮಗಳನ್ನು ಅನುಸರಿಸಬೇಕಾಗಿತ್ತು.

ನಾವು ಅದಾಗಲೇ ಸಂವಾದದ ಮಹತ್ವವನ್ನು ಸಾಧಿಸಿ ತೋರಿಸಿದ್ದೆವು. ಯಾವುದಾದರೂ ಮಗು ನಿಯಮ ಉಲ್ಲಂಘಿಸಿದರೆ ಉಳಿದ ಮಕ್ಕಳು ಆ ಮಗುವಿನ ಜೊತೆ ಮಾತನಾಡುತ್ತಿದ್ದರು. ಅವನು/ಅವಳು ಯಾಕೆ ಹಾಗೆ ಮಾಡಿದರು ಎಂದು ಕೇಳುತ್ತಿದ್ದರು. ಇದು ಶಿಕ್ಷಕರಿಗೂ ಅನ್ವಯವಾಗುತ್ತಿತ್ತು. ಶಿಕ್ಷಕರು ಕಟ್ಟಳೆ ಮೀರಿದರೆ ಮಕ್ಕಳು ಪ್ರಶ್ನಿಸುತ್ತಿದ್ದರು. ದಿನ ಕಳೆದಂತೆ, ಆರಂಭದಲ್ಲಿ ಪ್ರತಿಯೊಂದೂ ಗೊಂದಲಕಾರಿಯಾಗಿಯೇ ನಮಗೆ ಕಾಣಿಸಿತ್ತು. ಒಂದು ದಿನದಲ್ಲಿ ಒಬ್ಬ ವಿದ್ಯಾರ್ಥಿಯ ಬಗ್ಗೆ 15–20 ದೂರುಗಳನ್ನು ಸ್ವೀಕರಿಸಿದೆವು. ಆದರೆ ಅನಂತರ ಅದು ದಿನವೊಂದಕ್ಕೆ 2–4 ದೂರುಗಳಿಗೆ ಇಳಿಯಿತು. ಕೆಲವೊಮ್ಮೆ ಇಡಿಯ ತರಗತಿ ಒಂದು ಸಮಸ್ಯೆಯ ಚರ್ಚೆಯಲ್ಲೇ ಮುಗಿದು ಹೋಗುತ್ತಿತ್ತು. ಆದರೆ ಅನಂತರ ನಿಧಾನಕ್ಕೆ ಎಲ್ಲವೂ ಕ್ರಮಬದ್ಧವಾಗತೊಡಗಿತು. ಆರೇಳು ತಿಂಗಳ ಬಳಿಕ ಶಾಲೆಯಲ್ಲಿ ಶಿಕ್ಷಕರು ಮಾತ್ರವಲ್ಲ ವಿದ್ಯಾರ್ಥಿಗಳು ಕೂಡಾ ಕಲಿಕಾ ಪರಿಸರ (learning environment) ರೂಪಿಸುವ ನಿಟ್ಟಿನಲ್ಲಿ ಕೆಲಸ ಮಾಡಿದರು.

**ಜೀವನಕ್ಕಾಗಿ ಮೌಲ್ಯಗಳು**

ಕುಟುಂಬದ ಮತ್ತು ಸಮುದಾಯದ ನಂಬಿಕೆಗಳು ಮಕ್ಕಳ ಆಲೋಚನಾ ಪ್ರಕ್ರಿಯೆಯ ಮೇಲೆ ದುಷ್ಪರಿಣಾಮ ಬೀರುತ್ತವೆ. ಅದರ ಪರಿಣಾಮ ಎಷ್ಟರ ಮಟ್ಟಿಗೆ ಇರುತ್ತದೆ ಎಂದರೆ ಆ ಮಕ್ಕಳಿಗೆ ನಿಷ್ಪಕ್ಷಪಾತ ದೃಷ್ಟಿಕೋನದಲ್ಲಿ ಯಾವುದೇ ವಿಚಾರವನ್ನು ನೋಡುವುದಕ್ಕೆ ಕಷ್ಟವಾಗುತ್ತದೆ. ಜಾತಿ, ಬಣ್ಣ, ಲಿಂಗ ಮತ್ತು ಆರ್ಥಿಕ ಸ್ಥಾನಮಾನದ ಕುರಿತ ವಿದ್ಯಾರ್ಥಿಗಳ ನಂಬಿಕೆಗಳು ಸ್ಪಷ್ಟವಾಗಿ ನಮಗೆ ಕಾಣಿಸುತ್ತವೆ. ಮಕ್ಕಳು ಇನ್ನೊಂದು ಮಗುವಿನ ಚರ್ಮದ ಬಣ್ಣದ ಬಗ್ಗೆ ಸುಮ್ಮನೇ ಏನಾದರೂ ಹೇಳುತ್ತಾರೆ, ಇನ್ನೊಬ್ಬರ ಬಟ್ಟೆಗಳ ಮೂಲಕ ಅವರನ್ನು ಅಳೆಯುತ್ತಾರೆ. ಕೆಳಜಾತಿಯ ಮಗುವಿನೊಂದಿಗೆ ಮೇಲು ಜಾತಿಯ ಮಕ್ಕಳು ಗೆಳೆತನ ಬೆಳೆಸುವುದಿಲ್ಲ. ಅವರು ಅವರದ್ದೇ ಗುಂಪು ಕಟ್ಟಿಕೊಳ್ಳುತ್ತಾರೆ. ವಿರುದ್ಧ ಲಿಂಗದ ಮಕ್ಕಳನ್ನು ಗುಂಪಿನಲ್ಲಿ ಸೇರಿಸುವುದೇ ಇಲ್ಲ ಇತ್ಯಾದಿ.

ಇಂತಹ ಸಮಸ್ಯೆಗಳನ್ನು ನಾವು ಹೆಚ್ಚು ಕಡಿಮೆ ಪ್ರತಿದಿನ ಎನ್ನುವಂತೆ ಎದುರಿಸುತ್ತಲೇ ಇರುತ್ತೇವೆ. ಆಗ ನಾವು ಅದರ ಬಗ್ಗೆ ಅಲ್ಲಲ್ಲೇ ವಿದ್ಯಾರ್ಥಿಗಳಲ್ಲಿ ಮಾತನಾಡುತ್ತೇವೆ. ಧರ್ಮ ಮತ್ತು ಜಾತಿ ವ್ಯಕ್ತಿಯನ್ನು ಭಿನ್ನವ್ಯಕ್ತಿಯನ್ನಾಗಿ ಮಾಡುವುದಿಲ್ಲ ಎಂದು ಚರ್ಚಿಸುತ್ತೇವೆ. ಕೆಲವು ಮಕ್ಕಳು ಮನೆಯಲ್ಲಿ ಎದುರಿಸುತ್ತಿರುವ ಕಷ್ಟಗಳ ಬಗ್ಗೆ, ಹಾಗಿದ್ದರೂ ಕಲಿಕೆಗಾಗಿ ಅವರು ಹೇಗೆ ಹೆಚ್ಚಿನ ಪರಿಶ್ರಮಪಡುತ್ತಿದ್ದಾರೆ ಎನ್ನುವುದರ ಬಗ್ಗೆ ಮಾತನಾಡುತ್ತೇವೆ. ಮಧ್ಯಾಹ್ನದ ಊಟದಲ್ಲಿ ಮೊಟ್ಟೆಗಳನ್ನು ಸೇರಿಸಿದಾಗ, ಮೊಟ್ಟೆ ತಿನ್ನದ ಮಕ್ಕಳು ಸಿಂಡರಿಸಿಕೊಳ್ಳುತ್ತಾರೆ; ದೂರ ಕುಳಿತುಕೊಳ್ಳುತ್ತಾರೆ; ಕೆಲವರು ಮೊಟ್ಟೆ ತಿನ್ನುವವರ ಜೊತೆಗೆ ಮಾತನ್ನೇ ಬಿಟ್ಟು ಬಿಡುತ್ತಾರೆ. ಇಂತಹ ವಿಷಯಗಳನ್ನು ಶಿಕ್ಷಕರು ಸಭೆಯಲ್ಲಿ, ತರಗತಿ ಕೊಠಡಿಯಲ್ಲಿ ಮತ್ತು ವೈಯಕ್ತಿಕವಾಗಿ ಮಕ್ಕಳ ಜೊತೆಗೆ ಮಾತನಾಡುತ್ತಾರೆ. ಇತರರು ಮಾಡುವ ಆಯ್ಕೆಯನ್ನು ಗೌರವಿಸಬೇಕು ಎಂಬ ಮೌಲ್ಯದ ಕಡೆಗೆ ಗಮನ ಕೇಂದ್ರೀ-ಕರಿಸುತ್ತೇವೆ. ಇದಕ್ಕೆ ಅತ್ಯುತ್ತಮ ಉದಾಹರಣೆ ನೀಡುವುದಕ್ಕಾಗಿ, ಮಧ್ಯಾಹ್ನದ ಊಟದ ಹೊತ್ತಿಗೆ, ಮೊಟ್ಟೆ ತಿನ್ನದ ಶಿಕ್ಷಕರು ಮೊಟ್ಟೆ ತಿನ್ನುವ ವಿದ್ಯಾರ್ಥಿಗಳ ಸಾಲಿನಲ್ಲಿ ಕುಳಿತುಕೊಳ್ಳುತ್ತಾರೆ. ನಂತರ ಕ್ರಮೇಣ ವಿದ್ಯಾರ್ಥಿಗಳೂ ಒಂದೇ ಸಾಲಿಗೆ ಬರುತ್ತಾರೆ. ಕೆಲವು ತಿಂಗಳ ನಂತರ ಅಲ್ಲಿ ಆಹಾರಕ್ಕೆ ಪ್ರತ್ಯೇಕ ಸಾಲು ಎನ್ನುವುದು ಇರುವುದಿಲ್ಲ. ಎಲ್ಲರೂ ಒಟ್ಟಿಗೇ ಕುಳಿತು ಊಟ ಮಾಡುತ್ತಾರೆ. ಇದಕ್ಕೆ ಬಹಳಷ್ಟು ಸಮಯ ಬೇಕು. ತಾಳ್ಮೆ ಮತ್ತು ಶ್ರಮ ಬೇಕು. ಆದರೆ ನಂತರ ಅಂತಿಮವಾಗಿ ವಿದ್ಯಾರ್ಥಿಗಳು ಇತರರ ದಾರಿಗಳನ್ನು, ವ್ಯತ್ಯಾಸಗಳನ್ನು ಗೌರವಿಸುವುದಕ್ಕೆ ಶುರುಮಾಡುತ್ತಾರೆ.

**ಒಂದು ಸಮಗ್ರ ಘಟಕವಾಗಿ ಪ್ರಜಾಪ್ರಭುತ್ವ**

ಹೆಚ್ಚಿನ ಸಂದರ್ಭಗಳಲ್ಲಿ ಪ್ರಾಥಮಿಕ ತರಗತಿಗಳನ್ನು ನೋಡಿದಾಗ, ಶಿಕ್ಷಕರು ಇಡಿಯ ಪ್ರಕ್ರಿಯೆಗೆ ನೇತೃತ್ವ ವಹಿಸುತ್ತಿರುವುದನ್ನು ಗಮನಿಸಿದೆವು. ಪ್ರಾಥಮಿಕ ಶಾಲೆಯು ಮಕ್ಕಳಿಗೆ ಅಡಿಪಾಯದ ಹಂತವಾಗಿದ್ದು, ಅಲ್ಲಿ ಪ್ರಜಾಪ್ರಭುತ್ವ, ಸಮಾನತೆ, ಇನ್ನೊಬ್ಬರ ಬಗ್ಗೆ ಗೌರವ– ಇವುಗಳ ಮಹತ್ವವನ್ನು ವಿದ್ಯಾರ್ಥಿಗಳು ಗುರುತಿಸುವಂತೆ ಬೆಳೆಸಬೇಕಾಗಿದೆ. ಶಿಕ್ಷಕರಾಗಲೀ ಅಥವಾ ಕೇವಲ ಕೆಲವೇ ವಿದ್ಯಾರ್ಥಿ–ಗಳಾಗಲೀ ತರಗತಿ ಪ್ರಕ್ರಿಯೆಗಳಲ್ಲಿ ನಾಯಕತ್ವ ವಹಿಸದಂತಹ ವ್ಯವಸ್ಥೆ ನಿರ್ಮಿಸುವುದಕ್ಕೆ ನಾವು ಪ್ರಯತ್ನಪಟ್ಟಿದ್ದೇವೆ ಮತ್ತು ಪ್ರತಿಯೊಬ್ಬರೂ ಭಾಗವಹಿಸುವಂತಹ ವಾತಾವರಣ ನಿರ್ಮಿಸಿದ್ದೇವೆ.

ಅಧ್ಯಾಪಕರೂ ಸೇರಿದಂತೆ ಪ್ರತಿಯೊಬ್ಬರೂ ಮಾತನಾಡುವುದಕ್ಕೆ ತಮ್ಮ ಸರದಿಗಾಗಿ ಕಾಯಲೇಬೇಕು. ಬೇರೆ ಯಾರಾದರೂ ಮಾತನಾಡುತ್ತಿದ್ದರೆ ಅವರಿಗೆ ಅಡೆತಡೆ ಮಾಡದೆ ಮೊದಲು ಕೈಯನ್ನು ಮೇಲೆತ್ತಬೇಕು ಎನ್ನುವುದು ನಮ್ಮ ನಿಯಮದ ಭಾಗವಾಗಿತ್ತು. ಪ್ರತಿಯೊಬ್ಬರ ಮಾತನ್ನೂ ಕೇಳಬೇಕು ಮತ್ತು ಎಲ್ಲಾದರೂ ಅಭಿಪ್ರಾಯ ಭೇದಗಳಿದ್ದರೆ ನಾವು ಕಾರಣಗಳನ್ನು ಕೇಳಬೇಕು. ಯಾರನ್ನು ಒಪ್ಪಬೇಕು ಎಂದು ವಿದ್ಯಾರ್ಥಿಗಳೇ ನಿರ್ಧರಿಸಲಿ ಎಂಬುದಾಗಿದೆ.. ಎಲ್ಲವೂ ತಮಗೆ ಗೊತ್ತು, ಸದಾ ತಾನು ಮಾತನಾಡಬೇಕು, ಮತ್ತು ಮೊದಲು ಉತ್ತರ ಹೇಳಬೇಕು ಎಂದು ಭಾವಿಸಿದ್ದ ವಿದ್ಯಾರ್ಥಿಗಳು ಇದರಿಂದ ಸರಿಯಾದ ಪಾಠ ಕಲಿತರು. ಅವರು ತಮ್ಮ ಸರದಿಗೆ ಕಾಯುವುದನ್ನು, ಇತರರನ್ನು ಗೌರವಿಸುವುದನ್ನು ಮತ್ತು ತಮ್ಮ ತಪ್ಪನ್ನು ತಿದ್ದಿಕೊಳ್ಳುವುದನ್ನು ಕಲಿತರು.

ತರಗತಿಗಳನ್ನು ನಿರ್ವಹಿಸುವುದಕ್ಕಾಗಿ ಶಿಕ್ಷಕರು ನಿರ್ವಾಹಕರನ್ನು ನಿರ್ಧರಿಸುವುದಿಲ್ಲ. ಅದರ ಬದಲಾಗಿ ಅಲ್ಲಿ ಚರ್ಚೆಗಳು ಇರುತ್ತವೆ ಮತ್ತು ತರಗತಿಯ ಮಾನಿಟರ್ ಸ್ವಯಂ ಸೇವೆ ಮಾಡುವುದಕ್ಕೆ ಯಾರು ತಯಾರಿದ್ದೀರಿ ಎಂದು ಅಧ್ಯಾಪಕರು ಕೇಳುತ್ತಿರುತ್ತಾರೆ. ನಾಮನಿರ್ದೇಶನ ಪಡೆದ ನಂತರ, ವಿದ್ಯಾರ್ಥಿಗಳ ವರ್ತನೆ, ಹೊಣೆಗಾರಿಕೆ ಇತ್ಯಾದಿಯ ಆಧಾರದಲ್ಲಿ ತರಗತಿಗಳ ಮೇಲ್ವಿಚಾರಕ ಯಾರು ಆಗಬೇಕೆಂದು ತರಗತಿ ನಿರ್ಧರಿಸುತ್ತದೆ. ಪ್ರತೀ ಎರಡು ತಿಂಗಳಿಗೊಮ್ಮೆ ಈ ಪ್ರಕ್ರಿಯೆಯ ಮೂಲಕ ಮೇಲ್ವಿಚಾರಕರನ್ನು ಬದಲಿಸಲಾಗುತ್ತದೆ.

ಶಾಲೆಯ ಅತ್ಯುತ್ತಮ ನಿರ್ವಹಣೆಗಾಗಿ ನಾವು ಕಲಿಕೆ, ಮಧ್ಯಾಹ್ನದ ಊಟ, ಗ್ರಂಥಾಲಯ, ಅಸೆಂಬ್ಲಿ ಮುಂತಾದ ವಿವಿಧ ಸಮಿತಿಗಳನ್ನು ಮಾಡಿದೆವು. ವಿದ್ಯಾರ್ಥಿಗಳಿಗೆ ಈ ಸಮಿತಿಗಳ ಕಾರ್ಯ-ನಿರ್ವಹಣೆಯ ಜವಾಬ್ದಾರಿಯನ್ನು ಕೊಡಲಾಯಿತು. ಪ್ರತಿಯೊಂದು ಸಮಿತಿಯಲ್ಲಿ 10-12 ಚುನಾಯಿತ ವಿದ್ಯಾರ್ಥಿಗಳು ಇರುತ್ತಿದ್ದರು. ಪಿಡುಗಿನ ಕಾರಣಕ್ಕೆ ಶಾಲೆ ಮುಚ್ಚುವ ಮುನ್ನ ಮಕ್ಕಳು ಪ್ರಚಾರಾಂದೋಲನ ಆರಂಭಿಸಿದ್ದರು. ಅಭ್ಯರ್ಥಿಗಳು ತಮ್ಮ ಚಿಹ್ನೆಗಳನ್ನು ತೋರಿಸುವುದಕ್ಕಾಗಿ ಎಲ್ಲಾ ತರಗತಿಗಳಿಗೆ ತೆರಳಿದ್ದರು. ಆ ಮೂಲಕ ತಾವು ಮುಂದೆ ಏನು ಮಾಡುತ್ತೇವೆ ಎಂದು ವಿವರಿಸಿದರು. ನಿಷ್ಪಕ್ಷ ಆಯ್ಕೆ ಪ್ರಕ್ರಿಯೆ ಎಂದರೇನು ಎಂದು ತಿಳಿದುಕೊಳ್ಳುವುದಕ್ಕೆ ಅಧ್ಯಾಪಕರು ಸಹಾಯ ಮಾಡಿದರು. ಹೇಗೆ ಪ್ರಜಾಪ್ರಭುತ್ವಾತ್ಮಕ ಪ್ರಕ್ರಿಯೆ ವ್ಯವಸ್ಥೆಯ ಉತ್ತಮ ನಿರ್ವಹಣೆಗೆ ಕಾರಣವಾಗುತ್ತದೆ ಎಂದು ಅರ್ಥೈಸಲು ಶಿಕ್ಷಕರು ನೆರವಾದರು. ಶಾಲೆ ಪುನರಾರಂಭ ಆದ ಕೂಡಲೇ ನಾವು ಇದನ್ನು ಮುಂದುವರಿಸುವೆವು.

ಎಲ್ಲಾ ಶಿಕ್ಷಕರೂ ಜತೆಯಾಗಿಯೇ ಕೆಲಸ ಮಾಡಿದೆವು. ಚರ್ಚಿಸಿದೆವು. ವಿದ್ಯಾರ್ಥಿಗಳ ವೈಯಕ್ತಿಕ ಮತ್ತು ತರಗತಿಯ ದಾಖಲೆಗಳನ್ನು ಇರಿಸಿಕೊಂಡೆವು. ಹಾಗಾಗಿ ಯಾರಿಗೆ ಮಾರ್ಗದರ್ಶನ ಬೇಕು, ಯಾವ ವಿಷಯದಲ್ಲಿ ಬೇಕು ಎನ್ನುವುದು ನಮಗೆ ನಿಖರವಾಗಿ ಗೊತ್ತಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಶಿಕ್ಷಕರು ತಾಳ್ಮೆಯಿಂದ ಇರುವುದನ್ನು ಕಲಿತರು ಮತ್ತು ವಿದ್ಯಾರ್ಥಿಗಳು ಪ್ರಜಾಪ್ರಭುತ್ವಾತ್ಮಕ ನೆಲೆಯಲ್ಲಿ ವರ್ತಿಸುವುದನ್ನು ಕಲಿತರು. ಮಕ್ಕಳಿಗೆ ವಾತ್ಸಲ್ಯ ಹೇಳಿಕೊಡುವುದಕ್ಕೆ ನಾವು ಕೇವಲ ಪಾಠಯೋಜನೆಯನ್ನು ಅವಲಂಬಿಸಿಬೇಕಾಗಿರಲಿಲ್ಲ. ಅದಕ್ಕಾಗಿ ನಮಗೆ ಎಲ್ಲಿ ಸಾಧ್ಯವೋ ಅಲ್ಲೆಲ್ಲಾ ಅವಕಾಶ ಕಂಡುಕೊಂಡೆವು ಶೈಕ್ಷಣಿಕ ವಸ್ತುವಿನ ನೆಲೆಯಲ್ಲಿ ನಾವು ಮೌಲ್ಯಗಳನ್ನು ಸೂಕ್ಷ್ಮವಾಗಿ ಚರ್ಚಿಸಿದೆವು. ಸಣ್ಣ ಸಣ್ಣ ವಿಷಯಗಳಲ್ಲೂ ಅನುಭೂತಿ, ತಂಡದ ಉತ್ಸಾಹ, ಪ್ರೀತಿ, ಕಾಳಜಿಗಳನ್ನೆಲ್ಲ ತೋರಿದೆವು. ಅತ್ಯುತ್ತಮ ಮಾನವಜೀವಿ ಮತ್ತು ಜವಾಬ್ದಾರಿಯುತ ಪ್ರಜೆ ಆಗುವುದಕ್ಕೆ ಬೇಕಾದ ಎಲ್ಲ ಬಗೆಯ ಮಾರ್ಗದರ್ಶನ ನೀಡುವಲ್ಲಿ ನಮ್ಮ ಪ್ರಯತ್ನ ಮುಂದುವರಿಸಿದೆವು.

**ಪರಿಸ್ಥಿತಿಯ ನಿರ್ವಹಣೆ: ಕೆಲವು ಉದಾಹರಣೆಗಳು**

**ಕಳ್ಳತನದ ಸಂದರ್ಭ**

ಸಭೆಯ ಸಂದರ್ಭದಲ್ಲಿ ನಾವು ಹಣ ಅಥವಾ ವಸ್ತು ಕದಿಯುವ ಮತ್ತಿತರ ಹವ್ಯಾಸಗಳ ಬಗ್ಗೆ ಮತ್ತು ಅದು ಮನಸ್ಸಿನ ಮೇಲೆ ಎಂತಹ ದುಷ್ಪರಿಣಾಮ ಬೀರುತ್ತದೆ ಎನ್ನುವುದರ ಬಗ್ಗೆ ಚರ್ಚಿಸಿದೆವು. ಅದು ಹೇಗೆ ಹವ್ಯಾಸವಾಗಿ ಪರಿಣಮಿಸುತ್ತದೆ. ಅನಂತರ ಅದನ್ನು ಬದಲಿಸಲು ಹೇಗೆ ಕಷ್ಟ ಆಗುತ್ತದೆ ಎನ್ನುವುದರ ಬಗೆಗೆ ಮಾತುಕತೆ ನಡೆಸಿದೆವು. ಕಳ್ಳತನದ ಹವ್ಯಾಸ ಇರುವ ಗೆಳೆಯರನ್ನು ಗಳಿಸಿದ್ದರ ಬಗ್ಗೆ ವಿದ್ಯಾರ್ಥಿಗಳು ತಮ್ಮ ಅನುಭವ ಹಂಚಿಕೊಂಡರು. ಇದನ್ನು ನಾನು ಹೀಗೆ ನಿರ್ವಹಿಸಿದೆ- ತನ್ನ ಗೆಳೆಯರಿಗೆ ಚಾಕೊಲೇಟ್ ಕೊಡಿಸುವುದಕ್ಕಾಗಿ ಒಬ್ಬಳು ಮನೆಯಿಂದ ಹಣ ಕದ್ದಳು ಎನ್ನುವುದು ನನಗೆ ಗೊತ್ತಾಯಿತು. ಅವಳ ಹೆಸರನ್ನು ಉಲ್ಲೇಖಿಸದೇ, ಹೆತ್ತವರ ಜತೆಗೆ ಅನುಭವ ಹಂಚಿಕೊಳ್ಳುವ ಮತ್ತು ತಮಗೆ ಅಗತ್ಯವಾದದನ್ನು ಅವರಲ್ಲಿ ಕೇಳಿಕೊಳ್ಳುವ ಕುರಿತು ಸಾಧಾರಣ ಸಂವಾದ ನಡೆಸಿದೆವು. ನಂತರ ನಾನು ಆ ಮಗುವಿನ ಜತೆಗೆ ಮಾತನಾಡಿದೆ. ಈ ಹವ್ಯಾಸ ಉಂಟುಮಾಡುವ ಕೆಟ್ಟ ಪರಿಣಾಮದ ಕುರಿತು ಅವಳಿಗೆ ವಿವರಿಸಲು ಯತ್ನಿಸಿದೆ. ತಾನು ಕೇಳದೇ ಹಣ ತೆಗೆದುಕೊಳ್ಳುತ್ತೇನೆ ಎನ್ನುವುದನ್ನು ಆಕೆ ಒಪ್ಪಿಕೊಂಡಳು. ಮುಂದೆ ಈ ರೀತಿ ಮಾಡುವುದಿಲ್ಲ ಎಂದು ಹೇಳಿದಳು.

**ಇತರರಿಗೆ ನೆರವು**

ಇತರ ಮಕ್ಕಳಿಗೆ ಸಹಾಯ ಮಾಡದ ಮಕ್ಕಳ ಬಗ್ಗೆ ನಮಗೆ ದೂರು ಬರುತ್ತವೆ. ನೆರವು ನೀಡದ ವಿದ್ಯಾರ್ಥಿಗಳ ಜತೆಗೆ ಮಾತನಾಡದೆ ಯಾಕೆ ನನ್ನ ಬಳಿ ಬಂದಿರಿ ಎಂದು ನಾನು ಕೇಳುತ್ತೇನೆ. ಸುಧಾರಿಸಿಕೊಳ್ಳಬೇಕಾದ ವಲಯದ ಕುರಿತು ಅವರ ಗಮನಕ್ಕೆ ತರುವುದು ಕೆಟ್ಟ ಕೆಲಸ ಅಲ್ಲ ಎಂದೂ ನಾನು ಸೇರಿಸಿ ಹೇಳಿದೆ. ಉತ್ತಮ ಮನುಷ್ಯರಾಗುವುದಕ್ಕೆ ಪ್ರತಿಯೊಬ್ಬರೂ ವಿಚಾರಗಳನ್ನು ಹಂಚಿಕೊಳ್ಳಬೇಕು ಮತ್ತು ಪರಸ್ಪರ ಸಹಾಯ ಮಾಡಬೇಕು. ನಾವು ಅಧ್ಯಾಪಕರು ಹೇಗೆ ಈ ರೀತಿ ಮಾಡುತ್ತೇವೆ ಎಂದು ನಾನು ಅವರಿಗೆ ಹೇಳಿದೆ. ನಮಗೆ ನಮ್ಮದೇ ಭಿನ್ನಾಭಿಪ್ರಾಯಗಳಿವೆ. ಆದರೆ ಪ್ರತಿಯೊಬ್ಬನ ಸುಧಾರಣೆಗೆ ನಾವು ಅಭಿಪ್ರಾಯ ಹಂಚಿಕೊಳ್ಳ-ಬೇಕಾಗಿದೆ ಮತ್ತು ಸಹಾಯ ಕೇಳಬೇಕಾಗಿದೆ ನಾವು ರಚನಾತ್ಮಕ ಪ್ರತಿಕ್ರಿಯೆಯ ಬಗೆಗೂ ಮಾತನಾಡುತ್ತೇವೆ. ಇನ್ನೊಬ್ಬರಿಗೆ ನೋವಾಗದ ಹಾಗೆ ಇದನ್ನು ಹೇಗೆ ಮಾಡಬಹುದು ಎಂದು ನಾವು ಮಾತನಾಡುತ್ತೇವೆ.

**ದಯೆಯ ಬಗೆಗೆ**

ಪ್ರತಿಯೊಬ್ಬ ಮಕ್ಕಳ ವರ್ತನೆಯಲ್ಲಿ ಬದಲಾವಣೆ ತರಬೇಕೆಂದು ತರಗತಿಯ ಆಸನ ವ್ಯವಸ್ಥೆಯನ್ನು ಬದಲಾಯಿಸಲಾಯಿತು. ಈಗ ಅವರು ವೃತ್ತಾಕಾರದಲ್ಲಿ ಕುಳಿತುಕೊಳ್ಳುತ್ತಾರೆ. ನಮ್ಮ ತರಗತಿಯಲ್ಲಿ ಚರ್ಚೆಗಳನ್ನು ನಡೆಸುತ್ತಿದ್ದಾಗ ಕೆಲವರು ಒಂದು ಮಗುವಿನ ಹೆಸರು ಹೇಳಿ, ಅವನಿಗೆ ಈ ಪರಿಕಲ್ಪನೆ ಗೊತ್ತಿಲ್ಲ ಎಂದರು(ಕೆಲವು ವಿದ್ಯಾರ್ಥಿಗಳ ಬಗ್ಗೆ ಕೂಡ ಟೀಕೆಗಳಿದ್ದವು). ಈ ವಿದ್ಯಾರ್ಥಿಗಳು ಯಾಕೆ ಕಲಿಕೆಯಲ್ಲಿ ಕಷ್ಟಪಡುತ್ತಾರೆ, ಇತರರಿಗೆ ಗೊತ್ತಿಲ್ಲದ ಮತ್ತು ಅವರಿಗೇ ಗೊತ್ತಿರುವ ವಿಚಾರಗಳು ಏನೇನು ಇವೆ ಎಂದು ನಾವು

ಎಂದು ಸುದೀರ್ಘ ಚರ್ಚೆ ನಡೆಸಿದೆವು. ಈ ನಿರ್ದಿಷ್ಟ ಮಗುವಿನ ಕುಟುಂಬಿಕ ಹಿನ್ನೆಲೆಯ ಬಗ್ಗೆ ನಾವು ಮಾತನಾಡಿದೆವು. ಅದರ ಹೊರತಾಗಿಯೂ ಆ ಮಗು ಇಷ್ಟೊಂದು ದೂರ ಬಂದು ತನ್ನ ಬರವಣಿಗೆ ಕೌಶಲ, ವಸ್ತುಗಳ ಅರ್ಥೈಸುವಿಕೆ, ವರ್ತನೆ ಇತ್ಯಾದಿ ಅನೇಕ ವಿಚಾರಗಳಲ್ಲಿ ಹೇಗೆ ಸುಧಾರಿಸಿಕೊಂಡಿತು ಎನ್ನುವುದನ್ನು ಮುಖ್ಯವಾಗಿ ನಾವು ಸಮಾಲೋಚಿಸಿದೆವು.

ನಾವು ಇನ್ನೊಬ್ಬ ಮಗುವಿನ ಬಗ್ಗೆ, ಅವನ ಮನೆಯ ಬಗ್ಗೆ ಮತ್ತು ಆತನ ಕುಟುಂಬಕ್ಕೆ ನೆರವಾಗಲು ಆತನ ತಾಯಿ ಹೇಗೆ ಕಷ್ಟಪಟ್ಟು ಕೆಲಸಮಾಡುತ್ತಾರೆ ಎನ್ನವುದರ ಕುರಿತು ಮಾತನಾಡಿದೆವು. ಯಾರ ಬಗೆಗಾದರೂ ಏನನ್ನೇ ಹೇಳುವುದಕ್ಕೆ ಮುನ್ನ ನಾವು ಯೋಚಿಸಬೇಕು. ಯಾಕೆಂದರೆ ದುಡಿಮೆಗಾಗಿ ಅವರೆಷ್ಟು ಕಷ್ಟಪಡುತ್ತಿದ್ದಾರೆ ಎನ್ನುವುದು ನಮಗೆ ಗೊತ್ತಿರುವುದಿಲ್ಲ. ನಾವು ನಮ್ಮ ಗೆಳೆಯರಿಗೆ ಸಹಾಯ ಮಾಡಬೇಕು. ಮುಖ್ಯವಾಗಿ (ಮೂಲಭೂತ ಕಲಿಕೆ ಮತ್ತು ಗಣಿತದಲ್ಲಿ ಕಷ್ಟಪಡುತ್ತಿರುವ– ಉ1) ವಿದ್ಯಾರ್ಥಿಗಳಿಗೆ ಚೆನ್ನಾಗಿ ಕಲಿಯಲು ಮತ್ತು ವೇಗವಾಗಿ ಕಲಿಯಲು ನೆರವು ನೀಡಬೇಕು. ನಾವು ಈಗಾಗಲೇ ತಿಳಿದುಕೊಂಡಿರುವುದನ್ನು ಅವರಿಗೆ ಕಲಿಸುವ ಮೂಲಕ ಉತ್ತಮ ಗೆಳೆಯರಾಗಬಹುದು.

**ಗೇಲಿ ಮಾಡುವ ಬಗ್ಗೆ**

ಸಭೆಯ ಹೊತ್ತಿಗೆ ರಾಘವ ಅಳುತ್ತಿದ್ದುದನ್ನು ನೋಡಿದೆ. ಏನು ಆಯಿತು ಎಂದು ಅವನಲ್ಲಿ ಕೇಳಿದೆ. ತಾನು ಹೊಳೆಯುವ ಲಿಪ್‌ಬಾಮ್ ಅನ್ನು ತುಟಿಗೆ ಹಚ್ಚಿರುವುದಾಗಿ ಹೇಳಿದ. ಆದರೆ ಸಹಪಾಠಿಗಳು ತಾನು ಲಿಪ್‌ಸ್ಟಿಕ್ ಹಚ್ಚಿ ಹುಡುಗಿಯ ರೀತಿ ಕಾಣಿಸುತ್ತಿದ್ದೇನೆಂದು ಹೇಳುತ್ತಿದ್ದಾರೆ ಎಂದೂ ವಿವರಿಸಿದ. ಅದರಲ್ಲಿ ಅಳುವುದಕ್ಕೆ ಏನಿದೆ ಎಂದು ನಾನು ಕೇಳಿದೆ. ಹುಡುಗಿ ಆಗುವುದು ಕೆಟ್ಟದ್ದೇ ಅಥವಾ ಲಿಪ್‌ಬಾಮ್ ಹಚ್ಚುವುದು ಕೆಟ್ಟದ್ದೇ ಎಂದು ನಾವು ಸುದೀರ್ಘ ಚರ್ಚೆ ಮಾಡಿದೆವು. ಲಿಪ್‌ಬಾಮ್/ಲಿಪ್‌ಸ್ಟಿಕ್ ಹಚ್ಚುವಿಕೆ ಯಾರನ್ನೂ ಗಂಡಸೋ ಅಥವಾ ಹೆಂಗಸೋ ಮಾಡುವುದಿಲ್ಲ ಎಂದು ನಾವು ಮಕ್ಕಳಿಗೆ ಹೇಳಿದೆವು. ಮಹಿಳೆ ಮಾತ್ರ ಲಿಪ್‌ಸ್ಟಿಕ್ ಹಾಕುತ್ತಾರೆ ಎಂದು ಯಾಕೆ ಯೋಚಿಸುತ್ತೀರಿ. ಜಗತ್ತಿನಲ್ಲಿ ಮತ್ತು ನಮ್ಮ ದೇಶದಲ್ಲಿ ಮೇಕ್ ಅಪ್ ಮಾಡುವ, ಮಹಿಳೆಯ ಉಡುಗೆ ತೊಡುವ ಗಂಡಸರೂ ಇದ್ದಾರೆ. ಅವರಿಗೆ ಇಷ್ಟ ಆದ ಕಾರಣಕ್ಕೆ ಅವರು ಅದನ್ನು ತೊಡುತ್ತಾರೆ ಇಂತಹ ಸಣ್ಣ ವಿಚಾರಕ್ಕೆ ಯಾರೂ ಅಳಬಾರದೆಂದು ನಾವು ಒತ್ತಿ ಹೇಳಿದೆವು. ಕುತೂಹಲ ಇದ್ದರೆ ರಾಘವನಲ್ಲಿ ಕೇಳಬಹುದು. ಆದರೆ ಹಾಗಂತ ಗೇಲಿ ಮಾಡಬಾರದು. ಇನ್ನೊಬ್ಬರಿಗೆ ನೋವಾಗುವ ಮಾತು ಹೇಳಬಾರದು ಎಂದು ಗೇಲಿ ಮಾಡಿದ ಹುಡುಗಿಗೆ ಹೇಳಿದೆವು.

**ಸಾಮಾನ್ಯ ಸಾರ್ವಜನಿಕ ಸ್ವತ್ತುಗಳ ಬಗ್ಗೆ ಗೌರವ.**

ಪ್ರತಿ ತರಗತಿಯಲ್ಲೂ ನಾವು ಗ್ರಂಥಾಲಯ ವಿಭಾಗವನ್ನು ಹೊಂದಿದ್ದೇವೆ. ಅಲ್ಲಿ ನಾವು ಪುಸ್ತಕಗಳನ್ನು ಹಗ್ಗದ ಮೇಲೆ ನೇತು ಹಾಕುತ್ತೇವೆ. ಒಂದು ದಿನ ಮಗುವೊಂದು, ಇಬ್ಬರು ಮಕ್ಕಳು ಪುಸ್ತಕ ಎಸೆಯುತ್ತಿದ್ದಾರೆ ಎಂದು ಹೇಳಿತು. ಯಾಕೆ ಪುಸ್ತಕ ಬಿಸಾಡುತ್ತೀರಿ ಎಂದು ಅವರಲ್ಲಿ ನಾನು ಕೇಳಿದೆ. ಪುಸ್ತಕಗಳನ್ನು ಸ್ವಸ್ಥಾನದಲ್ಲಿ ಇರಿಸಲು ವಿದ್ಯಾರ್ಥಿಗಳು ಮಾಡುವ ಪ್ರಯತ್ನದ ಕುರಿತು ಹೇಳಿ, ನೀವು ಪುಸ್ತಕ ಎಸೆದಿರುವುದನ್ನು ನೋಡಿದರೆ ಅವರಿಗೆ ಏನನ್ನಿಸಬಹುದು ಎಂದು ಕೇಳಿದೆ. ನಂತರ ನಾನು ಎಲ್ಲ ಪುಸ್ತಕಗಳನ್ನು ತೆಗೆದುಕೊಂಡೆ. ನಮ್ಮಲ್ಲಿರುವ ಸಂಪನ್ಮೂಲಗಳನ್ನು ನಾವು ಗೌರವಿಸದಿದ್ದರೆ ಇನ್ನು ಮುಂದೆ ತರಗತಿಯಲ್ಲಿ ಪುಸ್ತಕಗಳು ಇರುವುದಿಲ್ಲ ಎಂದು ಹೇಳಿದೆ. ನಮ್ಮ ತರಗತಿಯನ್ನು ಚೆನ್ನಾಗಿ ಇರಿಸಿಕೊಳ್ಳುವುದು ನಮ್ಮ ಕರ್ತವ್ಯವಾದುದರಿಂದ ನಮಗೆ ಸಿಕ್ಕ ವಸ್ತುಗಳ ಬಗೆಗೆ ನಾವು ಕಾಳಜಿ ವಹಿಸಬೇಕು. ಮತ್ತೆ ಪುಸ್ತಕಗಳನ್ನು ವಾಪಸ್ ಕೊಂಡೊಯ್ಯಲೇ ಎಂದು ಆ ಬಾಲಕರಲ್ಲಿ ನಾನು ಕೇಳಿದೆ. ತಮ್ಮ ಬೇಜವಾಬ್ದಾರಿಯನ್ನು ಒಪ್ಪಿಕೊಂಡ ಆ ಮಕ್ಕಳು, ಪುಸ್ತಕಗಳನ್ನೆಲ್ಲ ಪುನಃ ಗೋಡೆಯ ಮೇಲೆ ಇರಿಸಿದರು.

**ಕ್ರೌರ್ಯಭರಿತ ಆನ್‌ಲೈನ್ ಆಟಗಳ ಕುರಿತು**

ತರಗತಿಯಲ್ಲಿ ಕೆಲವು ಹುಡುಗರು ಪಬ್ಜಿ (PubG) ಆಡುವಂತೆ ಕಾಣಿಸುತ್ತಾರೆ ಎಂದು ಸುರೇಶ್ ಉಲ್ಲೇಖಿಸಿದನು. ಹಾಗಾಗಿ ಯಾರೆಲ್ಲ ಆಡುತ್ತಿದ್ದಾರೆ ಎಂದು ನಾನು ಕೇಳಿದೆ. ಮೊದಲು ಸುರೇಶ್ ಕೇವಲ ಎರಡು ಹೆಸರನ್ನು ಪ್ರಸ್ತಾಪಿಸಿದ್ದನು. ಆದರೆ ಯಾರೆಲ್ಲ ಆಡುತ್ತಿದ್ದೀರಿ ಅವರೆಲ್ಲ ಸ್ವಯಂ ಪ್ರೇರಣೆಯಿಂದ ಎದ್ದು ನಿಂತುಕೊಳ್ಳಿ ಎಂದಾಗ ಹೆಚ್ಚಿನವರು ಎದ್ದು ನಿಂತರು. ನೀವು ನಿಮ್ಮ ಗೆಳೆಯರ ಕಡೆಗೆ ಬಂದೂಕಿನ ಗುರಿಯಿಟ್ಟು ಕೊಲ್ಲುತ್ತೀರಾ ಎಂದು ಕೇಳಿದೆ. ಅವರು ಇಲ್ಲ ಎಂದು ಹೇಳಿದರು. ಬಳಿಕ, ತರಗತಿ ಕೊಠಡಿಯು ಅಂತಹ ಆಟ ಆಡುವುದಕ್ಕಾಗಿ ಇದೆಯಾ ಎಂದೂ ನಾನು ಕೇಳಿದೆ. ಅವರು ಇಲ್ಲ ಎಂದರು. ಸುದೀರ್ಘ ಹೊತ್ತು ಮೊಬೈಲ್ ಫೋನ್‌ಗಳಲ್ಲಿ ಇಂತಹ ಆಟಗಳನ್ನು ಆಡಿದರೆ, ಹೇಗೆ ನಮ್ಮ ಕಣ್ಣು ಮತ್ತು ಮನಸ್ಸಿನ ಮೇಲೆ ದುಷ್ಪರಿಣಾಮ ಬೀರುತ್ತದೆ ಎಂದು ಚರ್ಚಿಸಿದೆವು. ಮಕ್ಕಳು ಮೊಬೈಲ್‌ಫೋನ್‌ಗಳಿಗೆ ಮತ್ತು ಆಟಗಳಿಗೆ ಹೇಗೆ ದಾಸರಾಗಿದ್ದಾರೆ ಎನ್ನುವ ಪತ್ರಿಕೆಯ ಸುದ್ದಿಗಳನ್ನು ಮುಖ್ಯವಾಗಿ ಪ್ರಸ್ತಾಪಿಸಿದೆ. ಆಟ ಆಡುವುದು ಕೆಟ್ಟದಲ್ಲ, ಆದರೆ ಅದಕ್ಕೆ ಸಮಯ ಮತ್ತು ವಯಸ್ಸು ಎನ್ನುವುದಿರುತ್ತದೆ ಎಂದು ಹೇಳಿದೆ. ಯಾವುದೇ ರೀತಿಯ ಹಿಂಸೆಯನ್ನು ಹೊಂದಿರುವ ಆಟವನ್ನು ಆಡುವುದಕ್ಕೆ ತರಗತಿಯನ್ನು ಬಳಸುವಂತಿಲ್ಲ ಎಚಿದೆ.

**ಧೂಮಪಾನದ ವಿಚಾರ**

ಎರಡನೇ ತರಗತಿಯ ಮಕ್ಕಳು, ತಮ್ಮಲ್ಲಿ ಒಂದು ಪೆನ್ಸಿಲ್ ಅನ್ನು ಸಿಗರೇಟ್‌ನಂತೆ ಹಿಡಿದು ಹೊಗೆ ಸೇವಿಸುತ್ತಿದ್ದಾರೆ ಎಂದಾಗ ನಾವು ಕ್ಯಾನ್ಸರ್‌ನ ಬಗ್ಗೆ ಸುದೀರ್ಘ ಚರ್ಚೆ ಮಾಡಿದೆವು. ಮಕ್ಕಳು ಆರೋಗ್ಯದ ಮೇಲೆ ಧೂಮಪಾನ ಬೀರುವ ದುಷ್ಪರಿಣಾಮದ ಬಗ್ಗೆ ತಿಳಿಯುವಂತಾಯಿತು. ಧೂಮಪಾನವನ್ನು ಅನುಕರಿಸಿದ ಹುಡುಗ ಕುಟುಂಬ ಮತ್ತು ಪರಿಸರ ತನ್ನ ವರ್ತನೆಯ ಮೇಲೆ ಬೀರಿದ ಪರಿಣಾಮದ ಬಗ್ಗೆ ಮಾತನಾಡತೊಡಗಿದ. ಅವನ ಪಾಲಕರು ಮತ್ತು ನೆರೆಹೊರೆಯವರಲ್ಲಿ ಪ್ರತಿಯೊಬ್ಬರೂ ತಂಬಾಕು ಜಗಿಯುವವರು ಮತ್ತು ಧೂಮಪಾನ ವ್ಯಸನಿಗಳಾಗಿದ್ದು, ಅವನ ಬದುಕಿನ ಮೇಲೆ ಗಾಢ ಪರಿಣಾಮ ಬೀರಿತ್ತು. ಹಾಗಾಗಿಯೇ ಅನೇಕ ಬಾರಿ ಅವನ ಚೀಲದಿಂದ ತಂಬಾಕಿನ ಪ್ಯಾಕೆಟ್‌ಗಳು ಪತ್ತೆಯಾಗಿದ್ದವು. ಅದರ ಬಗ್ಗೆ ಸುದೀರ್ಘ ಚರ್ಚೆ ಮಾಡಿದೆವು. ಈಗ ಅವನು ತಂಬಾಕು ಜಗಿಯುವುದಿಲ್ಲ.

**ಬೆದರಿಸುವಿಕೆ ಕುರಿತು**

ಬಾತ್‌ರೂಮಿನಲ್ಲಿ ಒಂದು ಮಗುವಿನ ಪ್ಯಾಂಟ್ ಅನ್ನು ಇಬ್ಬರು ಮಕ್ಕಳು ಜಾರಿಸಿದ ಬಗ್ಗೆ ಕೆಲವು ವಿದ್ಯಾರ್ಥಿಗಳು ದೂರು ನೀಡಿದರು. ನಾನು ಆ ಮಗುವಿನಲ್ಲಿ ಕೇಳಿ ವಿಷಯ ಖಚಿತ ಪಡಿಸಿದೆ. ಆದರೆ ಇದನ್ನು ಎಸಗಿದ ಹುಡುಗರಲ್ಲಿ ಕೇಳಿದಾಗ ಅವರು ನಿರಾಕರಿಸಿದರು. ಕೆಲವು ಮಕ್ಕಳು ಇದು ನಡೆದದ್ದನ್ನು ನೋಡಿದ್ದಾಗಿ ತಿಳಿಸಿದರು.

ಅನೇಕ ಸಲ ಆ ಹುಡುಗರು ಈ ಮಗುವನ್ನು ಬಡಿಯುತ್ತಿದ್ದದ್ದು ಕೂಡಾ ನೋಡಿದ್ದಾಗಿ ತಿಳಿಸಿದರು.

ಇನ್ನೊಬ್ಬರಿಗೆ ಹೊಡೆಯುವ ಅಭ್ಯಾಸದ ಬಗ್ಗೆ ನಾನು ಅವರಲ್ಲಿ ಹೇಳಿದೆ. ಮುಖ್ಯವಾಗಿ ಯಾರು ತಿರುಗಿ ಹೊಡೆಯುವುದಿಲ್ಲವೋ ಅವರಿಗೆ ಹೊಡೆಯುವುದರ ಬಗ್ಗೆ ಹೇಳಿದೆ. ಅಂತಹ ಮಕ್ಕಳನ್ನು ರೌಡಿಗಳು ಎಂದು ಕರೆಯುತ್ತಾರೆ ಎಂದೆ. ಹೀಗೆ ಬೆದರಿಕೆಗೆ ಒಳಗಾದ ಮಕ್ಕಳು ಹೇಗೆ ಬಲಿಪಶುಗಳಾಗುತ್ತಾರೆ, ಹೇಗೆ ಶಾಲೆ ತೊರೆಯುವ ಒತ್ತಡಕ್ಕೆ ಒಳಗಾಗುತ್ತಾರೆ, ಹೇಗೆ ಆತ್ಮಗೌರವದ ಕೊರತೆಯಿಂದ ಬಳಲುತ್ತಾರೆ, ಹೇಗೆ ಖಿನ್ನತೆಯ ತೊಂದರೆಗೆ ಒಳಗಾಗುತ್ತಾರೆ, ಹೇಗೆ ಅಂತಹ ಸನ್ನಿವೇಶಗಳಿಗೆ ಹೊಂದಿಕೊಳ್ಳಲು ಸಾಧ್ಯವಾಗದೇ ಹೋದಾಗ ವಿಪರೀತ ಕ್ರಮಕ್ಕೂ ಮುಂದಾಗುತ್ತಾರೆ ಎನ್ನುವುದನ್ನು ಹೇಳಿದೆ. ಇಬ್ಬರು ಹುಡುಗರೂ ಆ ಮಗುವಿನಲ್ಲಿ ಕ್ಷಮೆ ಕೇಳಿದರು. ತಾವು ಮಾಡಿದ್ದು ತಪ್ಪು ಎಂದೂ ಅದನ್ನು ಮತ್ತೆ ಪುನರಾವರ್ತನೆ ಮಾಡುವುದಿಲ್ಲ ಎಂದೂ ಬರೆದು ಕೊಟ್ಟರು.

ಇತರರಿಗೆ ಕಲ್ಲು ಎಸೆಯುವ, ಶಾಲಾ ಪರಿಸರದ ಹೂವುಗಳನ್ನು ಕೀಳುವ ಅಥವಾ ಕೆಟ್ಟದಾಗಿ ಬಯ್ಯುವ ಇಂತಹ ಪ್ರಕರಣಗಳ ಕುರಿತು ಶಿಕ್ಷಕರಿಗೆ ವರದಿಗಳು ಬರುತ್ತಿದ್ದವು. ಅಂತಹ ಪ್ರತಿಯೊಂದು ಸಂದರ್ಭದಲ್ಲೂ ಮಕ್ಕಳನ್ನು ದಂಡಿಸಲಿಲ್ಲ, ಇನ್ನೊಬ್ಬರ ಎದುರಿನಲ್ಲಿ ಅವಮಾನಿಸಲಿಲ್ಲ. ಅವರಿಗೆ ಅದರ ಪರಿಣಾಮಗಳನ್ನು ಮನವರಿಕೆ ಮಾಡಿಕೊಡಲಾಯಿತು. ಅಂತಹ ವರ್ತನೆಯನ್ನು ಪುನರಾವರ್ತಿಸದಂತೆ ತಿಳಿ ಹೇಳಲಾಯಿತು.









**ಪೂಜಾ ವೈಷ್ಣೋಯ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ (2018) ಪಡೆದು, ಬರ್ಮರ್‌ನಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ಗೆ ಸೇರ್ಪಡೆಯಾದರು. ಒಂದು ವರ್ಷ ಕಾಲ ಸರಕಾರಿ ಶಾಲೆಯ ವಿದ್ಯಾರ್ಥಿಗಳಿಗೆ ಅಧ್ಯಾಪನ ಮಾಡಿದರು. ಇನ್ನೊಂದು ವರ್ಷ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಶಾಲೆಯಲ್ಲಿ ಮಕ್ಕಳಿಗೆ ಇಂಗ್ಲಿಷ್ ಕಲಿಸಿದರು. ಪ್ರಥಮ ಭಾಷೆಯ ಸಹಾಯದೊಂದಿಗೆ ದ್ವಿತೀಯ ಭಾಷೆಯನ್ನು ಹೇಗೆ ಕಲಿಸಬಹುದು/ಕಲಿಯಬಹುದು ಎನ್ನುವುದನ್ನು ಅರ್ಥೈಸುವುದು ಅವರ ಆಸಕ್ತಿಯ ಕ್ಷೇತ್ರ. ಅವರನ್ನು pooja.vishnoi@azimpremjifoundation.org ಮೂಲಕ ಸಂಪರ್ಕಿಸಬಹುದು.

# ಸಂವೇದನಾಶೀಲತೆ ಉಂಟು ಮಾಡಲು ಕಥೆಗಳ ಬಳಕೆ | ಪರಿ (PARI) ಅನುಭವ

ಪ್ರೀತಿ ಡೇವಿಡ್

ಒಡಿಶಾದಲ್ಲಿ ಬೇಸಿಗೆ ತಾಪಮಾನವು ಏರಿಕೆಯಾಗಿ, ಹುಲ್ಲುಗಾವಲುಗಳಲ್ಲಿ ಮೇವು ವಿರಳವಾದಾಗ ಎಮ್ಮೆ ಸಾಕುವವರು ತಮ್ಮ ಪ್ರಾಣಿಗಳಿಗೆ ಆಹಾರ ಹುಡುಕಿಕೊಂಡು ದೂರ ಪ್ರದೇಶಗಳಿಗೆ ಅಲೆಯಬೇಕಾಗುತ್ತದೆ. ಮೇವಿಗಾಗಿ ನದಿಯಲ್ಲಿ ಈಜಿಕೊಂಡು ಇನ್ನೊಂದು ದಡಕ್ಕೆ ಸಾಗುವ ಎಮ್ಮೆಗಳ ಹಿಂಡು ಹಾಗು ಈ ಗೋವಳರು ಪುಟ್ಟ ಕರುಗಳನ್ನು ಕಂಕುಳಲ್ಲಿ ಎತ್ತಿಕೊಂಡು ಹೇಗೆ ಅದ್ಭುತವಾಗಿ ತಮ್ಮ ಪ್ರಾಣಿಗಳನ್ನು ಆರೈಕೆ ಮಾಡುತ್ತಾರೆ ಎಂಬ ಚಿತ್ರಗಳ ಮೂಲಕ ನಗರವೊಂದರ ಪ್ರಾಥಮಿಕ ಶಾಲೆಯಲ್ಲಿ ಗ್ರಾಮೀಣ ಭಾರತದ ಕುರಿತು ಮಾತನಾಡಲು ಆರಂಭಿಸುತ್ತೇವೆ. ನಿರೀಕ್ಷೆಯಂತೆ, ಎಮ್ಮೆಗಳ ಈ ವಲಸೆಯ ಕಥೆ ಹಾಗು ಆಳ ನೀರಿನಲ್ಲಿ ಸಾಗುತ್ತಿದ್ದಂತೆ ಕರುವು ತನ್ನ ತಾಯಿಯನ್ನು ಕರೆಯುವ ಬಗೆಯು, ತಕ್ಷಣವೇ ಕರುವಿನ ಜೊತೆ ಗುರುತಿಸಿಕೊಳ್ಳುವ ಮಕ್ಕಳ ಮನಸ್ಸು ಮುಟ್ಟುತ್ತದೆ. ಭಾರತದಲ್ಲಿ ಹೈನುಗಾರಿಕೆಯಲ್ಲಿ ತೊಡಗಿರುವ ರೈತರು ಹೇಗೆ ತಮ್ಮ ಪ್ರಾಣಿಗಳನ್ನು (ಈ ಪ್ರಾಣಿಗಳ ಹಾಲನ್ನು ಅವರು ಬೆಳಗ್ಗೆ ಸೇವಿಸಿರಬಹುದು) ಆರೈಕೆ ಮಾಡುತ್ತಾರೆ ಎಂಬುದರ ಬಗ್ಗೆ ಅವರ ಗಮನ ಸೆಳೆಯಲು ನಾವು ಈ ಕಥೆಯನ್ನು (ಒಡಿಶಾದಲ್ಲಿ ವಲಸೆಗಾಗಿ ಈಜುವುದು) ಬಳಸುತ್ತೇವೆ. ಈ ಕಲಿಕೆಯು ಎಲ್ಲಾ ಸರಹದ್ದುಗಳನ್ನು ಮೀರಿ ಮುಂದುವರೆಯುತ್ತದೆ.

ಕಲಿಕೆಯ ಸಾಧನವಾಗಿ ಪರಿ (PARI) ಬೇಸಿಗೆಯಲ್ಲಿ ಆಹಾರ ಮತ್ತು ಮೇವು ಪಡೆಯುವುದು ಕಷ್ಟವಾದಾಗ ಎಲ್ಲಾ ರೈತರು ತಮ್ಮ ಪ್ರಾಣಿಗಳನ್ನು ಕರೆದೊಯ್ಯುವ ಜಾನುವಾರು ಆಶ್ರಯತಾಣ ಯಾವುದು ಎಂಬುದು ನಿಮಗೆ ತಿಳಿದಿದೆಯೇ? ಅಥವಾ ಮಹಾರಾಷ್ಟ್ರದ ಯವತ್ಮಾಲ್ ಎಂಬಲ್ಲಿ ಕಾಡಿನಲ್ಲಿ ಮೇವಿಗಾಗಿ ಪ್ರಾಣಿಗಳನ್ನು ಕೊಂಡೊಯ್ಯುವಾಗ ಹುಲಿಗಳಿಂದ ರಕ್ಷಣೆ ಪಡೆಯುವುದಕ್ಕಾಗಿ ದೇಹ ರಕ್ಷಕ ಉಪಕರಣವನ್ನು ವಿನ್ಯಾಸ-ಗೊಳಿಸಿದ ಗೋವಳನೊಬ್ಬನ ಕುರಿತು ನಿಮಗೆ ತಿಳಿದಿದೆಯೇ? ಈ ಕಥೆಗಳು, ಇತರ ಕಲಿಕಾ ಫಲಿತಾಂಶಗಳ ಜೊತೆಗೆ, ಪ್ರಾಣಿಗಳ ಕುರಿತು ಕಾಳಜಿ ತೋರುವಲ್ಲಿ ಪರಿಣಾಮಕಾರಿ ಪಾಠವಾಗಿ ರೂಪುಗೊಳ್ಳುತ್ತವೆ. ಇವು ಮಕ್ಕಳ ಕಲ್ಪನಾ ಶಕ್ತಿಯನ್ನು ವೃದ್ಧಿಸುತ್ತವೆ ಮತ್ತು ಸೃಜನಾತ್ಮಕವಾಗಿ ಚಿಂತಿಸಲು ಅವರಿಗೆ ಅನುವು ಮಾಡಿಕೊಡುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಲು, ಗ್ರಹಿಸಲು ಮತ್ತು ಅನುಭೂತಿ ವ್ಯಕ್ತಪಡಿಸಲು ಇತರರ ಹೆಜ್ಜೆಜಾಡಿನಲ್ಲಿ ಸಾಗುವುದಕ್ಕೆ ಇದು ಅವಕಾಶ ಕಲ್ಪಿಸಿಕೊಡುತ್ತದೆ.

ಪ್ರಾಥಮಿಕ ಶಾಲಾ ಶಿಕ್ಷಕರು, ಹನ್ನೆರಡು ಭಾರತೀಯ ಭಾಷೆಗಳಲ್ಲಿ ಲಭ್ಯವಿರುವ ಕಥೆಗಳು, ಚಿತ್ರಗಳು ಮತ್ತು ಚಲನಚಿತ್ರಗಳನ್ನು ಪೀಪಲ್ಸ್ ಆರ್ಕೈವ್ ಆಫ್ ರೂರಲ್ ಇಂಡಿಯಾ (People's Archive of Rural India -PARI) ವೆಬ್‌ತಾಣದಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದು. ಈ ಅಂತರ್ಜಾಲ ನಿಯತಕಾಲಿಕವು ಉಚಿತವಾಗಿದ್ದು, ಪಡೆಯುವ ವಿಧಾನವೂ ಸರಳವಾಗಿದೆ. ಕೃಷಿ, ಬೇಸಾಯ, ವಲಸೆ, ಸಮುದಾಯಗಳು, ಕರಕುಶಲ ಕಲೆಗಳು, ಆದಿವಾಸಿಗಳು ಮೊದಲಾದ ಗ್ರಾಮೀಣ ವಿಚಾರಗಳನ್ನು ಇದು ಒಳಗೊಂಡಿರುತ್ತದೆ. ಈ ಕಥೆಗಳು, ನಮ್ಮ ಕಾಲದ ಅನೇಕ ಸಮಸ್ಯೆಗಳ ಕುರಿತು ವಿದ್ಯಾರ್ಥಿಗಳಿಗೆ (ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಹಂತದ ತನಕ) ಮಾಹಿತಿ ನೀಡುತ್ತವೆ, ಸಂವೇದನೆಯನ್ನು ರೂಪಿಸುತ್ತವೆ ಹಾಗು ಕಲಿಸುತ್ತವೆ. ದೇಶದ ಅತೀ ಹೆಚ್ಚು ಭಾಗವನ್ನು ಒಳಗೊಂಡಿರುವ ಗ್ರಾಮೀಣ ಭಾರತದ ಕುರಿತು ನಮ್ಮ ಪಠ್ಯಪುಸ್ತಕಗಳಲ್ಲಿ ಸಾಕಷ್ಟು ಪ್ರಮಾಣದ ವಿಷಯಗಳ ಕೊರತೆಯಿರುವುದಾಗಿ ನಾವು ಭಾವಿಸುತ್ತೇವೆ. ಗ್ರಾಮೀಣ ಭಾರತದ ಬದುಕು ಮತ್ತು ಜೀವನಾಧಾರದ ಕುರಿತು ವಿದ್ಯಾರ್ಥಿಗಳಿಗೆ ಸಾಕಷ್ಟು ವಿಚಾರಗಳು ತಿಳಿದಿಲ್ಲ. ಅವರ ಮನೆಗಳು, ಉದ್ಯೋಗ, ಅವರು ನೆಚ್ಚಿಕೊಂಡಿರುವ ಕಾಡು, ಅವರು ಬೆಳೆಸುವ ಬೆಳೆಗಳು, ಸೃಷ್ಟಿಸುವ ಕರಕುಶಲ ವಸ್ತುಗಳು, ಅವರ ಹಾಡುಗಳು ಮತ್ತು ಐತಿಹ್ಯಗಳು ಇನ್ನಿತರ ವಿಷಯಗಳ ಕುರಿತು ವಿದ್ಯಾರ್ಥಿಗಳು ಸಾಕಷ್ಟು ತಿಳಿದುಕೊಂಡಿರುವುದಿಲ್ಲ.

ಗ್ರಾಮೀಣ ಭಾರತದ ತೀರಾ ಒಳಪ್ರದೇಶದ ನೈಜ ಕಥೆಗಳನ್ನು ಬಳಸಿದರೆ, ನಮ್ಮನ್ನು ಅನೇಕ ರೀತಿಗಳಲ್ಲಿ ಸಂಪರ್ಕಿಸಿರುವ ಪ್ರಪಂಚವನ್ನು ಕೇಳಲು ಮತ್ತು ನೋಡಲು ಅವಕಾಶವೊಂದು ಸೃಷ್ಟಿಯಾಗುತ್ತದೆ. ಶಿಕ್ಷಕರಾಗಿ ನಾವು ಮಕ್ಕಳಲ್ಲಿ ಯಾವ ಮೌಲ್ಯಗಳನ್ನು ಬಿತ್ತಲು ಇಚ್ಛಿಸುತ್ತೇವೆ? ಗೌರವ ಮತ್ತು ತಾದಾತ್ಮ್ಯವನ್ನು ರೂಪಿಸಲು ನಾವು ಅವರಿಗೆ ಸಾಧನಗಳನ್ನು ನೀಡಬಹುದೆ? ಅತ್ಯಂತ ಎಳೆಯ ಮಕ್ಕಳಲ್ಲಿಯೂ ಮಾನವೀಯತೆ-ಯನ್ನು ರೂಪಿಸುವುದು ಅತ್ಯಗತ್ಯ. ಪಠ್ಯ ಯೋಜನೆಗಳು ಮತ್ತು ಬೋಧನಾ ಘಟಕಗಳು ಸಾಮಾನ್ಯವಾಗಿ ಶೈಕ್ಷಣಿಕ ಕಲಿಕೆಯ ಮೇಲೆ ಗಮನಹರಿಸುತ್ತವೆ. ಆದರೆ ಒಬ್ಬ ನಾಗರಿಕನ ಸತ್ತ್ವವನ್ನು ನಿರ್ಣಯಿಸುವಲ್ಲಿ ಭಾವನಾತ್ಮಕ ಮತ್ತು ಸಾಂಸ್ಕೃತಿಕ ಪ್ರಗತಿಯು ಪ್ರಮುಖ ಪಾತ್ರ ವಹಿಸುತ್ತದೆ. ಹಾಗಾಗಿ, ಪ್ರಾಣಿಗಳನ್ನು ತಮ್ಮ ಮಕ್ಕಳಂತೆಯೇ ನೋಡಿಕೊಳ್ಳುವ ಗೋವಳರ ಕಥೆಯು, ಏಕರೂಪದ ಪ್ಯಾಕೆಟುಗಳಲ್ಲಿ ಮಾರಾಟ ಮಾಡುವ ಹಾಲನ್ನು ಒಬ್ಬ ವ್ಯಕ್ತಿಯ ಬದುಕು ಮತ್ತು ಜೀವನೋಪಾಯವಾಗಿ ನೋಡುವಂತೆ ಮಾಡುತ್ತದೆ. ಈ ಹಾಲು ಗ್ರಾಹಕರ ಬಳಿ ತಲುಪುವ ಬಗೆಯನ್ನು ಸಹ ನಾವು ಚೆನ್ನಾಗಿ ಅರಿತುಕೊಳ್ಳುತ್ತೇವೆ.

**ಪರಿ ಸಂಪನ್ಮೂಲಗಳ ಬಳಕೆ**

ಯಾವುದೇ ವಿಷಯವು ಮಕ್ಕಳಿಗೆ ಸಂವೇದನಾಶೀಲತೆ ಮತ್ತು ಸಹಾನುಭೂತಿಯನ್ನು ಕಲಿಸುವುದಿಲ್ಲ. ಮೌಲ್ಯ ವಿಜ್ಞಾನ (Moral Science) ಅಥವಾ ನೈತಿಕ ಶಿಕ್ಷಣ (Value Education) ತರಗತಿಗಳು ಮೇಲಿನಿಂದ ಹೇರಲ್ಪಟ್ಟ ಪಾಠಗಳ ಜೊತೆಗೆ ಓಬಿರಾಯನ ಕಾಲದ ಕಥೆಗಳನ್ನು ಪುನರಾವರ್ತಿಸುತ್ತವೆ ಹಾಗು ವಿದ್ಯಾರ್ಥಿಗಳು, 'ಕಷ್ಟಕಾಲದಲ್ಲಿ ನೆರವಿಗೆ ಬರುವ ವ್ಯಕ್ತಿಯೇ ನಿಜವಾದ ಸ್ನೇಹಿತನಾಗಿದ್ದಾನೆ' ಎಂಬಂಥ ಕ್ಲೀಷೆಗಳನ್ನು ನೆನಪಿಡಬೇಕೆಂದು ನಿರೀಕ್ಷಿಸಲಾಗುತ್ತದೆ. ಬೆಳೆಯುತ್ತಿರುವ ಮಕ್ಕಳಲ್ಲಿ, ನಾವು ಬದುಕುತ್ತಿರುವ ವಿಶಾಲ ದೇಶದ ಕುರಿತು ಅರಿವು

ಮೂಡಿಸುವುದಕ್ಕಾಗಿ ಹೊರಪ್ರಪಂಚಕ್ಕೆ ಹೆಚ್ಚು ಗೊತ್ತಿರದ ಸಮುದಾಯಗಳು ಮತ್ತು ಉದ್ಯೋಗಗಳ ಬಗ್ಗೆ ಕಲಿಸುವುದು ಹಾಗು ನಮ್ಮ ಆರ್ಥಿಕ ಮತ್ತು ಸಮಾಜಶಾಸ್ತ್ರೀಯ ಚೌಕಟ್ಟಿನಲ್ಲಿರುವ ಸಂಕೀರ್ಣ ಅಂತರ ಸಂಪರ್ಕಗಳನ್ನು ಅವರಿಗೆ ತಿಳಿಸುವುದು ಅತ್ಯಗತ್ಯ. ಅಲ್ಲದೆ, ಮಕ್ಕಳನ್ನು ಹೆಚ್ಚು ಸಂವೇದನಾಶೀಲರನ್ನಾಗಿ ರೂಪಿಸುವುದಕ್ಕೆ ಇತರರ ಬಗೆಗಿನ ಕಲಿಕೆಯೂ ಮುಖ್ಯವಾದದ್ದು. ನಾವು ಶಾಲೆಗಳಿಗೆ ಕಲಿಕಾ ಅನುಭವವನ್ನು ಆಧರಿಸಿದ ಕಾರ್ಯ–ಯೋಜನೆಗಳನ್ನು ವಿನ್ಯಾಸಗೊಳಿಸಲು ಮತ್ತು ಸಾಮಾನ್ಯವಾಗಿ ಬೇರೆಯವರ ಜೊತೆ ತೊಡಗಿಸಿಕೊಳ್ಳದ ಇತರರ ಪ್ರತಿನಿತ್ಯದ ಬದುಕಿನಿಂದ ನೇರವಾಗಿ ಕಲಿತುಕೊಳ್ಳಲು ಬಾಹ್ಯ ಭೇಟಿಯನ್ನು ಉತ್ತೇಜಿಸುತ್ತೇವೆ.

**ಜೀವವೈವಿಧ್ಯತೆ ಕುರಿತ ಪ್ರಾಜೆಕ್ಟ್**

ಬಹುತೇಕ ಮಕ್ಕಳು ಜೇನನ್ನು ಗುರುತಿಸುತ್ತಾರೆ, ಅದರ ಸ್ವಾದ ಮತ್ತು ಸಿಹಿಯನ್ನು ಅನುಭವಿಸಿರುತ್ತಾರೆ. ಅವರು ಜೇನ್ನೊಣಗಳನ್ನೂ ನೋಡಿರುತ್ತಾರೆ ಮತ್ತು ಅವುಗಳಿಂದ ದೂರವಿರಬೇಕೆಂದು ಅವರಿಗೆ ಹೇಳಲಾಗಿರುತ್ತದೆ. ಚಿತ್ರಗಳು ಮತ್ತು ದೃಶ್ಯತುಣುಕುಗಳೊಂದಿಗೆ ಪರಿಯ (PARI) ಕಥೆಗಳನ್ನು ಬಳಸಿ, ಶಿಕ್ಷಕರು ಜೇನು ಉತ್ಪಾದನೆಯ ಪ್ರಕ್ರಿಯೆಯ ಕುರಿತ ಮಕ್ಕಳ ಜ್ಞಾನವನ್ನು ವೃದ್ಧಿಸಬಹುದು ಮತ್ತು ಜೀವವೈವಿಧ್ಯತೆಯನ್ನು ಕಾಪಾಡಲು ಜೇನ್ನೊಣಗಳಂತಹ ಕೀಟಗಳು ಯಾವ ಪಾತ್ರವನ್ನು ವಹಿಸುತ್ತವೆ ಎಂಬುದನ್ನು ತಿಳಿಸಿಕೊಡಬಹುದು. ಇದರ ಜೊತೆಗೆ, ಮಕ್ಕಳು ಸಾಂಪ್ರದಾಯಿಕವಾಗಿ ಜೇನು ಸಂಗ್ರಹಿಸುವವರ ಕೆಲಸ ಮತ್ತು ಈ ಕೆಲಸವನ್ನು ಮಾಡಲು ಬೇಕಾಗುವ ವಿಶಿಷ್ಟ ಕೌಶಲಗಳನ್ನು ಗುರುತಿಸಿ ಗೌರವಿಸಲು ಕಲಿಯುತ್ತಾರೆ. ಜೇನಿನ ಕುರಿತ ನಮ್ಮ ಕಥೆಯಲ್ಲಿ, ಸುಂದರ್‌ಬನ್ ಪ್ರದೇಶದಲ್ಲಿ ಜೇನು ಸಂಗ್ರಹಿಸುವವರು ಹುಲಿಗಳು, ಮೊಸಳೆಗಳು ಮತ್ತು ಡಕಾಯಿತರನ್ನು ಸಹ ಎದುರಿಸಿ ಹೇಗೆ ಜೇನನ್ನು ಹುಡುಕುತ್ತಾರೆ ಎಂಬುದನ್ನು ವರ್ಣಿಸಲಾಗಿದೆ. ಅವರು ಹೇಗೆ ಹೊಗೆ ಹಾಕಿ ಜೇನ್ನೊಣಗಳನ್ನು ಓಡಿಸುತ್ತಾರೆ, ಜೇನು ಸಂಗ್ರಹಿಸುವವರಿಗೆ ಬೇಕಾದ ರಕ್ಷಣೆ ಅಥವಾ ರಕ್ಷಣೆಯ ಕೊರತೆ, ಹೇಗೆ ಜೇನನ್ನು ಸಾಗಿಸುತ್ತಾರೆ ಮುಂತಾದ ವಿಚಾರಗಳನ್ನು ಅವರು ವಿವರಿಸುತ್ತಾರೆ. ಇದರ ನಂತರ 'ಚೇಸಿಂಗ್ ಬೀಸ್ ಫ್ರಮ್ ಸುಂದರ್‌ಬನ್ಸ್ ಟು ಛತ್ತೀಸ್‌ಗಢ್' (Chasing Bees from Sundarbans to Chhattisgarh) ಎಂಬ ಸಚಿತ್ರ ಕಥೆಯನ್ನು ಪ್ರಸ್ತುತಪಡಿಸಬಹುದು. ಇದರಲ್ಲಿ ಜೇನನ್ನು ಪಡೆಯುವ ಪ್ರಕ್ರಿಯೆಯು ಅವರನ್ನು ಹೇಗೆ ಬೇರೆ ರಾಜ್ಯಗಳಲ್ಲಿ ಅವಕಾಶ ಗಿಟ್ಟಿಸುವಂತೆ ಮಾಡುತ್ತದೆ ಎನ್ನುವುದನ್ನು ತೋರಿಸುತ್ತದೆ. ಅಥವಾ 'ದ ಹನಿ ಹಂಟರ್ಸ್ ಆಫ್ ದ ಹಿಲ್ಸ್' (The Honey Hunters of the Hills) ಎಂಬ ಪಾಠವನ್ನು ಹೇಳಿಕೊಡಬಹುದು. ಈ ಪಾಠದಲ್ಲಿ ನೀಲಗಿರಿಯ ತೋಡಾ ಆದಿವಾಸಿಗಳು ಮರದ ಪೊಟರೆಗಳಿಂದ ಹೇಗೆ ಜೇನನ್ನು ಸಂಗ್ರಹಿಸುತ್ತಾರೆ ಎಂಬುದನ್ನು ವಿವರಿಸಲಾಗಿದೆ. ಜೊತೆಗೆ 'ಬ್ಯಾಟಲ್ ಆಫ್ ದ ಬಗ್ಸ್: ಆನ್ ವಿಂಗ್ಸ್ ಆಫ್ ಕ್ಲೈಮೇಟ್ ಚೇಂಜ್' (Battle of the Bugs: On Wings of Climate Change) ಎಂಬ ಕಿರುಚಿತ್ರವು ಪರಾಗಸ್ಪರ್ಶ ಮತ್ತು ನಮ್ಮ ಅರಣ್ಯಸಂಪತ್ತಿನ ಸಂರಕ್ಷಣೆಗೆ ಜೇನ್ನೊಣಗಳ ಪ್ರಾಮುಖ್ಯತೆಯನ್ನು ವಿವರಿಸುತ್ತದೆ.

ಕೊನೆಯದಾಗಿ, ಜೇನು ಮತ್ತು ಜೇನ್ನೊಣಗಳ ಕುರಿತು ಈ ತುಣುಕುಗಳನ್ನು ಬಳಸಿ ಚಟುವಟಿಕೆಯಲ್ಲಿ ತೊಡಗಿದಾಗ, ನಾವು ಒಂದಷ್ಟು ಪ್ರಮಾಣದಲ್ಲಿ ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಜೀವಶಾಸ್ತ್ರ (ಕೀಟಗಳು, ಮರಗಳು, ಪರಾಗಸ್ಪರ್ಶ, ಮಕರಂದ ಮತ್ತು ಫಲಸಕ್ಕರೆ (Fructose), ಭೂಗೋಳಶಾಸ್ತ್ರ (ನದಿಮುಖಜ ಭೂಮಿ, ಕಾಡುಗಳು ಮತ್ತು ಗುಡ್ಡಗಾಡು), ಜೀವವೈವಿಧ್ಯತೆ ಮತ್ತು ಪ್ರಭೇದಗಳ ಅಂತರ–ಅವಲಂಬನೆ, ಜೊತೆಗೆ ಸುರಕ್ಷತೆ ಮತ್ತು ಹೊರತೆಗೆಯುವಿಕೆ (Safeguard and extraction) ಮುಂತಾದ ಹೊಸ ಶಬ್ದಗಳ ಬಳಕೆಯ ಮೂಲಕ ಹೊಸ ಶಬ್ದ ಮತ್ತು ಪರಿಕಲ್ಪನೆಗಳ ಮೂಲಕ ಶಬ್ದಭಂಡಾರದ ವಿಸ್ತರಣೆ – ಹೀಗೆ ಅನೇಕ ಉದ್ದೇಶಗಳನ್ನು ಒಂದೇ ಕಾರ್ಯದಲ್ಲಿ ಈಡೇರಿಸುತ್ತೇವೆ. ಇದಕ್ಕೂ ಹೆಚ್ಚಿನದಾಗಿ ಜೇನಿಗೆ ಒಂದು ಇತಿಹಾಸ ಮತ್ತು ಪ್ರಕ್ರಿಯೆ ಇದೆ ಹಾಗು ಜೇನ್ನೊಣಗಳಿಗೆ ನಮ್ಮ ಬದುಕಿನಲ್ಲಿ ಪ್ರಮುಖ ಸ್ಥಾನವಿದೆ. ಇದರ ಜೊತೆಗೆ ನಾವು ವಿಶಿಷ್ಟ ಸಮುದಾಯಗಳು ಮತ್ತು ಅವು ಹೇಗೆ ಕೀಟ ಸಾಮ್ರಾಜ್ಯದೊಂದಿಗೆ ಸಂಬಂಧವನ್ನು ಹೊಂದಿವೆ ಎಂಬುದನ್ನು ಕಲಿಯುತ್ತೇವೆ.ಶಿಕ್ಷಕರು ಈಗ ಕೀಟಗಳ ಕುರಿತು ಜಾಗೃತಿ ಮೂಡಿಸಲು ಶಾಲೆಯಲ್ಲೇ ಸಣ್ಣದಾದ ಕಾರ್ಯಯೋಜನೆಯನ್ನು ಮಾಡಬಹುದು. ವಿದ್ಯಾರ್ಥಿಗಳ ಗುಂಪಿಗೆ ಒಂದು ಮರ ಅಥವಾ ಪೊದೆಯನ್ನು ಗುರುತಿಸಿ, ಅವುಗಳಲ್ಲಿ ಅಥವಾ ಅವುಗಳ ಸುತ್ತ ಇರುವ ಕೀಟಗಳ ಬದುಕನ್ನು ಗಮನಿಸಲು ಅಥವಾ ಚಿತ್ರಿಸಲು ಒಂದು ಗಂಟೆಯ ಕಾಲಾವಕಾಶವನ್ನು ನೀಡಬಹುದು. ತರಗತಿಯಲ್ಲಿ, ಈ ಜೀವಿಗಳು ಪರಸ್ಪರ ಹೇಗೆ ಅಂತರ್‌ಸಂಬಂಧವನ್ನು ಹೊಂದಿವೆ, ಗಿಡದ ಆರೋಗ್ಯ ಮುಂತಾದವುಗಳನ್ನು ಶಿಕ್ಷಕರು ವಿವರಿಸಬಹುದು ಹಾಗು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇದನ್ನೆಲ್ಲ ಈ ಭೂಮಿಯ ಆರೋಗ್ಯಕ್ಕೆ ಜೋಡಿಸಬಹುದು.

**ಲಿಂಗತ್ವದ ಕುರಿತ ಪ್ರಾಜೆಕ್ಟ್**

ಎಳೆಯ ವಿದ್ಯಾರ್ಥಿಗಳ ಜೊತೆಗೆ ರೈತ ಮಹಿಳೆಯರು ಎಂಬ ವಿಷಯದಲ್ಲಿ ನಾವು ಅತ್ಯಂತ ಯಶಸ್ವಿ ಕಾರ್ಯಕ್ರಮವೊಂದನ್ನು ನಡೆಸಿದ್ದು, ಈ ಪದವನ್ನು ಸ್ಪಷ್ಟವಾಗಿ ಬಳಸದೆಯೇ ಲಿಂಗ ಸಮಾನತೆಯ ಕುರಿತು ಮಾತನಾಡಲು ಈ ವಿಚಾರವು ಸೂಕ್ತವಾಗಿತ್ತು.

ತಮಿಳುನಾಡಿನ ಓರ್ವ ರೈತ ಮಹಿಳೆ ಮತ್ತು ಒಂಟಿ ತಾಯಿಯಾಗಿರುವ ಚಂದ್ರಾ ಅವರ ಕಥೆಯೊಂದಿಗೆ ಇದು ಪ್ರಾರಂಭವಾಗುತ್ತದೆ. ಈಕೆ ಚಂದ್ರನ ಮಬ್ಬು ಬೆಳಕಲ್ಲಿ ಹೂಗಳನ್ನು ಕಿತ್ತು ಮುಂಜಾನೆ ಮಾರುಕಟ್ಟೆಗೆ ತಲುಪುತ್ತಾಳೆ. ಈಕೆ ತನ್ನ ತೋಟ ಮತ್ತು ಮನೆಯಲ್ಲಿ ಹಲವಾರು ಕೆಲಸಗಳನ್ನು ಮಾಡುತ್ತಾಳಾದರೂ, ಈ ಕಥೆಗೆ 'ಸ್ಮಾಲ್ ಫಾರ್ಮರ್, ಬಿಗ್ ಹಾರ್ಟ್, ಮಿರಾಕಲ್ ಬೈಕ್!' ಎಂದು ಹೆಸರಿಸಲಾಗಿದೆ ಎಂಬುದನ್ನು ಓದುಗನು ಕಂಡು–ಹಿಡಿಯುತ್ತಾನೆ. ಇದರ ನಂತರ 'ಫೂಟ್ ಪ್ರಿಂಟ್ಸ್ ಇನ್ ದ ಸ್ಯಾಂಡ್ಸ್ ಆಫ್ ಎ ಮೈನ್' ಎಂಬ ಕಥೆಯನ್ನು ಪ್ರಸ್ತುತಪಡಿಸಲಾಗುತ್ತದೆ. ಇದು ಉತ್ತರಪ್ರದೇಶದ ಬಂಡಾ ಜಿಲ್ಲೆಯ ಮಹಿಳಾ ರೈತರ ಒಂದು ಗುಂಪಿನ ಶಕ್ತಿಶಾಲಿ ಚಿತ್ರಣವನ್ನು ಪ್ರಸ್ತುತಪಡಿಸುತ್ತದೆ. ಕೃಷಿಯ ಹೆಚ್ಚಿನ ಕೆಲಸವನ್ನು ಮಾಡುವ ಮಹಿಳೆಯರ ಪಾಲಿಗೆ ಹರಿಯುವ ನದಿಯು (ನದಿಗೆ ಅಣೆಕಟ್ಟೆ ನಿರ್ಮಿಸುವ ಬದಲು) ಎಷ್ಟು ಪ್ರಮುಖವಾದುದು ಎಂಬುದನ್ನು ಈ ಕಥೆಯಿಂದ ವಿದ್ಯಾರ್ಥಿಗಳು ಅರಿತುಕೊಳ್ಳುತ್ತಾರೆ. ಅಂತಿಮವಾಗಿ ಅವರು ಸ್ಥಳೀಯ ಬೀಜಗಳ ಸಂರಕ್ಷಣೆಗೆ ಹೆಸರುವಾಸಿಯಾಗಿರುವ, ತನ್ನ ಪ್ರದೇಶದಲ್ಲಿ ಜೀವವೈವಿಧ್ಯತೆಯನ್ನು ಕಾಪಾಡುವುದಕ್ಕಾಗಿ ನೀಡಿದ ಕೊಡುಗೆಗಾಗಿ ಪದ್ಮಶ್ರೀ ಪುರಸ್ಕಾರವನ್ನು ಪಡೆದ, ಒಡಿಶಾದ ಪತ್ರಪುರ ಜಿಲ್ಲೆಯ ಕಮಲಾ ಪೂಜಾರಿ ಅವರನ್ನು ಭೇಟಿಯಾಗುತ್ತಾರೆ.

ವಿದ್ಯಾರ್ಥಿಗಳಿಗೆ, ಮನೆಗೆಲಸವಾಗಿ, ಅವರ ತಾಯಂದಿರು / ಅಜ್ಜಿಯಂದಿರು ಬೆಳಗ್ಗೆಯಿಂದ ಸಂಜೆಯ ತನಕ ಏನೆಲ್ಲ ಕೆಲಸ ಮಾಡುತ್ತಾರೆ (ಊಟ ಮಾಡಲು, ಸ್ನಾನ ಮಾಡಲು ಮೊದಲಾದ ಸೂಚನೆ ನೀಡುವುದನ್ನು ಸಹ ಸೇರಿಸಿಕೊಂಡು!) ಎಂದು ಪಟ್ಟಿ ಮಾಡಲು ತಿಳಿಸಲಾಗುತ್ತದೆ. ಇದು ತರಗತಿಯಲ್ಲಿ ಸಾಕಷ್ಟು ಹಾಸ್ಯಕ್ಕೆ ಕಾರಣವಾಯಿತು. ಆದರೆ ಮಹಿಳೆಯರು ಮಾಡುವ ಕೆಲಸ (ಉದಾಹರಣೆಗೆ ಮನೆಯ ಬಳಕೆಗಾಗಿ ನೀರನ್ನು ತುಂಬಿಡುವುದು) ಮತ್ತು ಪ್ರತಿಯೊಂದು ಕೆಲಸಕ್ಕೂ ಅವರು ತೆಗೆದುಕೊಳ್ಳುವ ಸಮಯವನ್ನು ಪಟ್ಟಿ ಮಾಡಿದಾಗ ಇವರ ಪಾತ್ರ ನಿಜಕ್ಕೂ ಮುನ್ನೆಲೆಗೆ ಬಂದಿತು. ಈ ಕಥೆಯ ಹಿನ್ನೆಲೆಯಲ್ಲಿ, ಮಹಿಳೆಯರ ಕೊಡುಗೆಗಳು ಮತ್ತು ನಮ್ಮ ಆಹಾರವನ್ನು ಬೆಳೆಸುವಲ್ಲಿ, ಪರಿಸರ ವ್ಯವಸ್ಥೆಯನ್ನು ಕಾಪಾಡುವಲ್ಲಿ ಅವರು ವಹಿಸುವ ನಿರ್ಣಾಯಕ ಪಾತ್ರವನ್ನು ವಿದ್ಯಾರ್ಥಿಗಳು ಅರಿತುಕೊಳ್ಳುವುದು ಸಾಧ್ಯವಾಯಿತು.

**ವಲಸೆಯ ಕುರಿತ ಪ್ರಾಜೆಕ್ಟ್**

ನಾವು ವಲಸೆ ಎಂಬ ಶಬ್ದವನ್ನು ವಿವರಿಸುವ ಮೂಲಕ ಮತ್ತು ವಿವಿಧ ವಲಸೆಗಳ – ಋತು ಆಧಾರಿತ, ವೃತ್ತೀಯ, ಶಾಶ್ವತ ಇತ್ಯಾದಿ– ಕುರಿತ ಪರಿ (PARI) ಕಥೆಗಳ ಚಿತ್ರಗಳನ್ನು ಮಕ್ಕಳಿಗೆ ತೋರಿಸುವ ಮೂಲಕ ಈ ಕಾರ್ಯಯೋಜನೆಯನ್ನು ಪ್ರಾರಂಭಿಸುತ್ತೇವೆ. ನಂತರ ತಮ್ಮ ಸುತ್ತ ಇರುವ ವಲಸಿಗರು, ಅಡುಗೆಯವರು, ವಾಹನ ಚಾಲಕರು, ಭದ್ರತಾ ಸಿಬ್ಬಂದಿ ಮುಂತಾದ ವ್ಯಕ್ತಿಗಳ ಜೊತೆ ಮಾತನಾಡಲು ನಾವು ಅವರನ್ನು ಕೇಳುತ್ತೇವೆ. ಆರಂಭದಲ್ಲಿ, ವಿದ್ಯಾರ್ಥಿಗಳಿಗೆ ಮಾತುಕತೆಯನ್ನು ಪ್ರಾರಂಭಿಸಲು ಇರಿಸುಮುರು– ಸಾದರೂ, ಈ ಕೆಳಗಿನ ಪ್ರಶ್ನೆಗಳನ್ನು ಕೇಳಿ ತಮ್ಮ ಪ್ರಯತ್ನವನ್ನು ಮುಂದುವರಿಸಬೇಕು ಎಂದು ನಾವು ಒತ್ತಾಯಿಸುತ್ತೇವೆ:

1. ಅವರು ಯಾವ ಗ್ರಾಮ, ಜಿಲ್ಲೆ ಮತ್ತು ರಾಜ್ಯದಿಂದ ಬಂದಿದ್ದಾರೆ?
2. ಅವರು ಹೇಗೆ ಪ್ರಯಾಣಿಸಿದ್ದಾರೆ?
3. ಅವರು ಶಾಲೆಗೆ ಹೋಗಿದ್ದಾರೆಯೇ?
4. ಅವರು ಯಾಕೆ ವಲಸೆ ಬಂದಿದ್ದಾರೆ?
5. ಅವರಿಗೆ ಯಾವುದು ಹೆಚ್ಚು ಕಾಡುತ್ತಿರುತ್ತದೆ?

ತಮ್ಮ ಸುತ್ತ ಇರುವ ಜನರ (ನಿರೀಕ್ಷೆಯಂತೆ ಅವರು ವಲಸಿಗರು) ಕುರಿತು ನೇರವಾಗಿ ಮಾಹಿತಿಯನ್ನು ಕಲೆ ಹಾಕಿ ಒಂದು ವಾರದ ನಂತರ ಮರಳಿದಾಗ, ಬಹುತೇಕ ಮಕ್ಕಳು ವಲಸಿಗರ ಬಗ್ಗೆ ತಿಳಿದುಕೊಂಡರಲ್ಲದೆ, ವಲಸಿಗರು ಎಂದರೆ ಮನೆ ಇಲ್ಲದವರು, ಆಲಸಿಗಳು, ಅನಕ್ಷರಸ್ಥರು ಮುಂತಾದ ಸಿದ್ಧಮಾದರಿಗಳನ್ನು ತಮ್ಮ ಮನಸ್ಸಿನಿಂದ ತೊಡೆದು ಹಾಕಲು ಅವರು ಸಿದ್ಧರಾಗಿರುತ್ತಾರೆ.

ಮುಖ್ಯವಾಹಿನಿಯ ಗಮನಕ್ಕೆ ಬಾರದೆ ಹೋಗುವ ವ್ಯಕ್ತಿಗಳ ಜೊತೆ ಮಾತನಾಡಿ, ಯಾಕೆ ಇವರು ತಮ್ಮ ಮನೆ ಮತ್ತು ಪ್ರೀತಿಪಾತ್ರರನ್ನು ಬಿಟ್ಟು ಬರುತ್ತಾರೆ, ಭಾರತದ ಯಾವೆಲ್ಲ ಪ್ರದೇಶಗಳಿಂದ ಜನರು ವಲಸೆ ಹೋಗುತ್ತಾರೆ, ಅವರೆಷ್ಟು ಬಾರಿ ವಾಪಸ್ ತೆರಳುತ್ತಾರೆ, ಶಾಲೆಯನ್ನು ತೊರೆದ ಬಗ್ಗೆ ಅವರ ಭಾವನೆಗಳೇನು, ಎಳವೆಯಲ್ಲೇ ಕೆಲಸ ಮಾಡಲು ಪ್ರಾರಂಭಿಸಿದ ಕುರಿತು ಏನು ಅನ್ನಿಸುತ್ತದೆ, ಅವರು ಊರು ಬಿಡಲು ಕಾರಣವೇನು ಮುಂತಾದ ವಿಚಾರಗಳಲ್ಲಿ ತೊಡಗಿಸಿಕೊಂಡು ಅರ್ಥೈಸಿಕೊಳ್ಳಲು ವಿದ್ಯಾರ್ಥಿಗಳಿಗೆ ಸಾಧ್ಯವಾಗುತ್ತದೆ. ವಿದ್ಯಾರ್ಥಿಗಳಿಂದ ಗಾರ್ಡ್, ಧೋಬಿ ಮುಂತಾದ ವೃತ್ತಿ ಆಧಾರಿತ ಶೀರ್ಷಿಕೆಗಳು ಹಾಗು ದೀದಿ ಮತ್ತು ಭಯ್ಯಾ ಮುಂತಾದ ಸಾಮಾನ್ಯ ಪದಗಳಿಂದ ಕರೆಸಿಕೊಳ್ಳುತ್ತಿದ್ದ ಪ್ರತಿಯೊಂದು ವ್ಯಕ್ತಿಯೂ ಒಂದು ಅಸ್ಮಿತೆಯನ್ನು ಹೊಂದಿರುತ್ತಾರೆ. ಸಾಲ, ಬಾಲಕಾರ್ಮಿಕ, ಹಸಿವು, ಒಂಟಿತನ, ಸಾಕಷ್ಟು ಸಮಯದಿಂದ ಮನೆ ಮತ್ತು ಕುಟುಂಬದಿಂದ ದೂರವಿರುವ ಕಾರಣ ಕಾಡುವ ಯಾತನೆ, ಮಕ್ಕಳು ಬೆಳೆಯುತ್ತಿರುವುದನ್ನು ನೋಡಲು ಸಾಧ್ಯವಾಗದೆ ಇರುವುದು ಅಥವಾ ವೃದ್ಧಾಪ್ಯಕ್ಕೆ ತಲುಪಿರುವ ತಮ್ಮ ಪೋಷಕರ ಆರೈಕೆ ಮಾಡಲು ಸಾಧ್ಯವಾಗದೆ ಇರುವುದು ಮುಂತಾದ ವಿಚಾರಗಳನ್ನು ಕೂಡ ವಿದ್ಯಾರ್ಥಿಗಳು ಅರ್ಥ ಮಾಡಿಕೊಳ್ಳಲು ಕಲಿಯುತ್ತಾರೆ ಹಾಗು ಅವರ ಕುರಿತು ಸಹಾನುಭೂತಿ ವ್ಯಕ್ತಪಡಿಸುತ್ತಾರೆ.

**ಮಕ್ಕಳ ಕೆಲವು ಪ್ರತಿಕ್ರಿಯೆಗಳು ಹೀಗಿವೆ:**

- 'ಬರ' ಅಂದರೆ ಏನು ಎಂಬ ಪದವನ್ನು ನಾನು ಕಲಿತೆ.
- ಆ ಚಾಲಕನ ತಂದೆ ಸಾಯುವ ತನಕ ಆತನ ಬದುಕು ನನ್ನಂತೆಯೇ ಇತ್ತು ಹಾಗು ನಂತರ ಆತ ಶಾಲೆಯನ್ನು ಬಿಟ್ಟು ಕೆಲಸಕ್ಕೆ ಸೇರಿಕೊಳ್ಳಬೇಕಾಯಿತು.
- ನಮ್ಮ ವಯಸ್ಸಿನ ಮಕ್ಕಳು ಶಾಲೆಗೆ ಹೋಗುವ ಬದಲಿಗೆ ಹೊಲಗಳಲ್ಲಿ ಮತ್ತು ಕಟ್ಟಡ ನಿರ್ಮಾಣ ತಾಣಗಳಲ್ಲಿ ಕೆಲಸ ಮಾಡುತ್ತಿದ್ದಾರೆ.
- ರೈತರಿಗೆ ಕೆಲವೊಮ್ಮೆ ಆಹಾರ ದೊರೆಯದಿದ್ದರೂ ನಮಗಾಗಿ ಅವರು ಆಹಾರವನ್ನು ಬೆಳೆಸುತ್ತಿದ್ದಾರೆ.

**ಬೇಸಾಯ ಮತ್ತು ಆಹಾರದ ಕುರಿತ ಕಾರ್ಯಯೋಜನೆ**

ಕೃಷಿ, ಬೇಸಾಯ ಮತ್ತು ಆಹಾರದ ಕುರಿತ ಒಂದು ಕಾರ್ಯ– ಯೋಜನೆಯು, ಹೇಗೆ ಅವರ ತಟ್ಟೆಗೆ ಆಹಾರ ಬಂದೊದಗುತ್ತದೆ ಮತ್ತು ಅವರ ಚಾಕೋಲೇಟ್‌ಗೆ ಬೇಕಾಗುವ ಸಕ್ಕರೆ ತಯಾರಿಸಲು ಇರುವ ಪ್ರಕ್ರಿಯೆಗಳೇನು ಎಂಬುದರ ಮೇಲೆ ಬೆಳಕು ಹರಿಸುತ್ತದೆ. ನಾವು ಮಕ್ಕಳಿಗೆ ಭತ್ತ ಮತ್ತು ಕಬ್ಬು, ಕಲ್ಲಂಗಡಿ ಮತ್ತು ಟೊಮ್ಯಾಟೊ ಮುಂತಾದವುಗಳ ಕೃಷಿಯ ಕುರಿತು ಕೆಲವು ಕಥೆಗಳನ್ನು ಹೇಳುತ್ತೇವೆ.

ನಂತರ ಓರ್ವ ಹಿರಿಯ ವ್ಯಕ್ತಿಯ ಜೊತೆ ತರಕಾರಿ ಮಾರುಕಟ್ಟೆಗೆ ಹೋಗಿ ಯಾರಾದರೂ ತರಕಾರಿ ಮಾರಾಟಗಾರನ ಬಳಿ ಈ ಕೆಳಗಿನ ಪ್ರಶ್ನೆಗಳನ್ನು ಕೇಳಲು ಹೇಳುತ್ತೇವೆ:

1. ನೀವು ಎಲ್ಲಿಂದ ಬಂದಿದ್ದೀರಿ?
2. ಈ ತರಕಾರಿಗಳನ್ನು ನೀವೇ ಬೆಳೆಸುತ್ತೀರಾ? ಅಥವಾ ನೀವು ಇದನ್ನು ಎಲ್ಲಿಂದ ಖರೀದಿಸುತ್ತೀರಿ?
3. ನೀವು ಈ ತರಕಾರಿಗಳನ್ನು ಹೇಗೆ ಸಾಗಿಸುತ್ತೀರಿ ಮತ್ತು ಮಾರಾಟವಾಗದೆ ಉಳಿದ ತರಕಾರಿಗಳನ್ನು ಏನು ಮಾಡಲಾಗುತ್ತದೆ?

ಕೆಲವೊಮ್ಮೆ, ತರಕಾರಿ ವ್ಯಾಪಾರಿಯು ಮಾರಾಟ ಪ್ರಕ್ರಿಯೆಯನ್ನು ಮುಗಿಸುವ ತನಕ ಇವರು ಕಾಯಬೇಕಾಗುತ್ತದೆ. ಇದರಿಂದ, ಅವರು ಹೇಗೆ ಕೆಲಸ ಮಾಡುತ್ತಾರೆ ಎನ್ನುವುದನ್ನು ನೋಡಲು ವಿದ್ಯಾರ್ಥಿಗಳಿಗೆ ಸಾಧ್ಯವಾಗುತ್ತದೆ.

**ವಿದ್ಯಾರ್ಥಿಗಳು ನೀಡಿರುವ ಕೆಲವು ಪ್ರತಿಕ್ರಿಯೆಗಳು ಹೀಗಿವೆ:**

- ನಾವು ಈ ತಕ್ಕಡಿಯನ್ನು ಹಿಂದೆಂದೂ ಮುಟ್ಟಿನೋಡಿಲ್ಲ; ಇದು ತುಂಬಾ ಭಾರವಾಗಿದೆ!

- ಇಲ್ಲಿಗೆ ಬಂದು ತರಕಾರಿ ಮಾರಾಟ ಮಾಡಬೇಕಾದರೆ ತಾನು ಬಸ್‌ನಲ್ಲಿ ಎರಡು ಗಂಟೆ ಪ್ರಯಾಣಿಸಬೇಕಾಗುತ್ತದೆಂದು ಆಕೆ (ತರಕಾರಿ ಮಾರುವ ಮಹಿಳೆ)ಹೇಳಿದರು.

ಒಟ್ಟಾರೆ ಹೇಳುವುದಾದರೆ, ಪರಿ (PARI) ಬೋಧನಾ ವಿಧಾನವು ಮಕ್ಕಳಿಗೆ ಮಾಹಿತಿ ನೀಡಿ ಅವರಲ್ಲಿ ಸಂವೇದನಾಶೀಲತೆಯನ್ನು ತುಂಬುವುದಕ್ಕಾಗಿ, ಪ್ರತಿನಿತ್ಯದ ಬದುಕಿನ ಕುರಿತ ಬರಹ, ಚಿತ್ರ, ಚಲನಚಿತ್ರ – ಹೀಗೆ ವಿವಿಧ ರೂಪಗಳನ್ನು ಬಳಸಿ ಕಥೆ ಹೇಳುತ್ತದೆ. ಇದು ಪೌರತ್ವದ ಕುರಿತ ವಿಸ್ತೃತ ನೋಟವನ್ನು ಪಡೆಯಲು ಅವರಿಗೆ ನೆರವಾಗುತ್ತದೆ. ಭಾಷಾ ವೈವಿಧ್ಯತೆ, ಜೀವನೋಪಾಯ, ಸಮುದಾಯಗಳು ಮತ್ತು ಸಂಸ್ಕೃತಿಗಳ ಕುರಿತ ಕಲಿಕೆಯು, ಸಿದ್ಧಮಾದರಿಗಳನ್ನು ತಿರಸ್ಕರಿಸಲು ಮತ್ತು ತಮ್ಮ ಸಹ ನಾಗರಿಕರಲ್ಲಿ ಇರುವ ಭಿನ್ನತೆಗಳನ್ನು ಸ್ವೀಕರಿಸಲು ವಿದ್ಯಾರ್ಥಿಗಳಿಗೆ ಶಕ್ತಿ ತುಂಬುತ್ತದೆ.

---



**ಪ್ರೀತಿ ಡೇವಿಡ್** ಅವರು ಪರಿ (People's Archive of Rural India -PARI) ಗಾಗಿ ವರದಿ ಮಾಡುತ್ತಾರೆ ಹಾಗು ಶಿಕ್ಷಣ, ಆರೋಗ್ಯ, ಮಹಿಳೆಯರು, ಕರಕುಶಲ ವಸ್ತುಗಳು ಮತ್ತು ಜೀವನೋಪಾಯದ ಕುರಿತು ಬರೆಯುತ್ತಾರೆ. 'ಪರಿ ಎಜುಕೇಶನ್'ನ ಸಂಪಾದಕಿಯಾಗಿ ಪ್ರೀತಿ ಅವರು, ಗ್ರಾಮೀಣ ವಿಷಯಗಳನ್ನು ತರಗತಿ ಕೊಠಡಿಯೊಳಗೆ ಹಾಗು ಪಠ್ಯಕ್ರಮದಲ್ಲಿ ತರುವುದಕ್ಕಾಗಿ ಶಾಲೆಗಳು ಮತ್ತು ಕಾಲೇಜುಗಳ ಜೊತೆ ಕೆಲಸ ಮಾಡುತ್ತಾರೆ. ಅವರು ಬಿ.ಎಡ್ ಜೊತೆಗೆ ಅರ್ಥಶಾಸ್ತ್ರದಲ್ಲಿ ಪದವಿ ಪಡೆದಿದ್ದಾರೆ. ಅವರು ದಿ ಎಕಾನಮಿಕ್ಸ್ ಟೈಮ್ಸ್, ಸಿ.ಎನ್.ಬಿ.ಸಿ ಮತ್ತು ಎ.ಬಿ.ಎನ್.ಐ (ಟಿ.ವಿ) ಸಂಸ್ಥೆಗಳಲ್ಲೂ ಕಾರ್ಯನಿರ್ವಹಿಸಿದ್ದಾರೆ. ಇಂಡಿಯಾ ಬ್ಯುಸಿನೆಸ್ ರಿಪೋರ್ಟ್ (ಬಿ.ಬಿ.ಸಿ ವರ್ಲ್ಡ್)ನಲ್ಲಿ ವರದಿಗಾರ್ತಿಯಾಗಿದ್ದರು. ಸದ್ಯ ಕ್ರಾಫ್ಟ್ಸ್ ಕೌನ್ಸಿಲ್ ಆಫ್ ಇಂಡಿಯಾದ 'ಸ್ಟೋನ್ ಕ್ರಾಫ್ಟ್ಸ್ ಆಫ್ ಇಂಡಿಯಾ'ದ ಸಂಪಾದಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಪ್ರೀತಿ ಅವರು ಆಂಧ್ರಪ್ರದೇಶದ ರಿಶಿ ವ್ಯಾಲಿ ಸ್ಕೂಲ್ ಮತ್ತು ಬೆಂಗಳೂರಿನ ಸೇಂಟ್ ಜೋಸೆಫ್ಸ್ ಬಾಯ್ಸ್ ಹೈಸ್ಕೂಲ್‌ನಲ್ಲಿ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಅವರು ವಿಶ್ವವಿದ್ಯಾಲಯಗಳಲ್ಲಿ ಅಭಿವೃದ್ಧಿ ಪತ್ರಿಕೋದ್ಯಮದ ಕುರಿತು ಅತಿಥಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅಲ್ಲದೆ ಅವರು 'ಕಮಿಂಗ್ ಹೋಂ' (ಕರಡಿ ಟೇಲ್ಸ್)ನ ಲೇಖಕಿಯಾಗಿದ್ದಾರೆ. ಅವರನ್ನು priti@ruralindiaonline.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಕಿರಿಯ ಪ್ರಜೆಗಳನ್ನು ರೂಪಿಸುವುದು | ಐದು ಸಾಮಾನ್ಯ ದಾರಿಗಳು

ಪ್ರಿಯಾ ಕೃಷ್ಣಮೂರ್ತಿ

ಭಾರತದ ನಗರ ಪ್ರದೇಶಗಳಲ್ಲಿರುವ 15 ವರ್ಷದ ಶಾಲಾ ಮಕ್ಕಳಲ್ಲಿ ಪ್ರಜಾಪ್ರಭುತ್ವ ಪೌರತ್ವದ ತಿಳುವಳಿಕೆ ಯಾವ ಮಟ್ಟದಲ್ಲಿದೆ ಎಂಬುದರ ಕುರಿತು ನಡೆಸಿದ, ಹೆಚ್ಚು ಉಲ್ಲೇಖಿತವಾಗಿರುವ ಮತ್ತು ವ್ಯಾಪಕ ಮೆಚ್ಚುಗೆ ಪಡೆದ ವರದಿಯಲ್ಲಿರುವ (ಸಿಎಮ್‌ಸಿಎ ಯುವ ನಾಗರಿಕ್ ಮೀಟರ್, 2015) ಅಂಕಗಳನ್ನು ಯಾವ ಅಂಶಗಳು ಗುಣಾತ್ಮಕವಾಗಿ ಪ್ರಭಾವಿಸುತ್ತವೆ ಎಂದು ಗಮನಿಸಿದಾಗ, ಪ್ರಜಾಪ್ರಭುತ್ವವಾದಿ ಪೌರತ್ವವನ್ನು ಸಾಧ್ಯವಾಗಿಸುವ ಮೂರು ಸನ್ನಿವೇಶಗಳು ಇಂತಿವೆ:

- ಮನೆ ಅಥವಾ ಶಾಲೆಯಲ್ಲಿ ದೈಹಿಕವಾಗಿ ಶಿಕ್ಷೆಗೆ ಒಳಪಡದಿರುವುದು
- ತರಗತಿಯಲ್ಲಿ ಮುಕ್ತವಾಗಿ ಪ್ರಶ್ನೆಗಳನ್ನು ಕೇಳಲು ಮತ್ತು ಚಿಂತನೆಗಳನ್ನು ಹಂಚಿಕೊಳ್ಳಲು ಸಾಧ್ಯವಾಗಿರುವುದು
- ಪತ್ರಿಕೆಗಳ ಓದು ಹಾಗು ಟಿವಿ ವೀಕ್ಷಣೆ (ಸುದ್ದಿಗಳು ಮತ್ತು ಪ್ರಸಕ್ತ ವಿದ್ಯಮಾನ)

ಅಂಕದ ಮೇಲೆ ಗುಣಾತ್ಮಕವಾಗಿ ಪರಿಣಾಮ ಬೀರಿದ ಮತ್ತೊಂದು ಅಂಶ: ದೊಡ್ಡ ನಗರಗಳ ಮಕ್ಕಳಿಗಿಂತ ಹೆಚ್ಚಾಗಿ ಚಿಕ್ಕ ಪಟ್ಟಣಗಳ ಮಕ್ಕಳು ಸ್ವಲ್ಪ ಉತ್ತಮ ಅಂಕ ಗಳಿಸಿದ್ದರು, ಮತ್ತು ಹುಡುಗರಿಗಿಂತ ಹೆಣ್ಣುಮಕ್ಕಳು ಸ್ವಲ್ಪಮಟ್ಟಿಗೆ ಹೆಚ್ಚು ಅಂಕ ಪಡೆದಿದ್ದರು. ಬೇರೆ ಯಾವ ವಿಚಾರವವೂ ಅಂಕಗಳ ಮೇಲೆ ಪರಿಣಾಮ ಬೀರಲಿಲ್ಲ – ಶಿಕ್ಷಣ ಮಂಡಳಿಯಾಗಲೀ, ಸಮುದಾಯವಾಗಲೀ, ಜಾತಿಯಾಗಲೀ ಅಥವಾ ಪೋಷಕರ ಆರ್ಥಿಕ ಅಥವಾ ಶೈಕ್ಷಣಿಕ ಹಿನ್ನೆಲೆ ಅಥವಾ ಅವರು ದೇಶದ ಯಾವ ಭಾಗದವರು ಎಂಬುದಾಗಲೀ ಪರಿಣಾಮ ಬೀರಿಲ್ಲ.

ಪೌರತ್ವ ಶಿಕ್ಷಣವು ಬಹಳ ಬೇಗ ಆರಂಭವಾಗಬೇಕು ಹಾಗು ತರಗತಿ ಕೊಠಡಿಗಳು, ಶಾಲೆಗಳು ಪ್ರಜಾಪ್ರಭುತ್ವವಾದಿ ಜೀವನ ಮತ್ತು ಚಿಂತನೆಗೆ ಮುಖ್ಯ ಬುನಾದಿಯಾಗಿದೆ ಎಂದು ಹಲವಾರು ಅಧ್ಯಯನಗಳು ತೋರಿಸಿವೆ. ಸುಸ್ಥಿರ ಅಭಿವೃದ್ಧಿ ಗುರಿಗಳು (Sustainable Development Goals -SDGs), ಮಕ್ಕಳ ಹಕ್ಕುಗಳು, ತಮ್ಮ ಹಕ್ಕುಗಳ ಬಗ್ಗೆ ಖುದ್ದು ಮಕ್ಕಳಲ್ಲಿರುವ ಅರಿವು ಮತ್ತು ಹಕ್ಕುಗಳನ್ನು ರಕ್ಷಿಸಿಕೊಳ್ಳುವ ಅವರ ಸಾಮರ್ಥ್ಯ –ಇವುಗಳೆಲ್ಲದರ ನಡುವೆ ಒಂದು ಸ್ಪಷ್ಟ ಸಂಬಂಧ ಇದೆ. ಪೌರತ್ವ ಶಿಕ್ಷಣದ ಬಲು ಮುಖ್ಯ ಅಂಶಗಳೆಡೆಗೆ ನಾನೀಗ ಗಮನಹರಿಸುತ್ತೇನೆ. ಈ ಲೇಖನವು ಮುಖ್ಯವಾಗಿ ಪ್ರಾಥಮಿಕ ಶಾಲಾ ಶಿಕ್ಷಕರನ್ನು ಗಮನದಲ್ಲಿರಿಸಿ-ಕೊಂಡಿದ್ದರೂ, ಪ್ರಾಯಶಃ ಎಲ್ಲ ವರ್ಗದ ಶಿಕ್ಷಕರಿಗೂ ಇದರಿಂದ ಒಳನೋಟಗಳು ದಕ್ಕಲಿವೆ.

### ಪೌರತ್ವದ ಮುಖ್ಯಾಂಶಗಳು

ಸರ್ಕಾರದಲ್ಲಿ ಪ್ರಜೆಗಳ ಭಾಗವಹಿಸುವಿಕೆ ಮತ್ತು ಸಕ್ರಿಯತೆ, ಸಮಾಜದ ಇತರರೊಡನೆ ಪ್ರಜೆಗಳ ಪಾಲ್ಗೊಳ್ಳುವಿಕೆ, ನ್ಯಾಯ, ಸಮಾನತೆ, ಸ್ವಾತಂತ್ರ್ಯ ಇತ್ಯಾದಿ ಎಲ್ಲವೂ ಸಂಕೀರ್ಣವಾಗಿದ್ದು, ಬಹು ಆಯಾಮ ಉಳ್ಳದ್ದಾಗಿವೆ. ಹಾಗಾಗಿಯೇ ಪ್ರಜಾಪ್ರಭುತ್ವಕ್ಕಾಗಿನ ಶಿಕ್ಷಣವು ಸಂಕೀರ್ಣ ಮತ್ತು ಸವಾಲಿನದ್ದು ಎಂಬ ತರ್ಕ ಇದೆ. ಪರಿಣಾಮಕಾರಿ ಪೌರತ್ವ ಶಿಕ್ಷಣದ ಸರಳ, ಪ್ರಾಯೋಗಿಕ ಮತ್ತು ಪ್ರಬಲವಾದ, ತರಗತಿ ಮತ್ತು ಶಿಕ್ಷಕರು ಕೇಂದ್ರ ಬಿಂದುವಾಗಿರುವ ಐದು ಮಾರ್ಗಗಳನ್ನು ಶಿಕ್ಷಕರು ಅನ್ವೇಷಿಸಿ, ಅಳವಡಿಸಿಕೊಳ್ಳಲು ಇಲ್ಲಿ ಹಂಚಿಕೊಳ್ಳುತ್ತಿದ್ದೇನೆ.

### ತರಗತಿಯಲ್ಲಿ ಸ್ವಪ್ರೇಮ ಹಾಗು ಚೇತರಿಸಿಕೊಳ್ಳುವಿಕೆ

**ಬಹಳ ಮಕ್ಕಳು ಸಂತೋಷವಾಗಿಲ್ಲ, ಶಿಕ್ಷಕರಾಗಿ ನೀವು ಅವರನ್ನು ಈ ಬಗ್ಗೆ ಕೇಳುತ್ತಿದ್ದೀರಾ, ಅವರಿಗೆ ಕಿವಿಯಾಗಿದ್ದೀರಾ?**

ಒಂದು ಪ್ರಾಥಮಿಕ ತರಗತಿಯ ಕಥೆ ಇಲ್ಲಿದೆ. ಮ್ಯಾಜಿಕ್ ಬಾಕ್ಸ್ (Magic Box) ಎನ್ನುವುದು ಪೌರತ್ವ ಮತ್ತು ಜೀವನ ಕೌಶಲದ ದಿನವಹಿ ಮಾಡುವ ಮಿಂಚುಪಟ್ಟಿಗಳನ್ನು ಒಳಗೊಂಡ ಶಿಕ್ಷಕ ನಿರ್ದೇಶಿತ ಹತ್ತು ನಿಮಿಷದ ಕಾರ್ಯಕ್ರಮ. ಮ್ಯಾಜಿಕ್ ಬಾಕ್ಸ್‌ನ ಒಂದು ಪ್ರಯೋಗಾತ್ಮಕ ಅವಧಿಯಲ್ಲಿ ಮಕ್ಕಳು ತಮ್ಮನ್ನು ತಾವೇ ಧೀರ್ಘವಾಗಿ ಮತ್ತು ಬಿಗಿಯಾಗಿ ಅಪ್ಪಿಕೊಂಡು 'ನಾನು ನನ್ನನ್ನು ಇಷ್ಟಪಡುತ್ತೇನೆ!' ಎಂದು ಹೇಳಬೇಕಾಗಿತ್ತು. 6ರಿಂದ 9 ವರ್ಷದ ಮಕ್ಕಳಿಂದ ನಾವು 10–11 ವರ್ಷದ ಮಕ್ಕಳೆಡೆಗೆ ಸಾಗಿದಾಗ ಎಷ್ಟು ಉತ್ಸಾಹ ಹಾಗು ನೆಮ್ಮದಿಯಿಂದ ತಮ್ಮನ್ನು ತಾವು ಅಪ್ಪಿಕೊಂಡಿದ್ದರೋ ಅದು ಗಮನಾರ್ಹವಾಗಿ ಕಡಿಮೆಯಾಗಿತ್ತು. ಹತ್ತು ವರ್ಷ ವಯಸ್ಸಿನ ಮಕ್ಕಳ ಒಂದು ತರಗತಿಯಲ್ಲಿ ಒಂದು ಮಗು ಸಣ್ಣ ಧ್ವನಿಯಲ್ಲಿ 'ನಾನು ನನ್ನನ್ನು ಇಷ್ಟಪಡುವುದಿಲ್ಲ' ಎಂದು ಹೇಳಿದ್ದೂ ಕಿವಿಗೆ ಬಿದ್ದಿತು.

ಬಡತನವು ಮಗುವಿಗೆ, ಕುಟುಂಬಕ್ಕೆ, ಸಮುದಾಯಕ್ಕೆ ಮತ್ತು ದೇಶಕ್ಕೆ ವಿಶಿಷ್ಟ ಹಾಗು ವೈಯಕ್ತಿಕವಾದ ಸವಾಲುಗಳನ್ನು ಒಡ್ಡುತ್ತದೆ. ಮಕ್ಕಳು ಸಾಮಾನ್ಯವಾಗಿ ವಿವಿಧ ರೀತಿಯ ಆಘಾತಗಳನ್ನು ಅನುಭವಿಸುತ್ತಾರೆ – ಆರ್ಥಿಕ ಮುಗ್ಗಟ್ಟು, ಕೌಟುಂಬಿಕ ಕಲಹ, ಪೋಷಕರು ಬೇರ್ಪಡುವುದು ಹಾಗು ಪೀಡನೆ, ಮದ್ಯ, ಮಾದಕ ವಸ್ತುಗಳ ದುರುಪಯೋಗ ಇತ್ಯಾದಿ ಸೇರಿದಂತೆ ದೈಹಿಕ, ಮಾನಸಿಕ ಲೈಂಗಿಕ ದೌರ್ಜನ್ಯ.

ಭಾರತದ 13ರಿಂದ 15 ವರ್ಷದೊಳಗಿನ (ಹದಿಹರೆಯದ) ನಾಲ್ವರು ಮಕ್ಕಳಲ್ಲಿ ಒಂದು ಮಗು ಖಿನ್ನತೆಯಿಂದ ಬಳಲುತ್ತಿದ್ದು, ಹತ್ತರಲ್ಲಿ ಒಬ್ಬರು ಆತಂಕದಿಂದ ಬಳಲುತ್ತಿದ್ದಾರೆ. ಶೇಕಡ 11ರಷ್ಟು ಚಂಚಲತೆಯನ್ನು ಹೊಂದಿದ್ದು, ತಮ್ಮ ಕೆಲಸದ ಮೇಲೆ ಗಮನ ಇಡಲಾರದೆ ಬಳಲುತ್ತಿದ್ದರೆ ಶೇಕಡ 10ರಷ್ಟು ಮಕ್ಕಳಿಗೆ ಆಪ್ತ ಸ್ನೇಹಿತರೇ ಇರುವುದಿಲ್ಲ ಎಂಬ ವರದಿಯಿದೆ. 3

ನಲಿಕಲಿ ತರಗತಿಯಲ್ಲಿ 6ರಿಂದ 8 ವರ್ಷದ ಮಕ್ಕಳನ್ನು, ಅವರಿಗೆ ಯಾವುದು ಭಯ ಉಂಟುಮಾಡುತ್ತದೆ ಅಥವಾ ದುಃಖ ಉಂಟುಮಾಡುತ್ತದೆ ಎಂದು ನಾನು ಕೇಳಿದಾಗ, "ನನ್ನ ತಂದೆ

ನನ್ನನ್ನು ಹೊಡೆದಾಗ" ಅಥವಾ "ನನ್ನ ತಂದೆ ನನ್ನ ಅಮ್ಮನನ್ನು ಹೊಡೆದಾಗ" ಮುಂತಾದ ಕಾರಣಗಳನ್ನು ಹೇಳಿದರು. ಕೆಲವರು ಮಾತ್ರ ಹಾವು ಅಥವಾ ದೆವ್ವಗಳಿಂದ ಭೀತರಾಗುವವರಾಗಿದ್ದರು, ಅಥವಾ ಸಾಮಾನ್ಯವಾಗಿ ಪುಟ್ಟ ಮಕ್ಕಳಿಂದ ಬರುವ ಉತ್ತರಗಳಾದ ಸಾಕಷ್ಟು ಆಟಿಕೆಗಳು ಇಲ್ಲದಿರುವುದು ಇಂತಹವು ಕೆಲವು ಮಕ್ಕಳಿಂದ ಬಂದವು.

ಬೇರೊಂದು ಶಾಲೆಯ ಮತ್ತೊಂದು ತರಗತಿಯಲ್ಲಿ ಐದನೇ ತರಗತಿಯ ಇಬ್ಬರು 10 ವರ್ಷದ ಸಹೋದರರು ಪರಸ್ಪರ ಬಡಿದುಕೊಳ್ಳುತ್ತಾ ಜಗಳವಾಡುತ್ತಿದ್ದರು. ಮುಂದಿನ ಚರ್ಚೆಯಲ್ಲಿ ಈ ವಿಷಯದ ಬಗ್ಗೆ ಅವರು ನಕ್ಕು, ತಮ್ಮ ತಂದೆಯು ತಾಯಿಯನ್ನು ಮತ್ತು ಕೆಲವೊಮ್ಮೆ ಅಜ್ಜಿಯನ್ನು ಕೂಡ ಥಳಿಸುತ್ತಾರೆ ಎಂಬುದಾಗಿ ಗಟ್ಟಿಯಾಗಿ ಹೇಳಿದರು. ಬಹಳಷ್ಟು ಮಕ್ಕಳು ಈಗಾಗಲೇ ಮನೆಯಲ್ಲಿ ಕ್ರೌರ್ಯವನ್ನು ಅನುಭವಿಸುತ್ತಿದ್ದಾರೆ.

ಇದೇ ಸಿಎಂಸಿಎ ಅಧ್ಯಯನದಲ್ಲಿ ಶೇಕಡ 61ರಷ್ಟು ಮಕ್ಕಳು ತಮಗೆ ಶಾಲೆಯಲ್ಲಿ ಹೊಡೆಯುತ್ತಾರೆ ಎಂದು ಹೇಳಿದರು. ದೊಡ್ಡವರಾದ ನಾವೇ ಕಿರುಚುವುದು, ಹೊಡೆಯುವುದು, ಚಿವುಟುವುದು ಅಥವಾ ಹಣೆಪಟ್ಟಿ ಹಚ್ಚುವುದು, ಅವಮಾನಿಸುವುದು, ಮೂದಲಿಸುವುದು ಮುಂತಾದವನ್ನು ಮಾಡುತ್ತಿದ್ದರೆ, ನಾವು ಮಕ್ಕಳಲ್ಲಿ ಕರುಣೆ, ಸಹಾನುಭೂತಿಯನ್ನು ಬೆಳೆಸುವುದರ ಬಗ್ಗೆ ಆಶಾಭಾವನೆ ಇರುವುದಿಲ್ಲ. ಜಿಡ್ಡು ಕೃಷ್ಣಮೂರ್ತಿ ಅವರು ಹೇಳಿದಂತೆ "ನಾವು ಕಟು ಪದವನ್ನು ಬಳಸುವುದೂ, ಒಬ್ಬರನ್ನು ನಿಕೃಷ್ಟ ಮಾಡಲು ಬಳಸುವ ಸಂಜ್ಞೆ, ನಾವು ಭಯದಿಂದಾಗಿ ಪಾಲಿಸುವುದಾಗಲೀ ಈ ಎಲ್ಲವೂ ಹಿಂಸೆಯೇ ಆಗಿದೆ." 4

**ಮಕ್ಕಳನ್ನು ಪ್ರೀತಿಸುವ ಶಿಕ್ಷಕರು**

ಆದಿವಾಸಿ ಶಾಲೆಗಳ ಶಿಕ್ಷಕರಿಗಾಗಿ ಎನ್‌ಸಿಇಆರ್‌ಟಿ ಆಯೋಜಿಸಿದ್ದ ಕಾರ್ಯಾಗಾರವೊಂದರಲ್ಲಿ ಶಿಕ್ಷಕರು, ಕಡು ಬಡತನದ ಹಿನ್ನೆಲೆಯ ಮಕ್ಕಳು, ನಿರ್ಲಕ್ಷಿತ ಮಕ್ಕಳು ಹಾಗು ತಮ್ಮ ದೈನಂದಿನ ಜೀವನದಲ್ಲಿ ಬಹಳ ಒತ್ತಡದಲ್ಲಿರುವ ಮಕ್ಕಳು ಇವರೆಲ್ಲರೊಡನೆ ಎದುರಿಸುವ ಸವಾಲುಗಳನ್ನು ಹಂಚಿಕೊಂಡರು. ಶಿಕ್ಷಕರ ಕಷ್ಟಗಳಿಗೆ ಸಹಾನುಭೂತಿ ತೋರಲು ನನಗೆ ಸಾಧ್ಯವಾಯಿತು. ಇಂತಹ ಸವಾಲುಗಳು ಪ್ರತಿನಿತ್ಯ ಎದುರಿಸುತ್ತಿದ್ದರೆ ನಮ್ಮೆಲ್ಲರನ್ನು ಸಿನಿಕರನ್ನಾಗಿ ಮಾಡಿಬಿಡುತ್ತದೆ! ಕೆಲವು ಶಿಕ್ಷಕರು ಮಕ್ಕಳನ್ನು ಹೊಡೆಯುವುದನ್ನು ಸಮರ್ಥಿಸಿಕೊಂಡು, ಅದು ಅನಿವಾರ್ಯ ಎಂದು ಹೇಳಿರುವುದು ಆಶ್ಚರ್ಯಕರವೇನಲ್ಲ.

ಆದರೆ ದಿನದ ಪ್ರಕ್ರಿಯೆಯು ಮುಂದುವರೆದಂತೆ ಅಹಿಂಸಾ ತತ್ತ್ವಕ್ಕೆ ಕಟಿಬದ್ಧರಾದ ಕೆಲವು ಶಿಕ್ಷಕರು ಅವರ ಅನುಭವಗಳನ್ನು ಹಂಚಿಕೊಳ್ಳುತ್ತಾ ಸಾವಕಾಶವಾಗಿ ಮತ್ತು ಸಹಾನುಭೂತಿಯಿಂದ ಇತರರನ್ನು ತಮ್ಮ ನಿಲುವಿನೆಡೆಗೆ ಹೊರಳಿಸುವುದನ್ನು ನೋಡುವುದು ಬಹಳ ಸ್ಫೂರ್ತಿದಾಯಕವಾಗಿತ್ತು. ಶಿಕ್ಷಕರಾದ ನೀವು ಈ ಕ್ರೌರ್ಯದ ಚಕ್ರವನ್ನು ಕತ್ತರಿಸಬಹುದು ಮತ್ತು ಹಾಗೆ ಮಾಡಲೇಬೇಕು ಕೂಡ.

**ತರಗತಿಯಲ್ಲಿ ಗುಣಾತ್ಮಕ ಮನಸ್ಥಿತಿ**

ನಮ್ಮ ಭೌತಿಕ ಸನ್ನಿವೇಶಗಳು, ಸಮಾಜದಲ್ಲಿ ನಮ್ಮ ಸ್ಥಾನ, ಅಷ್ಟೇ ಅಲ್ಲದೆ ನಮ್ಮ ಬಾಹ್ಯ ಸೌಂದರ್ಯ ಈ ಎಲ್ಲ ಅಂಶಗಳಿಂದ ನಮ್ಮ ಸಂತೋಷವು ಪ್ರಭಾವಿಸಲ್ಪಡುತ್ತದೆ ಎಂದು ಅರಿಸ್ಟಾಟಲ್ ವಾದಿಸುತ್ತಾನೆ. ಆದಾಗ್ಯೂ ಆನಂದ ಎಂಬುದು ನಮ್ಮ ವರ್ತನೆಯ ಮತ್ತು ಅಭ್ಯಾಸಗಳ – ಅಂದರೆ ಒಂದು ಗುಣದ – ಆಧಾರದಲ್ಲಿದೆ, ಅದೃಷ್ಟದಲ್ಲಲ್ಲ. ಅಂತಹ ವರ್ತನೆ ಮತ್ತು ಅಭ್ಯಾಸಗಳನ್ನು ಅಳವಡಿಸಿಕೊಂಡ ಮನುಷ್ಯನು ತನ್ನ ದುರದೃಷ್ಟಗಳನ್ನು ಸಮಚಿತ್ತದಿಂದ ಹಾಗು ಸೂಕ್ತ ದೃಷ್ಟಿಕೋನದಿಂದ ಅನುಭವಿಸಬಲ್ಲನು ಮತ್ತು ಯಾವುದೇ ಸಮಯದಲ್ಲಿ ಕೂಡ ನಿಜವಾಗಿಯೂ ದುಃಖಿ ಎಂದು ಹೇಳುವುದಿಲ್ಲ. 5

ಮಕ್ಕಳ ಮನಸ್ಸು ಯಾವಾಗ ದೈನಂದಿನ ಬದುಕಿನ ಒತ್ತಡಗಳಿಂದ ತುಂಬಿರುತ್ತದೆಯೋ ಆಗ ಕಲಿಕೆಯು ಕುಂಟಿತವಾಗುತ್ತದೆ ಎಂದು ಸಂಶೋಧನೆಯು ಹೇಳುತ್ತದೆ. ಹಸಿದ ಹೊಟ್ಟೆಯಿಂದಿರುವ ಯಾವುದೇ ಮಗುವು ಕಲಿಯಲಾರದು ಹಾಗುಅಪೌಷ್ಟಿಕತೆಯು ಕಲಿಕೆಯ ಮೇಲೆ ಪ್ರಭಾವಿಸುತ್ತದೆ ಎಂಬ ವಾಸ್ತವವನ್ನು ಹೇಗೆ ನಾವು ಅರಿತುಕೊಂಡಿದ್ದೇವೆಯೋ ಹಾಗೆಯೇ ಅಸಂತುಷ್ಟ ಅಥವಾ ಒತ್ತಡದಿಂದ ಇರುವ ಮಕ್ಕಳು ಪೂರ್ಣ ಸಾಮರ್ಥ್ಯಕ್ಕೆ ತಕ್ಕಂತೆ ಕಲಿಯಲಾರರು ಹಾಗು ಬೆಳೆಯಲಾರರು ಎಂಬುದನ್ನು ನಮ್ಮ ವ್ಯವಸ್ಥೆ ಮತ್ತು ಶಿಕ್ಷಕರು ಗುರುತಿಸಿ ಅದಕ್ಕೆ ಸೂಕ್ತವಾಗಿ ಸ್ಪಂದಿಸಬೇಕು.

ಮಕ್ಕಳು ಸಂಕಷ್ಟಗಳನ್ನು ನಿಭಾಯಿಸುತ್ತಾ ಉಲ್ಲಾಸಶೀಲತೆಯನ್ನು ಬೆಳೆಸಲು, ತಮ್ಮ ಸಾಮರ್ಥ್ಯ ಮತ್ತು ಅವಕಾಶಗಳನ್ನು ಗುರುತಿಸಿ ಅವನ್ನು ಮೆಚ್ಚುವಂತೆ, ಆಶಾಭಾವದಿಂದ, ಗುಣಾತ್ಮಕ ಮನಸ್ಥಿತಿಯಿಂದ ಇದ್ದು, ತಮ್ಮ ಉತ್ತಮ ಮತ್ತು ಸುಖೀ ಜೀವನಕ್ಕೆ ಪ್ರಯತ್ನಶೀಲರಾಗುವಂತೆ – ಶಿಕ್ಷಕರು ಸಹಾಯ ಮಾಡಬಲ್ಲರು ಮತ್ತು ಮಾಡಬೇಕು. ಇತರರೆಡೆಗೆ ಸಹಾನುಭೂತಿಯನ್ನು ಹೊಂದಿದ್ದು, ಅವರ ಅಗತ್ಯಗಳಿಗೆ ಸ್ಪಂದಿಸುವಂತೆ ಉತ್ತಮ ಪ್ರಜೆಯಾಗುವುದರಲ್ಲಿ ತನ್ನನ್ನು ತಾನೇ ಇಷ್ಟಪಡುವುದು (ಆತ್ಮಸ್ಥೈರ್ಯ, ಸ್ವಅರಿವು, ಆತ್ಮಗೌರವ, ಆತ್ಮನಿಗ್ರಹ ಮುಂತಾದವು) ಮುಖ್ಯ ಪಾತ್ರವಹಿಸುತ್ತದೆ.

**ದಿನನಿತ್ಯದ ಸಂವಹನ ಮತ್ತು ಕೆಳಗಿನ ಸರಳ ಹಾಗು ನಿಯಮಿತ ಚಟುವಟಿಕೆಗಳ ಮೂಲಕ ನಿಮ್ಮ ಮಕ್ಕಳಿಗೆ ನೀವು ಸಹಾಯ ಮಾಡಬಹುದು :**

- ಸಣ್ಣ ಸಣ್ಣ ವಸ್ತುಗಳಿಂದ ಆನಂದಪಡುವುದು
- ಪ್ರತಿದಿನ ಪ್ರತಿ ಅವಧಿಯನ್ನು ನಗುಮೊಗದಿಂದ ಆರಂಭಿಸುವುದು
- ಧನ್ಯತೆಯ ಭಾವವನ್ನು ಹೊಂದಿರುವುದು
- ಗುಣಾತ್ಮಕ ಧೋರಣೆಯನ್ನು ಹೊಂದಿರುವುದು ಮತ್ತು ಎಲ್ಲ ಸನ್ನಿವೇಶಗಳಲ್ಲೂ ಒಳ್ಳೆಯದನ್ನೇ ಕಾಣುವುದು
- ಈಗ, ಇಲ್ಲಿ ಬದುಕುವುದು
- ತಮ್ಮೆಡೆಗೂ ಸೌಮ್ಯರಾಗಿರುವುದು
- ಅಗತ್ಯವಿದ್ದಾಗ ಸಹಾಯವನ್ನು ಕೇಳುವುದು
- ದುಃಖ ಹಾಗು ಭ್ರಮನಿರಸನಗಳನ್ನು ಮೀರುವುದು
- ಚಿಂತನಶೀಲವಾಗಿರುವುದನ್ನು ಅಭ್ಯಾಸಮಾಡುವುದು
- ನಿಸರ್ಗದಲ್ಲಿ ನಡಿಗೆ
- ನಗುತ್ತಾ ಇರಲು ಹಾಗುಗೂ ಆಟವಾಡಲು ಸಮಯ ಮಾಡಿಕೊಳ್ಳುವುದು

**ತರಗತಿ ಮತ್ತು ಲಿಂಗ**

ಲಿಂಗದ ಬಗೆಗಿನ ಸಿಎಂಸಿಎ ಸಂವಾದಗಳಲ್ಲಿ, ಹೆಣ್ಣುಮಕ್ಕಳು, ತಾವು ಅನಾರೋಗ್ಯಪೀಡಿತರಾದಾಗ ವೈದ್ಯರಲ್ಲಿಗೆ ಕರೆದುಕೊಂಡು ಹೋಗಲು ಹೆತ್ತವರು ಕಾಯುವುದು, ಆದರೆ ಸಹೋದರರಿಗೆ ಹಾಗಾದಾಗ ತಕ್ಷಣ ಸ್ಪಂದಿಸುವುದು ಅಥವಾ ಹೆಣ್ಣುಮಕ್ಕಳಿಗೆ ಮೊಟ್ಟೆ ಅಥವಾ ಹಾಲು ಮಿತ ಪ್ರಮಾಣದಲ್ಲಿ ನೀಡುವುದು ಅಥವಾ ಗಂಡುಮಕ್ಕಳಿಗೆ ರಸಭರಿತ ಮಾಂಸದ ಆಹಾರ ದೊರಕುವುದು, ಗಂಡು ಮಕ್ಕಳು ತಾವು ಬೇಗನೆ ದುಡಿಯಲು ಆರಂಭಿಸುವುದರ ಹಾಗೂ 'ಗಂಡಸಿನ' ರೀತಿ ಇರುವುದರ ಬಗ್ಗೆ ನಿರೀಕ್ಷೆಗಳು– ಹೀಗೆ ಹತ್ತುಹಲವು ಎದೆ ಬಿರಿಯುವಂಥ ತಮ್ಮ ಕಥೆಗಳನ್ನು ಹೇಳಿಕೊಂಡಾಗ ಮಕ್ಕಳ ಕಣ್ಣುಗಳು ತೇವವಾಗುವುದನ್ನು ಗಮನಿಸಿದ್ದೇವೆ. ನಾವು ಕಥೆಗಳನ್ನು ಅಷ್ಟೇ ಅಲ್ಲದೇ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳುತ್ತಾ ಲಿಂಗಾಧಾರಿತ ಚಿಂತನೆಯ ಆಯಾಮಗಳನ್ನು ಪ್ರಶ್ನಿಸಬಹುದು. ಇಂತಹ ಸಂವಾದಗಳಿಗೆ ಒಡ್ಡಿಕೊಳ್ಳಲು ನಮಗೆ ಹೆಚ್ಚು ದುಬಾರಿಯಾದ ಸಾಮಗ್ರಿಗಳೇನೂ ಬೇಕಿಲ್ಲ – ಸಹೋದರನಿಗೆ ಮಾತ್ರ ಮೊಟ್ಟೆ ದೊರಕುತ್ತದೆ ಎನ್ನುವ ಒಂದು ಸರಳ, ಪುಟ್ಟ ಉದಾಹರಣೆಯಿಂದಲೇ ಆರಂಭಿಸಬಹುದು.

ಮಕ್ಕಳಿಗೆ ದೈನಂದಿನ ಕೆಲಸಗಳನ್ನು ವಹಿಸುವಾಗ ಸೂಕ್ಷ್ಮತೆ ಉಳ್ಳವರಾಗಿದ್ದು, ಹೆಣ್ಣುಮಕ್ಕಳು ಹಾಗು ಗಂಡುಮಕ್ಕಳು ಯಾವುದೇ ಕೆಲಸವನ್ನು ಮಾಡಲು ಸಿದ್ಧರಾಗುವಂತೆ ಮಾಡಬೇಕಾಗುತ್ತದೆ. ಉದಾಹರಣೆಗೆ ಹುಡುಗರು ರಂಗೋಲಿ ಹಾಕಲು ಕಲಿತು ಶಾಲೆಯ ಕಾರ್ಯಕ್ರಮಗಳಲ್ಲಿ ರಂಗೋಲಿ ಚಿತ್ರಿಸುವುದು, ಹೆಣ್ಣುಮಕ್ಕಳು ಧ್ವನಿವರ್ಧಕವನ್ನು ನಿಯಂತ್ರಿಸುವುದು ಮತ್ತು ತಾಂತ್ರಿಕ ವಿಷಯಗಳನ್ನು ನಿರ್ವಹಿಸುವುದು. ನಿಜ, ಅಲ್ಲಿ ಕೆಲವು ಪ್ರತಿರೋಧ ತಲೆದೋರಿದರೂ, ತಪ್ಪುಗಳಾದರೂ ಈ ಅಸಮರ್ಪಕತೆ ಹಾಗು ದೋಷಗಳೇ ಅಮೂಲ್ಯವಾದ ಮತ್ತು ಆಳವಾದ ಕಲಿಕೆಗೆ ಎಡೆಮಾಡಿಕೊಡುತ್ತವೆ. ಲಿಂಗಾಧಾರಿತ ವರ್ತನೆಯ ಪಡಿಯಚ್ಚು ಮಾದರಿಗಳು ಮಕ್ಕಳಲ್ಲಿ ಬಿತ್ತದಂತೆ ನಾವು ಎಚ್ಚರವಹಿಸಬೇಕು. ಉದಾಹರಣೆಗೆ ಅವರಿಗೆ ಗಾಯವಾದಾಗ ಗಂಡುಮಕ್ಕಳು ಅಳಬಾರದು ಎಂದು ಬಲವಂತ ಮಾಡಬೇಡಿ, ಹೆಣ್ಣುಮಕ್ಕಳು ಲಾಗ ಹೊಡೆಯುವುದನ್ನು, ಬುಗುರಿ ಆಡಿಸುವುದನ್ನು ತಡೆಯಬೇಡಿ.

ಲಿಂಗಾಧಾರಿತ ಗುರುತುಗಳ ಅರಿವು ಎಳೆಯ ವಯಸ್ಸಿನಲ್ಲೇ ಆರಂಭವಾಗುತ್ತದೆ. ಹಾಗಾಗಿ ಲಿಂಗ ಎನ್ನುವುದು ಹೀಗೆ ಅಥವಾ ಹಾಗೆ ಎಂದಷ್ಟೇ ಅಲ್ಲದೇ ಒಂದು ವಿಸ್ತಾರವಾದ ಹರವು ಇದೆ ಎಂಬ ವಿವೇಚನೆಯನ್ನು ನಾವು ಹೊಂದಿರಬೇಕು. ನಿಮ್ಮ ತರಗತಿಯ ಮಕ್ಕಳಲ್ಲಿ ಲಿಂಗಾಧಾರಿತ ಪಾತ್ರಗಳ ಮತ್ತು ವರ್ತನೆಗಳ ನಿರೀಕ್ಷೆಗಳನ್ನು ಬಿತ್ತಬೇಡಿ. ಬದಲಾಗಿ ಕಥೆಗಳಲ್ಲಿ ಬರುವ ಲಿಂಗಾಧಾರಿತ ಪಾತ್ರಗಳಿಗೆ ಸವಾಲೊಡ್ಡಿ ಹಾಗು ನಿಮ್ಮ ವಿದ್ಯಾರ್ಥಿಗಳು ಲಿಂಗದ ಬಗೆಗಿನ ತಮ್ಮ ಚಿಂತನೆಗಳನ್ನು ಮತ್ತು ಪೂರ್ವಾಗ್ರಹಗಳನ್ನು ಪರೀಕ್ಷಿಸುವ ಹಾಗೆ ಸಹಾಯ ಮಾಡಿ.

**ತರಗತಿಯಲ್ಲಿ ವಿವಿಧತೆ**

ವೈವಿಧ್ಯಮಯವಾದ ದೇಶದಲ್ಲಿ ಸೌಹಾರ್ದತೆಯಿಂದ ಜೊತೆಗೆ ಬದುಕುವುದು ಹಾಗುಬದಲಾವಣೆಗಳನ್ನು, ಭಿನ್ನತೆಗಳನ್ನು ಅಪ್ಪಿಕೊಳ್ಳುವುದು ಪ್ರಜಾಪ್ರಭುತ್ವಕ್ಕೆ ಅಗತ್ಯವಾದ ಮುಖ್ಯ ಕೌಶಲವಾಗಿದ್ದು, ಇದು 21ನೇ ಶತಮಾನದ ವೃತ್ತಿ ಕೌಶಲಗಳಲ್ಲಿ ಬಹಳ ಮೌಲ್ಯಯುತವಾದದ್ದು ಆಗಿದೆ. ಕಲಿಯುವವರ ನಡುವೆ ಅಂತರ್ ಸಾಂಸ್ಕೃತಿಕ ಸಾಮರ್ಥ್ಯದ ಬೆಳವಣಿಗೆಗೆ ಎಲ್ಲಾ ಹಂತಗಳ ಶಿಕ್ಷಕರು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ. (ಃಚಿಡಿಡಿಚಿಣ ಚಿಣ ಚಿಟ., 2014) 6 ಶಿಕ್ಷಕರಾಗಿ ನೀವು ಜಗತ್ತನ್ನು ತರಗತಿಯೊಳಗೆ ತರಲು ದಿನಂಪ್ರತಿ 15 ನಿಮಿಷಗಳ ಸಮಯ ನೀಡಬಹುದು! ಗೊತ್ತಿಲ್ಲದಿರುವುದರ ಬಗೆಗಿನ ಅಪನಂಬಿಕೆ ಮತ್ತು ಭಯಗಳನ್ನು ಹೋಗಲಾಡಿಸುವಲ್ಲಿ, ನಾವು ಪರರ ಬಗ್ಗೆ ಏನನ್ನು ಕಲ್ಪಿಸಿಕೊಳ್ಳುತ್ತೇವೆ ಹಾಗು ಪರಸ್ಪರ ಏನನ್ನು ಕಲಿಯಬಹುದು ಎಂಬ ವಿಷಯಗಳಲ್ಲಿ ಶಿಕ್ಷಣ ಪಾತ್ರವಹಿಸಬೇಕು. ಪುಟ್ಟ ಮಕ್ಕಳಿಗೆ ಆಹಾರ, ಸಂಗೀತ, ಅನ್ವೇಷಣೆ, ಪ್ರವಾಸ ಮುಂತಾದವು ಅಡೆತಡೆಗಳನ್ನು ಮೀರಿ ಭಿನ್ನತೆಗಳನ್ನು ಸಂಭ್ರಮಿಸಲು ಇರುವ ಮುಖ್ಯ ದಾರಿಗಳು.

ಉದಾಹರಣೆಗೆ ವಿಶ್ವ ಭೂಪಟದಲ್ಲಿ ಪ್ರಯಾಣಿಸಿ ಅಥವಾ ಗೋಳವನ್ನು ತಿರುಗಿಸುತ್ತ ಬೇರೆಬೇರೆ ಜಾಗಗಳಿಗೆ ಹೋಗಿ ವಿಭಿನ್ನ ಭೂಪ್ರದೇಶಗಳನ್ನು 'ಭೇಟಿ' ಮಾಡುವುದು. ನಿಯತಕಾಲಿಕೆಗಳು, ವಿಡಿಯೋಗಳನ್ನು ನೋಡುವುದರ ಮೂಲಕ ವಿಭಿನ್ನ ಜೀವನಶೈಲಿಗಳು, ವಿಭಿನ್ನ ಜನರು – ಅವರ ರೂಪ, ಆಹಾರ, ಉಡುಗೆ, ಮಾತಿನ ಶೈಲಿ, ಭಾಷೆ ಹೀಗೆ ಎಲ್ಲವನ್ನೂ ಗಮನಿಸುವುದು. ಇದರಿಂದ ಅಪರಿಚಿತವಾಗಿರುವುದು ಪರಿಚಿತವಾಗುತ್ತದೆ, ನಾವು ಅವರು ಎನ್ನುವ ಭೇದಗಳು ಕರಗುತ್ತಾ ಹೋಗುತ್ತದೆ! ಈ ಮಟ್ಟದಿಂದ ನಂತರದಲ್ಲಿ ಇನ್ನು ಹೆಚ್ಚಿನ ಸವಾಲಿನ ಸಂವಾದಗಳೆಡೆಗೆ ಅಂದರೆ ಸಮಾನತೆ, ತಾರತಮ್ಯ ಮುಂತಾದವುಗಳನ್ನು ಶಾಲೆಯ ಮುಂದಿನ ವರ್ಷಗಳಲ್ಲಿ ತೆರೆದುಕೊಳ್ಳಬಹುದು.

**ಪರಿಸರ ಮತ್ತು ತರಗತಿಗಳ ನಡುವೆ ಸಾಮರಸ್ಯ**

ಕೀಟಗಳನ್ನು ಕೊಲ್ಲಲು, ಪ್ರಾಣಿಗಳನ್ನು ಕೆಣಕಿ ಅವುಗಳಿಗೆ ಕಲ್ಲೆಸೆಯಲು, ಗಾಯಗೊಂಡ, ಗಾಬರಿಯಾದ ಅಥವಾ ಹಸಿದಿರುವ ಪ್ರಾಣಿಯನ್ನು ನಿರ್ಲಕ್ಷಿಸಲು ಮಗುವಿಗೆ ಹೇಳಿಕೊಡುವವರು ಯಾರು? ಈ ವರ್ತನೆಗಳು ಕಲಿಯಲ್ಪಡುತ್ತವೆ ಹಾಗು ಕೇವಲ ಅರ್ಥಪೂರ್ಣವಾದ ಶಿಕ್ಷಣ ಮಾತ್ರ ಮಗುವನ್ನು ಇವುಗಳನ್ನು ಮರೆತು ಹೊಸತನ್ನು ಕಲಿಯುವ ಹಾಗೆ ಮಾಡಬಲ್ಲದು.

ಪ್ರಾಥಮಿಕ ಕರ್ತವ್ಯವಾದ ಪ್ರತಿಯೊಂದು ಜೀವಿಯ ಬಗೆಗಿನ ಈ ಸಹಾನುಭೂತಿಯನ್ನು ಮನೆಯಲ್ಲಿರುವ ಜೇಡ, ಹಲ್ಲಿ, ಇರುವೆಗಳು, ಜೇನುಗಳು, ಹಕ್ಕಿಗಳು, ಸಾಕುಪ್ರಾಣಿಗಳು, ಮರಗಿಡಗಳು ಬೆಳೆಸಬಲ್ಲವು. ಸಾಮಾನ್ಯ ಶಾಲಾ ದಿನಗಳಲ್ಲಿ ಪ್ರಾಣಿಪಕ್ಷಿಗಳಿಗೆ ಆಹಾರ ನೀಡುವ, ಗಿಡ ಮರಗಳನ್ನು ಆರೈಕೆ ಮಾಡುವ, ಅಲ್ಲದೆ, ತರಗತಿ ಕೊಠಡಿಯ ಗೋಡೆಗಳ ಮೇಲಿರುವ ಹಲ್ಲಿಗಳಿಗೆ ಹೆಸರಿಡುವ, ಆಟದ ಮೈದಾನದ ಇರುವೆಗಳ ತಾಣಕ್ಕೆ ಹೆಸರಿಡುವ ಮುಂತಾದ ಪ್ರಬಲವಾದ ಚಟುವಟಿಕೆಗಳನ್ನು ಮಾಡಬಹುದು. ಪರಿಸರದ ಬಗ್ಗೆ ಕಾಳಜಿ ವಹಿಸುವುದು ಕೇವಲ ವಿಜ್ಞಾನದ ಪಠ್ಯವಿಷಯವಲ್ಲ, ಅದೊಂದು ಮಾನವನ ಜವಾಬ್ದಾರಿಯೆಂದು ಇದು ಮಕ್ಕಳಿಗೆ ಕಲಿಸಿಕೊಡುತ್ತದೆ.

ಪಕ್ಷಿಗಳು, ಇರುವೆಗಳು ಹಾಗು ನಾಯಿಗಳು ಮುಂತಾದವುಗಳ ಬಗ್ಗೆ ಕಾಳಜಿ ತೋರುವ ಮಕ್ಕಳು ಕಾಡಿನಲ್ಲಿರುವ ಮೂಲಾಧಾರ ಸಸ್ಯಪ್ರಭೇದಗಳು ಹಾಗು ತಮ್ಮ ಒಳಿತಿನ ಬಗ್ಗೆ ಆಳವಾದ ಸಂಬಂಧ ಇರುವುದನ್ನು ಗುರುತಿಸಬಲ್ಲರು. ಈ ಹಂತದಿಂದ ಮುಂದೆ ಮಕ್ಕಳು ತಾವು ಬೆಳೆಯುತ್ತಾ ಹೋದಂತೆ ಸಹಜೀವನ ಹಾಗು ಸುಸ್ಥಿರತೆಯ ಬಗ್ಗೆ ವಿಮರ್ಶಾತ್ಮಕವಾಗಿ ಮತ್ತು ಕ್ರಿಯಾತ್ಮಕವಾಗಿ ತೊಡಗಿಸಿ-ಕೊಂಡು ಕೆಲಸ ಮಾಡುವಂತೆ ಸಹಾಯಮಾಡಬಲ್ಲದು.

**ಮಕ್ಕಳ ಹಕ್ಕುಗಳು, ಕರ್ತವ್ಯಗಳು ಮತ್ತು ತರಗತಿ**

ತರಗತಿಯ ಅನುಭವಗಳು ಮಗುವಿನ ಮೊಟ್ಟಮೊದಲ ಪ್ರಜಾಪ್ರಭುತ್ವದ ಅನುಭವಗಳಾಗಿರುತ್ತವೆ. ಕಸವನ್ನು ರಸ್ತೆಯ ಮೇಲೆ ಎಸೆಯುವುದನ್ನೇ ಆಗಲಿ ಅಥವಾ ಸಾರ್ವಜನಿಕ ಆಸ್ತಿ, ಪಾರಂಪರಿಕ ಕಟ್ಟಡಗಳು ಇವುಗಳನ್ನು ಹಾಳುಗೆಡುವುದನ್ನೇ ಆಗಲಿ ಎಲ್ಲಿ ಕಲಿಯುತ್ತಾರೆ? ಹನ್ನೆರಡನೆಯ ವಯಸ್ಸಿಗೆ ಮೋಟಾರ್ ಬೈಕ್ ಓಡಿಸುವುದು ಸರಿ ಎಂದು ಮಗು ಏಕೆ ಭಾವಿಸುತ್ತದೆ? ಯುವ ವಯಸ್ಕರು ಕಾನೂನುಗಳು ಇರುವುದೇ ಮುರಿಯಲು ಎಂದು ಏಕೆ ಭಾವಿಸುತ್ತಾರೆ? ಈ ರೀತಿಯ ನಾಗರಿಕ ವರ್ತನೆಗಳನ್ನು ಎಲ್ಲಿ ಮತ್ತು ಹೇಗೆ ಕಲಿಯುತ್ತಾರೆ ಹಾಗು ಇವುಗಳನ್ನು ಬಿಡುವುದು ಹೇಗೆ?

ಅನುಭವಾತ್ಮಕವಾಗಿಯಷ್ಟೇ ಪ್ರಜಾಪ್ರಭುತ್ವವನ್ನು ಚೆನ್ನಾಗಿ ಕಲಿಯಬಹುದು. ಹಿರಿಯರು ಬಹಳಷ್ಟು ಬಾರಿ ದೃಢವಾಗಿ ಹೇಳುವುದನ್ನು ದರ್ಪವೆಂದೂ, ಸರಿಯಲ್ಲವೆಂದು ಹೇಳಿದರೆ ಉದ್ಧಟತನವೆಂದೂ ಹಾಗು ಶಿಸ್ತು ಎಂದರೆ ಪ್ರಶ್ನಾತೀತವಾದ ವಿಧೇಯತೆ ಮತ್ತು ಒಪ್ಪಿ ಬಾಳುವುದು ಎಂದೂ ಅಪಾರ್ಥ ಮಾಡಿಕೊಳ್ಳುತ್ತಾರೆ.

ಯಾವ ಮಕ್ಕಳಿಗೆ ಶಾಲೆಯಲ್ಲಿ ಅಧಿಕಾರದ ಜೊತೆಗೆ ವ್ಯವಹರಿಸುವುದಕ್ಕೆ ಅಥವಾ ಅವರನ್ನು ಒಳಪಡುವ ನಿಯಮಗಳಲ್ಲಿ ಅವರ ಅಭಿಪ್ರಾಯಕ್ಕೆ ಅವಕಾಶ ಇಲ್ಲವೋ ಅವರು ವಯಸ್ಕರಾದ ಮೇಲೆ ಕ್ರಿಯಾಶೀಲವಾಗಿ ತಮ್ಮ ಕರ್ತವ್ಯಗಳನ್ನು ನಿಭಾಯಿಸುತ್ತಾ ತಮ್ಮ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಎಂದು ಸಾಮಾನ್ಯ ಜ್ಞಾನದಿಂದ ನಾವು ತಿಳಿದುಕೊಂಡಿದ್ದೇವೆ! ಹೊಡೆತ ತಿಂದ ಅಥವಾ ಗುದ್ದಿಸಿಕೊಂಡ ಮಕ್ಕಳು ವಯಸ್ಕರಾದ ಮೇಲೆ ಧನಾತ್ಮಕವಾಗಿ ಅಧಿಕಾರ ಹಾಗು ಬಲದ ಜೊತೆಗೆ ಸೂಕ್ತವಾಗಿ ವ್ಯವಹರಿಸಲಾರರು. ತರಗತಿಯಲ್ಲಿ ಹುಡುಗಿಯರು ಮತ್ತು ಹುಡುಗರು ಬೇರ್ಪಟ್ಟು ಇರುವುದನ್ನು ಯಾರು ಅನುಭವಿಸುತ್ತಿರುವರೋ ಅವರು ವೈಯಕ್ತಿಕ ಮತ್ತು ವೃತ್ತಿ ಸಂಬಂಧಗಳಲ್ಲಿ ಪರಸ್ಪರ ಗೌರವಯುತವಾದ ಆರೋಗ್ಯಕರ ಸಂಬಂಧಗಳನ್ನು ಕಟ್ಟಿಕೊಳ್ಳಲಾರರು ಹಾಗು ಬದುಕಿನಲ್ಲಿ ಜವಾಬ್ದಾರಿಯುತ ಆಯ್ಕೆಗಳನ್ನು ಆರಿಸಿಕೊಳ್ಳಲಾರರು.

ನಿಯಮಗಳನ್ನು ರೂಪಿಸುವಲ್ಲಿ ಮಕ್ಕಳನ್ನು ಎಲ್ಲ ಹಂತಗಳಲ್ಲೂ ಶಿಕ್ಷಕರು ಒಳಗೊಳ್ಳಬಹುದು. ಉದಾಹರಣೆಗೆ ಶೌಚಾಲಯ ಶುಚಿಯಾಗಿಟ್ಟುಕೊಳ್ಳಲು, ಶಾಲೆಯಲ್ಲಿ ಆಹಾರ ವ್ಯರ್ಥವಾಗುವುದನ್ನು ತಡೆಯಲು, ತರಗತಿಗಳಲ್ಲಿ ಹೆಚ್ಚಿನ ಗದ್ದಲದ ಸವಾಲುಗಳನ್ನು ಎದುರಿಸುವುದು ಇತ್ಯಾದಿ. ಯಾವಾಗ ಮಕ್ಕಳು ಪರಿಹಾರಗಳನ್ನು ಕಂಡುಹಿಡಿಯುವ ಜವಾಬ್ದಾರಿಯನ್ನು ಹಂಚಿಕೊಳ್ಳುತ್ತಾರೋ ಹಾಗು ಜೊತೆಗೂಡಿ ರಚಿಸುವುದು, ರೂಪಿಸುವುದು ಮಾಡುತ್ತಾರೋ ಆಗ ಅವರು ಪ್ರಜಾಪ್ರಭುತ್ವವನ್ನು ಅನುಭವಿಸಿ, ಸ್ವಾತಂತ್ರ್ಯವು ಜವಾಬ್ದಾರಿಯ ಜೊತೆಗೆ ಬರುತ್ತದೆ ಎಂಬುದನ್ನು ಕಲಿಯುತ್ತಾರೆ. ಈ ಹಂತದಿಂದ ಮುಂದಿನ ವರ್ಷಗಳಲ್ಲಿ ನಾವು ನಾಗರೀಕ ಹಕ್ಕು ಮತ್ತು ಕರ್ತವ್ಯಗಳನ್ನು ಶಾಲೆಯಲ್ಲಿ ಬೆಳೆಸಬಹುದು.

**ಮುಕ್ತಾಯ**

ಶಿಕ್ಷಕ ಮತ್ತು ವಿದ್ಯಾರ್ಥಿ ಇವರ ನಡುವೆ ಆಗುವ ಕೆಲಸಗಳು ಉಂಟು ಮಾಡುವ ಪರಿವರ್ತನೆಯನ್ನು ಬೇರೆ ಯಾವುದೂ ಮಾಡಲಾರದು. ಕಲಿಯುವ – ಕಲಿಸುವ ಪ್ರಕ್ರಿಯೆಯಲ್ಲಿ ಮಾನವ ಸಂಬಂಧಗಳು ಬಲು ಮುಖ್ಯ. ಅತ್ಯುತ್ತಮ ಸೌಮ್ಯತೆಯನ್ನು ಶಾಲೆಯ ತರಗತಿಯಲ್ಲಿ ನಾನು ನೋಡಿದ್ದೇನೆ – ಸಂಯಮವನ್ನು ಹಾಗು ಪ್ರೀತಿಯನ್ನು ಹೊರಹೊಮ್ಮಿಸುವ ಶಿಕ್ಷಕರು, ಇವರು ಸಹಜವಾಗಿಯೇ ಮಕ್ಕಳೊಡನೆ ಇರುವುದನ್ನು ಸುಖಿಸುತ್ತಾರೆ, ಆನಂದಿಸುತ್ತಾರೆ. ಅವರ ಧ್ವನಿಯಲ್ಲಿ ನಗು ಮತ್ತು ಅಚ್ಚರಿ, ಕಣ್ಣಿನಲ್ಲಿ ಬೆಳಕಿನ ಕಿರಣಗಳು ಇರುತ್ತವೆ! ಮಕ್ಕಳು ಸೌಖ್ಯದಿಂದಿರಲು ಮತ್ತು ತರಗತಿ ಹಾಗು ಶಾಲೆಗಳನ್ನು ಪ್ರಜಾಪ್ರಭುತ್ವವಾದಿಗಳನ್ನಾಗಿ ಮೂಡಿಸಲು ನಮಗೆ ದುಬಾರಿಯಾದ ಸಾಮಗ್ರಿಗಳೇ ಆಗಲೀ ಅಥವಾ ವಿಸ್ತೃತವಾದ ತರಬೇತಿ ಕಾರ್ಯಕ್ರಮಗಳಾಗಲೀ, ಬಹಳಷ್ಟು ಸಮಯ ಅಥವಾ ಪಠ್ಯಕ್ರಮದಿಂದ ದೂರ ಹೋಗುವುದಾಗಲೀ ಅಗತ್ಯವಿಲ್ಲ. ಧನಾತ್ಮಕವಾದ ಹಾಗು ಸಶಕ್ತಗೊಳಿಸುವ ಶಾಲಾ ಮತ್ತು ತರಗತಿಯ ಅನುಭವಗಳನ್ನು ನೀಡುವ ಶಿಕ್ಷಕರು ಬೇಕು ಅಷ್ಟೇ.

ದಿನನಿತ್ಯದ ಚಟುವಟಿಕೆಗಳನ್ನು ಮತ್ತು ಸವಾಲುಗಳನ್ನು ಅವಕಾಶಗಳನ್ನಾಗಿ ಮಾರ್ಪಡಿಸಿಕೊಂಡು ಸಂವೇದನಾಶೀಲ, ಚಿಂತನಶೀಲ ಹಾಗು ಕ್ರಿಯಾತ್ಮಕ ಪ್ರಜೆಗಳಾಗುವ ನಿಟ್ಟಿನಲ್ಲಿ ಮಕ್ಕಳ ಪರಿವರ್ತನೆಗೆ ಕಾರ್ಯಪ್ರವೃತ್ತರಾಗುವ ಶಿಕ್ಷಕರು ಬೇಕು. ಅವರ ಮೇಲೆ ಹೊರಿಸುವ ಜವಾಬ್ದಾರಿಗಳನ್ನು ಆಶಾವಾದದಿಂದ, ಭರವಸೆಯಿಂದ ಹಾಗು ಧನಾತ್ಮಕ ಧೋರಣೆಯಿಂದ ನಿರ್ವಹಿಸುವ ಶಿಕ್ಷಕರು ನಮಗೆ ಬೇಕು. ತಾವು ಮಾಡುವುದರಲ್ಲಿ ತುಡಿತವಿರುವ, ಮಕ್ಕಳನ್ನು ಪ್ರೀತಿಸುವ ಶಿಕ್ಷಕರು ಬೇಕು! ಅಂತಹ ಸಾಕಷ್ಟು ಶಿಕ್ಷಕರು ನಮ್ಮಲ್ಲಿರುವುದು ಅದೃಷ್ಟ.





1. ಚಿಲ್ಡ್ರನ್ಸ್ ಮೂವ್‌ಮೆಂಟ್ ಫಾರ್ ಸಿವಿಕ್ ಅವೇರ್‌ನೆಸ್ (ಸಿ ಎಮ ಸಿ ಎ) ಬೆಂಗಳೂರಿನಲ್ಲಿ ಪ್ರಧಾನ ಕಛೇರಿ ಹೊಂದಿರುವ ಒಂದು ಲಾಭರಹಿತ ಸಂಸ್ಥೆ. ಒಳಗೊಳ್ಳುವ ಹಾಗು ಸುಸ್ಥಿರ ಭಾರತಕ್ಕಾಗಿ ಮಕ್ಕಳು ಹಾಗು ಯುವಕರನ್ನು ಕ್ರಿಯಾತ್ಮಕ ಪ್ರಜೆಗಳನ್ನಾಗಿ ಪರಿವರ್ತಿಸುವ ಕೆಲಸದಲ್ಲಿ ತೊಡಗಿದ್ದಾರೆ.


i Children's Movement for Civic Awareness (CMCA) is a nonprofit organization, head-quartered in Bengaluru. They work towards transforming children and young people into active citizens for an inclusive and sustainable India. Our research-backed pro-gram is run in schools, colleges and rural youth clubs. (cmcaindia.org)

ii Yuva Nagarik Meter – Young Citizen National Survey. (2015). (pp. 1-60, Publication). Bengaluru, KA: Children's Movement for Civic Awareness (CMCA).

iii Mental health status of adolescents in South-East Asia: Evidence for action. (2017). World Health Organization, New Delhi: Regional Office for South-East Asia; 2017. Li-cence: CC BY-NC-SA 3.0 IGO.

iv Krishnamurti, J. (1969). Chapter 6. In Freedom from the known. Harper & Row. Re-trieved from http://jiddu-krishnamurti.net/en/freedom-from-the-known/1968-00-00-jiddu-krishnamurti-freedom-from-the-known-chapter-6

v Aristotle on happiness – Happiness is not a state but an activity. (2013). Psychology Today. Retrieved from https://www.psychologytoday.com/us/blog/hide-and-seek/201301/aristotle-happiness

vi Barrett, M., Byram, M., Lázár, I., Mompoint-Gaillard, P. and Philippou, S. (2014). De-veloping Intercultural Competence through Education. Pestalozzi Series No. 3. Stras-bourg, Council of Europe Publishing.





**ಪ್ರಿಯಾ ಕೃಷ್ಣಮೂರ್ತಿ** ಅವರು ಚಿಲ್ಡ್ರನ್ಸ್ ಮೂವ್‌ಮೆಂಟ್ ಫಾರ್ ಸಿವಿಕ್ ಅವೇರ್‌ನೆಸ್ (ಸಿಎಮ್‌ಸಿಎ) ಇದರ ಸಹ ಸಂಸ್ಥಾಪಕರು. ಮುಕ್ತ ಮನಸ್ಸು ಮತ್ತು ಬುದ್ಧಿಯಲ್ಲಿ ಅಂತರ್ಗತವಾದ ಒಳ್ಳೆಯತನ ಮತ್ತು ಸಾಮರ್ಥ್ಯಗಳಲ್ಲಿ ಆಳವಾದ ನಂಬಿಕೆ ಹೊಂದಿರುವ ಪ್ರಿಯಾ ಅವರು ಇವುಗಳನ್ನು ನಮ್ಮ ಮಕ್ಕಳ ಎಳವೆಯಲ್ಲಿಯೇ ಅರಳಿಸುವುದು ಸೂಕ್ತ ಎಂದು ಕಂಡುಕೊಂಡಿದ್ದಾರೆ. ತರಗತಿ ಮತ್ತು ಸಾಂಸ್ಥಿಕ ಸನ್ನಿವೇಶಗಳಲ್ಲಿ ಪೌರತ್ವದ ಶಿಕ್ಷಣ ಹಾಗು ಜೀವನ ಕೌಶಲ ಶಿಕ್ಷಣಗಳಿಗೆ ಅಗತ್ಯವಾದ ಸಾಮಗ್ರಿಗಳ ಹಾಗು ಯೋಜನೆಗಳ ವಿನ್ಯಾಸದಲ್ಲಿ ಎರಡು ದಶಕಗಳ ಅನುಭವ ಹೊಂದಿದ್ದಾರೆ. ಅವರನ್ನು ಮೂಲಕ priya@cmcaindia.org ಸಂಪರ್ಕಿಸಬಹುದು.

ಅನುವಾದ: **ಜನಾರ್ದನ್** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಕಥೆಗಳ ಮೂಲಕ ಸಕ್ರಿಯ ಪೌರತ್ವದ ಬೋಧನೆ

ರಿಚಾ ಪಾಂಡೆ

ಜಗತ್ತಿನ ಎಲ್ಲಾ ಮಕ್ಕಳು ಕಥೆಗಳನ್ನು ಇಷ್ಟಪಡುತ್ತಾರೆ. ಅದನ್ನು ಅವರ ಅಜ್ಜಿಯಂದಿರೇ ಹೇಳಲಿ, ಅಥವಾ ಅನಿಮೇಟೆಡ್ ಕಾರ್ಟೂನುಗಳು ಅಥವಾ ಚಲನಚಿತ್ರಗಳ ಮೂಲಕ ಹಿನ್ನೆಲೆ ಧ್ವನಿ ನೀಡುವ ಕಲಾವಿದರೇ ಬಣ್ಣಿಸಲಿ, ಕಥೆಗಳು ಮಾತ್ರ ಮಕ್ಕಳು, ಕಾಣದ ಜಗತ್ತಿಗೆ ಇಣುಕಲು ಒಂದು ಕಿಂಡಿಯಂತೆ ಕೆಲಸ ಮಾಡುತ್ತವೆ. ಇವು ಎಲ್ಲಾ ಕಾಲದಲ್ಲೂ, ಎಲ್ಲಾ ಪ್ರದೇಶದಲ್ಲೂ ಏಕರೂಪವಾಗಿ ಜನರ ಮನ ಮುಟ್ಟುತ್ತವೆ. ಅಕ್ಬರನ ಬದುಕಿನ ಕುರಿತ ಆ ಕಾಲದ ಚಲನಚಿತ್ರವು ಸಮಾಜ ವಿಜ್ಞಾನದ ತರಗತಿಯನ್ನು ಇನ್ನಷ್ಟು ಆಸಕ್ತಿದಾಯಕವನ್ನಾಗಿಸುತ್ತದೆ. ಏಕೆಂದರೆ ಇದು ಯುದ್ಧಗಳು ಮತ್ತು ಹೋರಾಟಗಳಲ್ಲಿಯೇ ಮಗ್ನನಾಗಿದ್ದ ಅಕ್ಬರನನ್ನು ಒಬ್ಬ ಮನುಷ್ಯನಾಗಿ, ಮಕ್ಕಳು ಹಾಗು ಹಿರಿಯರೂ ಕೂಡ ಭಾವನಾತ್ಮಕವಾಗಿ ನೋಡುವಂತೆ ಮಾಡುತ್ತದೆ. ಹೀಗಾಗಿ, ಸಕ್ರಿಯ ಪೌರತ್ವಕ್ಕೆ ಅಗತ್ಯವಾದ ಜೀವನ ಕೌಶಲಗಳನ್ನು ಬೋಧಿಸಲು ಈ ಕಥೆಗಳನ್ನು ಹೇಗೆ ಬಳಸಿಕೊಳ್ಳಬಹುದು ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ.

ಸಮಾಜ ವಿಜ್ಞಾನದ ಶಿಕ್ಷಕಿಯಾಗಿ, 6ನೇ ತರಗತಿಯ ವಿದ್ಯಾರ್ಥಿಗ-ಳೊಂದಿಗೆ ಬ್ರಿಟೀಷರ ಆಳ್ವಿಕೆಯ ಕುರಿತು ಚರ್ಚಿಸುವಾಗ, ಸುಭದ್ರಾಕುಮಾರಿ ಚೌಹಾಣ್ ಅವರು ಬರೆದ 'ಖೂಬ್ ಲಡೀ ಮರ್ದಾನಿ ವೋ ತೊ ಝಾನ್ಸಿ ವಾಲಿ ರಾಣಿ ಥೀ' ಎಂಬ ಪ್ರಸಿದ್ಧ ಹಿಂದಿ ಕವಿತೆಯನ್ನು ಚರ್ಚಿಸಿದ್ದು ನನಗೆ ನೆನಪಿದೆ. ವಸಾಹತುಶಾಹಿ ಕಾಲದ ಕಾನೂನುಗಳನ್ನು, ನೀರಸ ವರದಿಗಳಾಗಿ ಓದುವುದಕ್ಕಿಂತಲೂ ವಸಾಹತುಶಾಹಿಯ ಕಾಲದಲ್ಲಿ ಜೀವಿಸಿದ್ದ ಜನರ ಕಥೆಗಳು ಹೆಚ್ಚು ಪ್ರಭಾವಶಾಲಿ ಅನುಭವ ಎನಿಸುತ್ತವೆ. ವಿದ್ಯಾರ್ಥಿಗಳು ಆ ದಿನ ಹೆಚ್ಚಿನ ಆಸಕ್ತಿ ತೋರಿಸಿದ್ದರು ಹಾಗು ಸಾಕಷ್ಟು ಪ್ರಮಾಣದಲ್ಲಿ ತೊಡಗಿಸಿ-ಕೊಂಡಿದ್ದರು. ಕೆಲವರು ಈ ಕವಿತೆಯನ್ನು ಹಾಡಲು ಪ್ರಾರಂಭಿಸಿದ್ದರು. ಸಾಕಷ್ಟು ಸಮಯ ಮತ್ತು ಸ್ವಾಯತ್ತತೆ ನೀಡಿದರೆ, ನಮ್ಮ ಮಕ್ಕಳು ಯಥಾಸ್ಥಿತಿಯನ್ನು ಪ್ರಶ್ನಿಸುವಂತೆ ಮಾಡಲು ಹಾಗು ಬದಲಾವಣೆಯ ಸೂತ್ರಧಾರರಾಗಲು ಅವರನ್ನು ಪ್ರೇರೇಪಿಸಲು ನಾನು ಇನ್ನೇನು ಮಾಡಬಹುದು ಎಂದು ಯೋಚಿಸುವಂತೆ ಮಾಡಿತು. ಅನುಭೂತಿ, ವೈಚಾರಿಕ ಚಿಂತನೆ ಮತ್ತು ಪ್ರಶ್ನಿಸುವ ಮನೋಭಾವ ಮುಂತಾದ ಕೌಶಲಗಳು ಮತ್ತು ಮೌಲ್ಯಗಳನ್ನು ಬಿತ್ತಲು ಯಾವ ರೀತಿಯ ಚಟುವಟಿಕೆಗಳನ್ನು ವಿನ್ಯಾಸಗೊಳಿಸ-ಬಹುದು?

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (2005), 'ಪಾಲ್ಗೊಳ್ಳುವಿಕೆಯ ಪ್ರಜಾಪ್ರಭುತ್ವದ ದೃಷ್ಟಿಕೋನವನ್ನು ಸಾಧಿಸುವುದಕ್ಕಾಗಿ ಮಕ್ಕಳಿಗೆ ಪ್ರಜಾತಾಂತ್ರಿಕತೆ ಮತ್ತು ಪ್ರಜಾತಾಂತ್ರಿಕ ಪಾಲ್ಗೊಳ್ಳುವಿಕೆಯ ಧನಾತ್ಮಕ ಅನುಭವವನ್ನು' ನೀಡುವ ಅಗತ್ಯತೆಯನ್ನು ಚರ್ಚಿಸುತ್ತದೆ. (ಪು 84). ಈ ಲೇಖನವು, ಇಂತಹ ಅನುಭವಗಳನ್ನು ಮಕ್ಕಳಿಗೆ ನೀಡುವುದಕ್ಕಾಗಿ, ಕಥೆಗಳನ್ನು ಆಧರಿಸಿದ ಪಠ್ಯಕ್ರಮವನ್ನು ಹೇಗೆ ವಿನ್ಯಾಸಗೊಳಿಬಹುದು ಎಂಬುದನ್ನು ಅನ್ವೇಷಿಸುತ್ತದೆ. ಇಲ್ಲಿರುವ ಒಳನೋಟಗಳು, ಪ್ರಾಯೋಗಿಕ ಮತ್ತು ಪ್ರಶ್ನಿಸುವುದನ್ನು ಆಧರಿಸಿದ ಪಠ್ಯಕ್ರಮದಲ್ಲಿ ತೊಡಗಿಸಿಕೊಂಡು ನಾನು ಗಳಿಸಿದ ವೈಯಕ್ತಿಕ ಅನುಭವಗಳನ್ನು ಆಧರಿಸಿವೆ. ದೆಹಲಿಯ ಸರ್ಕಾರೇತರ ಸಂಸ್ಥೆ 'ಸಿಂಪಲ್ ಎಜುಕೇಶನ್ ಫೌಂಡೇಶನ್'ನ ಸ್ವಯಂ-ಸೇವಕಿಯಾಗಿ, ದೂರವಾಣಿ ಕರೆಗಳನ್ನು ಬಳಸಿ ಮೂರು ತಿಂಗಳುಗಳ ಕಾಲ ನಾನು ಇಬ್ಬರು ಪ್ರೌಢ ಹುಡುಗಿಯರ ಜೊತೆ (11 ಮತ್ತು 13 ವರ್ಷಗಳು) ವರ್ಚುವಲ್ ಆಗಿ ಸಂವಾದ ನಡೆಸಿದೆ. ಮೂಲಭೂತ ಸಾಕ್ಷರತೆ (ಹಿಂದಿ ಮತ್ತು ಇಂಗ್ಲಿಷ್‌ನಲ್ಲಿ ಸರಳ ವಾಕ್ಯಗಳನ್ನು ಓದುವುದು ಮತ್ತು ರಚಿಸುವುದು) ಹಾಗು ಸಂಖ್ಯಾ ಕೌಶಲಗಳನ್ನು (ದತ್ತಾಂಶ ವಿಶ್ಲೇಷಣೆ ಮತ್ತು ವ್ಯಾಖ್ಯಾನ) ಅಭಿವೃದ್ಧಿಪಡಿಸುವುದರ ಜೊತೆಗೆ ಸಂಪನ್ಮೂಲಗಳು, ಜೀವನೋಪಾಯ ಮತ್ತು ವಲಸೆ ಮುಂತಾದ ಪರಿಕಲ್ಪನೆಗಳನ್ನು ಪರಿಶೋಧಿಸುವುದಕ್ಕಾಗಿ ಈ ಸಂಸ್ಥೆಯು ವಿನ್ಯಾಸಗೊಳಿಸಿದ ಕಾರ್ಯಪುಸ್ತಕಗಳನ್ನು ನಾವು ಬಳಸಿಕೊಂಡೆವು. ಈ ಪ್ರಕ್ರಿಯೆಯಲ್ಲಿ, ನಾವು ದಿನವೂ ಎಷ್ಟು ಬಗೆಯ ಭಾವನೆಗಳನ್ನು ಅನುಭವಿಸಬಹುದು ಎಂಬುದನ್ನು ಪರಿಶೋಧಿಸಿದೆವು. ಕಥೆಗಳನ್ನು ಆರಂಭಿಕ ಬಿಂದುವಾಗಿ ಬಳಸಿ ವಿನ್ಯಾಸಗೊಳಿಸಿದ ಎರಡು ಕಾರ್ಯಪುಸ್ತಕಗಳನ್ನು (ಗಣಿತ ಮತ್ತು ಸಮಾನತೆ) ಬಳಸಿ ಇದೆಲ್ಲವನ್ನು ಮಾಡಲಾಯಿತು.

**ಕಥೆಗಳ ಉದಾಹರಣೆಗಳು**

ಈ ಲೇಖನವು, ಸಕ್ರಿಯ ಪೌರತ್ವಕ್ಕೆ ಅಗತ್ಯವಿರುವ ಜೀವನ ಕೌಶಲಗಳನ್ನು ಬೋಧಿಸಲು ಬಳಸಬಹುದಾದ ಕಥೆಗಳಿಗೆ ನಿರ್ದಿಷ್ಟ ಉದಾಹರಣೆಗಳನ್ನು ನೀಡುತ್ತದೆ. ಪ್ರತಿ ಕಥೆಯ ಸಂಕ್ಷಿಪ್ತ ಅವಲೋಕನದ ನಂತರ, ನಿರೀಕ್ಷಿತ ಫಲಿತಾಂಶವನ್ನು ಪಡೆಯುವುದಕ್ಕಾಗಿ ಈ ಕಥೆಗಳ ಸುತ್ತ ವಿನ್ಯಾಸಗೊಳಿಸಬಹುದಾದ ಚಟುವಟಿಕೆಗಳ ಪಟ್ಟಿಯನ್ನು ನೀಡಲಾಗಿದೆ.

**1. ಕಥೆಯ ಶೀರ್ಷಿಕೆ: ಕರುಣಾ ಮತ್ತು ಆಕೆಯ ಗೆಳತಿಯರ ಮನರಂಜನಾ ಪ್ರವಾಸ**

**ಪ್ರಕಾರ: ಕಾಲ್ಪನಿಕ**
**ಕಥೆಯ ಸ್ಥೂಲನೋಟ:**

ತಮ್ಮ ಮನೆಗಳ ಪಕ್ಕ ಇರುವ ಶಿಬಿರ ತಾಣ(ಕ್ಯಾಂಪ್‌ಸೈಟ್)ಕ್ಕೆ ಹದಿಹರೆಯದವರ ಒಂದು ತಂಡವು ಭೇಟಿ ನೀಡಿ, ಕ್ಯಾಬ್ ಚಾಲಕರು, ಶಿಬಿರ ತಾಣದ ನಿರ್ವಾಹಕರು, ಅಡುಗೆಯರು, ಸ್ವಚ್ಛತಾ ಸಿಬ್ಬಂದಿ ಮತ್ತು ರಾಫ್ಟಿಂಗ್ ಗೈಡ್ ಸೇರಿದಂತೆ ವಿವಿಧ ಉದ್ಯೋಗಗಳಲ್ಲಿ ತೊಡಗಿದ್ದ ಜನರ ಜೊತೆ ಸಂವಾದ ನಡೆಸಿದರು. ಈ ಮಕ್ಕಳು ಅವರ ಜೊತೆ ಚರ್ಚೆ ನಡೆಸಿದರು ಮತ್ತು ಅವರು ಎದುರಿಸುತ್ತಿರುವ ಸವಾಲುಗಳು ಮತ್ತು ಪ್ರತಿಯೊಬ್ಬರ ವಿಶಿಷ್ಟ ಅನುಭವದ ಕುರಿತು ಪ್ರಶ್ನೆಗಳನ್ನು ಕೇಳಿದರು. ಆ ಮೂಲಕ ಸಾಮಾಜಿಕ ವ್ಯವಸ್ಥೆಯು ಸುಗಮವಾಗಿ ಕಾರ್ಯನಿರ್ವಹಿಸ-ಬೇಕಾದರೆ ಪ್ರತಿ ವೃತ್ತಿಯೂ ಹೇಗೆ ಅತ್ಯಗತ್ಯ ಎಂಬ ತಿಳುವಳಿಕೆಯನ್ನು ಪಡೆದುಕೊಂಡರು.

**ಅನುಪಾಲನೆಯ ಚಟುವಟಿಕೆಗಳು**
**ಪರ್ಯಾಲೋಚನೆಗಾಗಿ ಪ್ರಶ್ನೆಗಳು:**

ತಾವು ಏನು ಓದಿದ್ದೇವೆ ಎನ್ನುವ ಕುರಿತು ಪರ್ಯಾಲೋಚನೆ ಮಾಡಲು ಉತ್ತೇಜಿಸುವ ಪ್ರಶ್ನೆಗಳು, ಜೀವನ ಕೌಶಲಗಳನ್ನು ಅಭಿವೃದ್ಧಿಪಡಿಸಲು ಸಾಕಷ್ಟು ಕೊಡುಗೆಯನ್ನು ನೀಡುತ್ತವೆ. ಮಾದರಿ ಪ್ರಶ್ನೆಗಳು ಹೀಗಿರಬಹುದು:

- ಶಿಬಿರ ತಾಣದಲ್ಲಿ ರವಿಯಣ್ಣ/ಗುಂಜನ್ ಅಕ್ಕ ತಮ್ಮ ಕೆಲಸದ ಬಗ್ಗೆ ಯಾವ ಭಾವನೆ ಹೊಂದಿದ್ದಾರೆ ಎಂದು ನೀವು ಯೋಚಿಸುತ್ತೀರಿ? ನಿಮ್ಮ ಪ್ರತಿಕ್ರಿಯೆಗೆ ಸಾಕ್ಷ್ಯಾಧಾರ ನೀಡಿ.

- ಶಿಬಿರ ತಾಣದಲ್ಲಿ ಯಾರಾದರೂ ಒಬ್ಬ ವ್ಯಕ್ತಿ ಕೆಲಸಕ್ಕೆ ಬರದಿದ್ದರೆ ಏನಾಗುತ್ತಿತ್ತು? ಶಿಬಿರ ತಾಣದಲ್ಲಿರುವ ಇತರ ಜನರ ಮೇಲೆ ಇದು ಹೇಗೆ ಪರಿಣಾಮ ಬೀರುತ್ತದೆ?

**ಪರಿಶೋಧನೆ**

ಈ ಚಟುವಟಿಕೆಗಳ ಅಂಗವಾಗಿ, ವಿದ್ಯಾರ್ಥಿಗಳು ಈ ಕಥೆಯೊಳಗೆ ಪ್ರವೇಶಿಸಲು ಮತ್ತು ಇದರ ಭಾಗವೆನಿಸಲು ಅವಕಾಶ ದೊರೆಯುತ್ತದೆ. ಉದಾಹರಣೆಗೆ, ಅವರಿಗೆ ಶಿಬಿರ ತಾಣದ ನಿರ್ವಾಹಕನ ಪಾತ್ರವನ್ನು ವಹಿಸಲು ಹೇಳಲಾಗುತ್ತದೆ. ಈ ಕೆಳಗಿನ ಕೆಲಸಗಳನ್ನು ಮಾಡಲು ಅವರಿಗೆ ತಿಳಿಸಲಾಗುತ್ತದೆ:

- ಶಿಬಿರ ತಾಣಕ್ಕೆ ಈಗ ಭೇಟಿ ನೀಡುವ ಪ್ರವಾಸಿಗರ ಸಂಖ್ಯೆಯಲ್ಲಿ ಕೊರತೆ ಉಂಟಾಗಿರುವುದರಿಂದ ಹಣದ ಒಳಹರಿವಿನ ಅಭಾವ ಉಂಟಾಗಿದೆ. ನೀವೀಗ ವಿವಿಧ ಜನರ ಸಂಬಳವನ್ನು ಪರಿಷ್ಕರಿಸಬೇಕು. ಈ ಬದಲಾವಣೆಗಳನ್ನು ಹೇಗೆ ಮಾಡುತ್ತೀರಿ?

- ವೆಚ್ಚವನ್ನು ತಗ್ಗಿಸುವ ಕ್ರಮವಾಗಿ, ವ್ಯವಸ್ಥೆಯಿಂದ ಕೆಲವೊಂದು ಉದ್ಯೋಗಗಳನ್ನು ನೀವು ತೆಗೆದು ಹಾಕಬೇಕು. ಯಾವ ಕೆಲಸವನ್ನು ತೆಗೆದು ಹಾಕುತ್ತೀರಿ? ಏಕೆ? ನಿಮ್ಮ ಈ ನಿರ್ಧಾರವು, ಈ ವ್ಯವಸ್ಥೆಯಲ್ಲಿ ದುಡಿಯುವ ವಿವಿಧ ಜನರನ್ನು ಹೇಗೆ ಬಾಧಿಸುತ್ತದೆ (ತೆಗೆದು ಹಾಕಲ್ಪಟ್ಟವರು ಮತ್ತು ಉಳಿದವರು)?

**2. ಕಥೆಯ ಶೀರ್ಷಿಕೆ: ಮಾರುಕಟ್ಟೆ**

**ಪ್ರಕಾರ: ಕಾಲ್ಪನಿಕ**
**ಕಥೆಯ ಸ್ಥೂಲನೋಟ:**

ಒಬ್ಬ ಹುಡುಗನು ಮಾರುಕಟ್ಟೆಯೊಂದಕ್ಕೆ ತೆರಳಿ, ತರಕಾರಿ ಮಾರುವವರು, ಐಸ್‌ಕ್ರೀಂ ಮಾರುವವರು, ಔಷಧಿ ವ್ಯಾಪಾರಿಗಳು, ಕುಂಬಾರರು ಮತ್ತು ಚಮ್ಮಾರರು – ಹೀಗೆ ವಿವಿಧ ವೃತ್ತಿಯಲ್ಲಿ ತೊಡಗಿರುವ ಜನರನ್ನು ಭೇಟಿಯಾಗುತ್ತಾನೆ. ಜನರ ವೃತ್ತಿಯನ್ನು ಆಧರಿಸಿ ಅವನು ನೀಡುವ ಗೌರವದ ಮಟ್ಟವು ಬದಲಾಗುತ್ತದೆ. ಉದಾಹರಣೆಗೆ, ಅವನು ಔಷಧಿ ವ್ಯಾಪಾರಿಯ ಬಳಿ ನಯ ವಿನಯದಿಂದ ಮಾತನಾಡಿ ಆ ವ್ಯಾಪಾರಿಯು ಕೇಳಿದಷ್ಟು ಹಣವನ್ನು ನೀಡುತ್ತಾನೆ. ಆದರೆ ಆತನು ಚಮ್ಮಾರರು ಮತ್ತು ಕುಂಬಾರರ ಜೊತೆ ಚೌಕಾಸಿ ಮಾಡುವುದು ಮಾತ್ರವಲ್ಲದೆ, ಅವರು ಮಾಡುವ ಕೆಲಸದ ಕಾರಣ ಅವರ ಜೊತೆ ಒರಟಾಗಿ ವರ್ತಿಸುತ್ತಾನೆ.

**ಅನುಪಾಲನೆಯ ಚಟುವಟಿಕೆಗಳು**
**ಅನುಭವ**

ಈ ಚಟುವಟಿಕೆಯು, ಮಕ್ಕಳಿಗೆ ತಮ್ಮ ಸುಪ್ತ ಪ್ರಜ್ಞೆಯಲ್ಲಿರುವ ಪಕ್ಷಪಾತವನ್ನು ಗುರುತಿಸಲು ಸಹಕರಿಸುತ್ತದೆ. ಈ ಚಟುವಟಿಕೆಯ ಅಂಗವಾಗಿ, ತಮ್ಮ ಮಿತ್ರನಿಗೆ ವಿದ್ಯಾರ್ಥಿಗಳು ಒಂದು



ಉದ್ಯೋಗವನ್ನು ಸೂಚಿಸಬೇಕು. ಇದನ್ನು ಮಾಡಬೇಕಾದರೆ, ಈ ಉದ್ಯೋಗದಲ್ಲಿ ತೊಡಗಿರುವ ವ್ಯಕ್ತಿಗಳ ಜೊತೆ ಚರ್ಚೆ ನಡೆಸಿ, ಅವರು ಎದುರಿಸುವ ಸವಾಲುಗಳು, ಸಂಬಳ, ಅನನ್ಯ ಅಂಶಗಳು, ವಿಶೇಷಾಧಿಕಾರ ಮತ್ತು ಸಮಾಜದಲ್ಲಿ ಆ ಉದ್ಯೋಗದ ಪ್ರಾಮುಖ್ಯತೆ ಹಾಗು ಆ ಹಳ್ಳಿಯಲ್ಲಿ ಈ ಕೆಲಸವನ್ನು ತೆಗೆದುಹಾಕಿದರೆ ಏನಾಗುತ್ತದೆ ಎಂಬುದನ್ನು ತೋರಿಸಿ, ಮಕ್ಕಳು 'ಉದ್ಯೋಗ'ದ ಕಾರ್ಡ್ ಒಂದನ್ನು ರಚಿಸಬೇಕು. ನಂತರ ತಮ್ಮ ಗೆಳೆಯನಿಗಾಗಿ ಕಟ್ಟನಿಂದ ಒಂದು ಕಾರ್ಡ್‌ಅನ್ನು ಆರಿಸಲು ಮಕ್ಕಳಿಗೆ ತಿಳಿಸಲಾಗುತ್ತದೆ (ತನ್ನ ಗೆಳೆಯ ಮಾಡಬೇಕು ಎನ್ನುವ ಕೆಲಸ). ಪ್ರತಿ ಹಂತದಲ್ಲೂ, ಅವರು ಆರಿಸುವ ಉದ್ಯೋಗವನ್ನು ತೆಗೆದುಹಾಕಲಾಗುತ್ತದೆ. ಕೊನೆಯದಾಗಿ ಒಂದು ಉದ್ಯೋಗವು ಉಳಿಯುವ ತನಕ ಈ ಪ್ರಕ್ರಿಯೆಯನ್ನು ಪುನರಾವರ್ತಿಸಲಾಗುತ್ತದೆ. ಸಾಮಾನ್ಯವಾಗಿ ಮಕ್ಕಳು ಮೊದಲಿಗೆ ವೈದ್ಯರು, ಎಂಜಿನಿಯರ್‌ಗಳು, ಶಿಕ್ಷಕರು ಮುಂತಾದ ಉದ್ಯೋಗಗಳನ್ನು ಆರಿಸುತ್ತಾರೆ. ಎಲೆಕ್ಟ್ರಿಶಿಯನ್, ಪ್ಲಂಬರ್, ಕಸ ಗುಡಿಸುವವರು ಮುಂತಾದ ಉದ್ಯೋಗಗಳನ್ನು ಅವರು ಆರಿಸುವುದಿಲ್ಲ, ಅಥವಾ ಇವುಗಳನ್ನು ಕೊನೆಗೆ ಇಡಲಾಗುತ್ತದೆ. ಈ ಅಭ್ಯಾಸದ ಮೇಲಿನ ಪರ್ಯಾಲೋಚನೆಯ ಪ್ರಶ್ನೆಗಳು, ಸಮಾಜದಲ್ಲಿ ಕೆಲವು ಉದ್ಯೋಗಗಳ ಕುರಿತು ಇರುವ ಪಕ್ಷಪಾತಗಳನ್ನು ಅನಾವರಣಗೊಳಿಸಲು ವಿದ್ಯಾರ್ಥಿಗಳಿಗೆ ನೆರವಾಗುತ್ತವೆ. ತಮ್ಮ ನಿರ್ಧಾರಗಳು ಮತ್ತು ಆಯ್ಕೆಗಳ ಕುರಿತು ಎಚ್ಚರಿಕೆಯಿಂದ ಇರಲು ಸಹ ಇವು ಉತ್ತೇಜಿಸುತ್ತವೆ.

**೩. ಕಥೆಯ ಶೀರ್ಷಿಕೆ: ಪಲಾಯನ ಮಾಡಿದವರು ಮರಳಿದ್ದು**

**ಪ್ರಕಾರ: ಅಕಾಲ್ಪನಿಕ**
**ಕಥೆಯ ಸ್ಥೂಲನೋಟ**

ಪರ್ವೇಜ್ ಅವರು ದೆಹಲಿಯಲ್ಲಿರುವ ಕಾರ್ಖಾನೆಯೊಂದರಲ್ಲಿ ಕೆಲಸ ಮಾಡುವುದಕ್ಕಾಗಿ ತನ್ನ ಹಳ್ಳಿಯಿಂದ ವಲಸೆ ಹೋದರು. ಲಾಕ್‌ಡೌನ್ ಕಾರಣ ಅವರು ತನ್ನ ಕೆಲಸವನ್ನು ಕಳೆದುಕೊಂಡರು. ಇನ್ನೊಂದು ಕೆಲಸ ಸಿಗದ ಕಾರಣ, ಅವರು ತನ್ನ ಹಳ್ಳಿಗೆ ವಾಪಸಾಗಲು ನಿರ್ಧರಿಸಿದರು.

**ಅನುಪಾಲನೆಯ ಚಟುವಟಿಕೆಗಳು**

**ದತ್ತಾಂಶ ವಿಶ್ಲೇಷಣೆ ಮತ್ತು ವ್ಯಾಖ್ಯಾನ:**

ಡೆಹ್ರಾಡೂನ್‌ನಿಂದ ದೆಹಲಿ, ಮುಂಬಯಿ, ಚಂಡೀಗಢ ಮತ್ತು ಜೈಪುರಕ್ಕೆ ಇರುವ ರೈಲಿನ ಟಿಕೆಟ್ ವೆಚ್ಚವನ್ನು ತೋರಿಸುವ ಸ್ತಂಭ ನಕಾಶೆಯನ್ನು ಮಕ್ಕಳಿಗೆ ನೀಡಲಾಗಿದೆ. ಮಕ್ಕಳು ಈ ಕೆಳಗಿನ ಸಮಸ್ಯೆಯನ್ನು ಪರಿಹರಿಸಬೇಕಾಗಿತ್ತು:

- ನಾಲ್ಕು ಜನರ ಒಂದು ಕುಟುಂಬವು ಮುಂಬೈಯಿಂದ ಡೆಹ್ರಾಡೂನ್‌ಗೆ ಪ್ರಯಾಣಿಸಿದರೆ ಅವರು ಎಷ್ಟು ಮೊತ್ತವನ್ನು ಪಾವತಿಸಬೇಕು?

- ರಾಷ್ಟ್ರವ್ಯಾಪಿ ಲಾಕ್‌ಡೌನ್ ವೇಳೆ, ಕೆಲ ವಲಸಿಗರು ರೈಲಿನ ಟಿಕೇಟುಗಳಿಗಾಗಿ ಹಣ ಪಾವತಿಸಬೇಕಿತ್ತು. ಇಂತಹ ನಾಲ್ಕು ಜನ ವಲಸಿಗರು ದೆಹಲಿಯಿಂದ ಮರಳಬೇಕಿದ್ದು, ಅವರ ಬಳಿ ಒಟ್ಟಿಗೆ ರೂ. 1000 ಇದೆ ಎಂದುಕೊಳ್ಳೋಣ. ಸ್ತಂಭ ನಕಾಶೆಯನ್ನು ನೋಡಿ ಹಾಗು ತಮ್ಮ ರಾಜ್ಯಕ್ಕೆ ಮರಳಲು ಅವರ ಬಳಿ ಸಾಕಷ್ಟು ಹಣ ಇದೆಯೇ ಎಂಬುದನ್ನು ಹೇಳಿ. ಇಲ್ಲದಿದ್ದಲ್ಲಿ, ಅವರಲ್ಲಿ ಎಷ್ಟು ಹಣ ಕಡಿಮೆ ಇದೆ?



**2. ಕಥೆಯ ಶೀರ್ಷಿಕೆ: ಬದಲಾವಣೆಯ ಕಥೆ**
**ವರ್ಗ: ಅಕಾಲ್ಪನಿಕ**
**ಕಥೆಯ ಸ್ಥೂಲನೋಟ:**

ದಿವ್ಯಾ ರಾವತ್ ಎನ್ನುವ ಯುವತಿ ತನಗೆ ಉತ್ತಮ ಸಂಬಳವನ್ನು ತಂದು ಕೊಡುತ್ತಿದ್ದ ಕೆಲಸವನ್ನು ಬಿಟ್ಟು, ಆಕೆಯ ಸಮುದಾಯದ ಸಬಲೀಕರಣಕ್ಕಾಗಿ ತನ್ನ ಹಳ್ಳಿಗೆ ಮರಳಿದಳು. ಆಕೆಯು ಸ್ಥಳೀಯವಾಗಿ ಲಭ್ಯವಿರುವ ಸಂಪನ್ಮೂಲಗಳನ್ನು (ಭೌತಿಕ ಮತ್ತು ಮಾನವ ಸಂಪನ್ಮೂಲ) ಬಳಸುತ್ತಾಳೆ ಮತ್ತು ಸುತ್ತಲಿನ ಮಹಿಳೆಯರಿಗೆ ಅಣಬೆಗಳನ್ನು ಬೆಳೆಯಲು ಸಹಕರಿಸುತ್ತಾಳೆ. ಛಲ ಮತ್ತು ಹಠಸಾಧನೆಯ ಮೂಲಕ ಆಕೆಯು ತನ್ನ ಸಮುದಾಯದಲ್ಲಿ ಉದ್ಯೋಗ ಸೃಷ್ಟಿಸುವಲ್ಲಿ ಯಶಸ್ವಿಯಾಗುತ್ತಾಳೆ. ಆಕೆಗೆ ಉತ್ತರಾಖಂಡ ಸರ್ಕಾರವು ಸಂಜೀವಿನಿ ರತ್ನ ಪುರಸ್ಕಾರವನ್ನು ನೀಡುತ್ತದೆ.

**ಅನುಸರಣೆ ಚಟುವಟಿಕೆಗಳು**
**ಪರ್ಯಾಲೋಚನೆಗಾಗಿ ಪ್ರಶ್ನೆಗಳು:**

ಈ ಕೆಳಗಿನ ವಿಚಾರಗಳ ಕುರಿತು ಪರ್ಯಾಲೋಚನೆ ಮಾಡುವ ಪ್ರಶ್ನೆಗಳನ್ನು ಮಕ್ಕಳಿಗೆ ಕೇಳಬಹುದು:

- ತಮ್ಮ ಸಮುದಾಯದಲ್ಲಿ ಬದಲಾವಣೆ ತರುವುದಕ್ಕಾಗಿ ವಿವಿಧ ಪಾತ್ರಗಳು ಯಾವ ರೀತಿಯ ಸಂಪನ್ಮೂಲಗಳನ್ನು ಬಳಸಿಕೊಂಡವು?
- ಇದನ್ನು ಮಾಡುವಾಗ ಅವರು ಯಾವ ರೀತಿಯ ಸವಾಲುಗಳನ್ನು ಎದುರಿಸಿದರು?
- ಈ ಸವಾಲುಗಳ ನಡುವೆಯೂ ಯಶಸ್ಸು ಗಳಿಸಲು ಅವರಿಗೆ ನೆರವಾದ ಕೆಲವು ಗುಣಗಳನ್ನು ಹೆಸರಿಸಿ.

**1. ನಾನು ಚಿಕ್ಕವಳು, ಆದರೂ ಬದಲಾವಣೆಯನ್ನು ತರಬಲ್ಲೆ.**
**ವರ್ಗ: ಕಾಲ್ಪನಿಕ**
**ಕಥೆಯ ಸ್ಥೂಲನೋಟ:**

ನದಿಯ ಬಳಿ ಆಟವಾಡುತ್ತಿದ್ದ ನಾಲ್ಕು ಮಕ್ಕಳು ಈಜಲು ಹೋಗಲು ನಿರ್ಧರಿಸಿದರು. ನದಿಯು ಕಲುಷಿತಗೊಂಡಿದ್ದು, ಇದನ್ನು ಸರಿಪಡಿಸಬೇಕಿದೆ ಎಂಬುದನ್ನು ಅವರು ಮನಗಂಡರು. ಅವರು ತಮ್ಮ ಹಳ್ಳಿಯ ವೈದ್ಯರೊಬ್ಬರನ್ನು ಭೇಟಿಯಾದರು. ಅವರು ಈ ಸಮಸ್ಯೆ ಬಗೆಹರಿಸಲು ಬಳಸಬಹುದಾದ ಹಲವಾರು ಪರಿಹಾರಗಳನ್ನು ಸೂಚಿಸಿದರು. ನಂತರ ಅವರು ಪಂಚಾಯತಿ ಸದಸ್ಯರ ಮೊರೆಹೋದರು. ಅವರು, ಈ ಸಮಸ್ಯೆಗೆ ಉತ್ತರ ಕಂಡುಕೊಳ್ಳುವುದಕ್ಕಾಗಿ ಸಮುದಾಯ ಮಟ್ಟದ ಬೆಂಬಲವನ್ನು ಪಡೆಯುವುದಕ್ಕಾಗಿ ಮಾರ್ಗದರ್ಶನ ನೀಡಿದರು. ಮಕ್ಕಳು, ಸಮುದಾಯ ಜಾಗೃತಿ, ಒಣ ಮತ್ತು ಹಸಿ ತ್ಯಾಜ್ಯಗಳಿಗೆ ಪ್ರತ್ಯೇಕ ಕಸದ ಡಬ್ಬಿಗಳನ್ನು ಬಳಸಲು ಹಾಗು ಸಮುದಾಯದ ಸದಸ್ಯರು ಜವಾಬ್ದಾರಿಯಿಂದ ವರ್ತಿಸುವಂತೆ ಮಾಡುವ ಕಾರ್ಯಕ್ರಮಗಳಿಗೆ ಚಾಲನೆ ನೀಡಲು ನಿರ್ಧರಿಸಿದರು.

**ಅನುಸರಣೆ ಚಟುವಟಿಕೆಗಳು**
**ಪರಿಶೋಧನೆ:**

ನಿಮ್ಮ ಸಮುದಾಯದಲ್ಲಿ ನೀವು ಬಗೆಹರಿಸಲು ಇಚ್ಛಿಸುವ ಒಂದು ಸಮಸ್ಯೆಯನ್ನು ಗುರುತಿಸಿ. ಈ ಸಮಸ್ಯೆಯನ್ನು ಪರಿಹರಿಸಲು ನಿಮ್ಮ ನೆರವಿಗೆ ಬರಬಹುದಾದ ಸಂಪನ್ಮೂಲಗಳನ್ನು ಪಟ್ಟಿ ಮಾಡಿ. ಹೀಗೆ


B. जैसे हमने दिव्या के मूल्य/सोच के बारे में बात की थी वैसे ही हम इन तीन लोगों के मूल्य और सोच की बात करेंगे जिससे उन्होंने अपने सपने पूरे किए।

नीचे कुछ एसे ही मूल्य और सिद्धांत लिखे हैं। **आपको क्या लगता है की इनमे से दिव्या में कौनसे मूल्य /सोच हैं, उन पर टिक लगाए। यह भी लिखे की उसने कैसे और कहाँ इन मूल्यों को दर्शाया?**

| दृढ निश्चय (grit) (हार ना मानना) | सहानुभूति (empathy) (लोगों के लिए हमदर्दी) | सेवा भाव (service) (लोगों की सेवा करने की इच्छा) | जिज्ञासा (curiosity) (कुछ जानने की इच्छा) |
|---|---|---|---|
| **आरती जी** | | | |
| **हनुमान जी** | | | |
| **रामी बाई** **उदाहरण** ✓ यह एक ऐसी स्थिति में पली-बढ़ी, जहाँ महिलाओं को काम करने के लिए प्रोत्साहित नहीं किया जाता था फिर भी उन्होंने हार नहीं मानी | | | |

**C. नीचे दिए प्रश्नो का उत्तर लिखे :**

1. What were the challenges faced by Rami bai after she joined full-time at barefoot? रामी बाई को बाएरफूट से जुड़ने के बाद क्या समस्याएँ आइ?

2. What do you mean by this statement 'by the people, for the people and of the people'. आप **"लोगों के लिए, लोगों द्वारा और लोगों का"** से क्या समझते हैं?

3. Do you think the development of the community was possible without the local people involved? Give reason. क्या आप को लगता है इस समुदाय का विकास हो पता अगर स्थानिए लोग नहीं जुड़ते? अपने कारण लिखे।

4. What enabled Arti Gujjar and Rami Bai to pursue their dreams and eventually, to be successful in their respective career choices, despite having limited or no formal education?आरती जी और रामी बाई की कोई औपचारिक शिक्षा नहीं थी, फिर भी वह अपने सपने कैसे पूरे कर पाई?

5. How did Hanumanji use his knowledge and passion of plants for the benefit of the community?
हनुमान जी ने अपनी पेड़ पौधों के ज्ञान को अपने समुदाय के अच्छे के लिए कैसे उपयोग किया?

14

ಮಾಡುವಾಗ ನಿಮಗೆ ಎದುರಾಗಬಹುದಾದ ಸವಾಲುಗಳನ್ನು ಗುರುತಿಸಲು ಪ್ರಯತ್ನಿಸಿ. ಈ ಸವಾಲುಗಳನ್ನು ನೀವು ಹೇಗೆ ಎದುರಿಸಬಹುದು ಎನ್ನುವುದಕ್ಕೂ ದಾರಿ ಹುಡುಕಿ. ನಿಮ್ಮ ಶಿಕ್ಷಕರ ಸಹಾಯದಿಂದ, ನಿಮ್ಮ ಅಂತಿಮ ಗುರಿಯನ್ನು ಸಾಧಿಸಲು, ಒಂದು ತಿಂಗಳ ಯೋಜನೆಯನ್ನು ರೂಪಿಸಿ. ಒಂದು ಕವಿತೆ ಅಥವಾ ಪತ್ರ ಅಥವಾ ಒಂದು ಭಿತ್ತಿಪತ್ರವನ್ನು ರಚಿಸಿ ನಿಮ್ಮ ಅನುಭವವನ್ನು ಮಿತ್ರರು ಮತ್ತು ಕುಟುಂಬದ ಸದಸ್ಯರೊಂದಿಗೆ ಹಂಚಿಕೊಳ್ಳಿ.

**ಕಥೆಗಳು ಯಾಕೆ ಮನ ಮುಟ್ಟುತ್ತವೆ?**

ಈ ಕಥೆಗಳು ಯಶಸ್ವಿಯಾಗುತ್ತವೆ ಏಕೆಂದರೆ, ಇತರ ಜನರ ಅನುಭವದೊಂದಿಗೆ ಓದುಗರು ಗುರುತಿಸಿಕೊಳ್ಳಲು ಇವು ಅನುವು ಮಾಡಿಕೊಡುತ್ತವೆ. ಆದರೆ, ಈ ಕಥೆಗಳನ್ನು ಹೇಗೆ ನಿರ್ವಹಿಸಲಾಗುತ್ತದೆ ಎನ್ನುವುದು ಮುಖ್ಯ. ಈ ಕಥೆಗಳನ್ನು ಮಕ್ಕಳ ಜೊತೆ ಚರ್ಚಿಸುವಾಗ ಈ ಕೆಳಗಿನ ಕೆಲವು ಒಳನೋಟಗಳನ್ನು ನಾನು ಗಳಿಸಿದೆ.

a) ಈ ಕಾರ್ಯಪುಸ್ತಕಗಳ ಅಂಗವಾಗಿ ಬಳಸಿದ ಈ ಕಥೆಗಳು ಮಕ್ಕಳ ಸನ್ನಿವೇಶವನ್ನು ಆಧರಿಸಿವೆ. ಇದನ್ನು, ಕಥೆಗಳಲ್ಲಿ ಬಳಸಿದ ಪಾತ್ರಗಳ ಮತ್ತು ಸ್ಥಳಗಳ ಹೆಸರುಗಳಲ್ಲಿ ನೋಡಬಹುದು. ಕೆಲವು ಕಥೆಗಳನ್ನು ಪ್ರಥಮ್ ಬುಕ್ಸ್ ಮತ್ತು ಪರಿ ಮುಂತಾದ ಬೇರೆಬೇರೆ ಮೂಲಗಳಿಂದ ಪಡೆದಿದ್ದರೂ, ಹೆಚ್ಚಿನ ಕಥೆಗಳನ್ನು ನಿರ್ದಿಷ್ಟವಾಗಿ ಉದ್ದೇಶಿತ ಗುಂಪುಗಳಿಗಾಗಿ ವಿನ್ಯಾಸಗೊಳಿಸಲಾಗಿದೆ. ವಿಷಯ ವಿನ್ಯಾಸ ತಂಡವು ಸ್ಥಳೀಯ ಸಮುದಾಯದ ಒಂದು ವ್ಯಕ್ತಿಯನ್ನು ಒಳಗೊಂಡಿತ್ತು. ಇದರಿಂದಾಗಿ ಇವು ನೈಜ ಮತ್ತು ಪ್ರಸ್ತುತವೆನಿಸುವ ಕಥೆಗಳಾಗಿ ರೂಪುಗೊಂಡವು. ಆಸಕ್ತಿಯ ವಿಚಾರವೆಂದರೆ, ಕಥೆಗಳು ಮಕ್ಕಳ ಸ್ವಂತ ಹಳ್ಳಿಯಿಂದ (ಗುಲಾರ್) ಅವರ ಹಳ್ಳಿಯ ಪಕ್ಕದ ಪಟ್ಟಣ (ರಿಷಿಕೇಶ)ದ ತನಕ, ನಂತರ ಅವರ ರಾಜ್ಯದ ರಾಜಧಾನಿಯ ತನಕ (ಡೆಹ್ರಾಡೂನ್) ಮತ್ತು ದೇಶದ ರಾಜಧಾನಿಯ ತನಕ (ದೆಹಲಿ) ಬೆಳೆದವು. ಕೆಲ ಕಾಲದ ನಂತರ, ಕಥೆಗಳು ದೇಶದ ಇನ್ನೊಂದು ರಾಜ್ಯದ (ರಾಜಸ್ಥಾನ) ಇದೇ ರೀತಿಯ ಹಳ್ಳಿಗೆ (ತಿಲೋನಿಯಾ) ತಲುಪಿದವು. ಈ ಮುನ್ನಡೆಯು, ಬೋಧನೆ–ಕಲಿಕೆಯ, ಅಂದರೆ ತಿಳಿದಿರುವುದರಿಂದ ತಿಳಿಯದೇ ಇರುವಲ್ಲಿಗೆ ಎಂಬ ಮೂಲಭೂತ ತತ್ವವನ್ನು ಅನುಸರಿಸಿತು.

b) ಈ ಕಥೆಗಳ ಪ್ರಮುಖ ಅಂಶವೆಂದರೆ, ಪಾತ್ರಗಳೊಂದಿಗೆ ಭಾವನಾತ್ಮಕವಾಗಿ ಗುರುತಿಸಿಕೊಳ್ಳುವ ಅವುಗಳ ವ್ಯಾಪ್ತಿ. ಈ ಪಾತ್ರಗಳು ಮಕ್ಕಳ (ಓದುಗರ) ವಯಸ್ಸಿನ ಗುಂಪಿನದ್ದೇ ಆಗಿದ್ದವು ಅಥವಾ ಮಕ್ಕಳಿಗೆ ಪ್ರಸ್ತುತ ಎನಿಸುವ ಜನರನ್ನು ಇವುಗಳಲ್ಲಿ ಪ್ರಸ್ತುತಪಡಿಸಲಾಯಿತು. ಉದಾಹರಣೆಗೆ, ಪಾತ್ರಗಳನ್ನು ಸುಖಿರಾಮ್ ಚಾಚಾ ಅಥವಾ ರಹೀಂ ಚಾಚಾ ಎಂಬುದಾಗಿ ಕರೆಯಲಾಯಿತು. ಇದು ಮಕ್ಕಳು ಈ ಪಾತ್ರಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಅಥವಾ ಪ್ರಶ್ನೆಗಳನ್ನು ಗ್ರಹಿಸುವಲ್ಲಿ ಸಾಕಷ್ಟು ಪರಿಣಾಮಕಾರಿ ಎನಿಸಿತು.

c) ಈ ಕಥೆಗಳನ್ನು, ವಿದ್ಯಾರ್ಥಿಗಳಿಗೆ ವಿವಿಧ ಸಮಸ್ಯೆಗಳನ್ನು ನಿರೂಪಿಸಲು ಆಧಾರವಾಗಿ ಬಳಸಲಾಯಿತು. ಕಥೆಗಳ ಮುಖ್ಯ ಪಾತ್ರಗಳ ಸುತ್ತ ಗಣಿತ ಮತ್ತು ಭಾಷೆಯ ಸಮಸ್ಯೆಗಳನ್ನು ಹೆಣೆಯಲಾಯಿತು. ಇದು ಮಕ್ಕಳಿಗೆ ಪಾತ್ರಗಳೊಂದಿಗೆ ದೀರ್ಘಕಾಲ ನಿಲ್ಲಲು ಮತ್ತು ಅವುಗಳ ಜೊತೆಯಲ್ಲಿ ಈ ಪ್ರಪಂಚವನ್ನು ಕಲ್ಪಿಸಿಕೊಳ್ಳಲು ಅನುವು ಮಾಡಿಕೊಟ್ಟಿತು. ಸಮಗ್ರತೆ ಮತ್ತು ಅಂತರ್ ಶಿಸ್ತಿನ ವಿಧಾನದ ಬಳಕೆಯು, ಜ್ಞಾನದ ಸರ್ವತೋಮುಖ ಗುಣಲಕ್ಷಣವನ್ನು ಸಮರ್ಥಿಸುತ್ತದೆ.

d) ಅನುಪಾಲನೆಯ ಚಟುವಟಿಕೆಗಳನ್ನು, ಕಥೆಯ ಪ್ರಮುಖ ಘಟನೆಗಳನ್ನು ಮಕ್ಕಳು ಮತ್ತೆಮತ್ತೆ ನೆನಪಿಸಿಕೊಳ್ಳುವಂತಾಗಲು, ನವೀನ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿತ್ತು. ಉದಾಹರಣೆಗೆ, ಮಕ್ಕಳು ಮುಖ್ಯ ಪಾತ್ರಗಳ ಬದುಕನ್ನು ಮತ್ತೆ ನೆನಪಿಸಿಕೊಳ್ಳು–ವಂತಾಗಲು, ಅವರಿಗೆ ಆ ಪಾತ್ರಗಳ ಬದುಕಿನ ಕಾಲಾನು–ಕ್ರಮವನ್ನು ರಚಿಸಲು ತಿಳಿಸಲಾಯಿತು. ಇದೇ ರೀತಿ, ಮುಖ್ಯ ಪಾತ್ರಗಳ ಬದುಕಿನಲ್ಲಿ ಪ್ರಮುಖ ಪಾತ್ರವಹಿಸಿದ ವಿವಿಧ ಪಾತ್ರಗಳನ್ನು ಗುರುತಿಸುವುದಕ್ಕಾಗಿ ಮೈಂಡ್ ಮ್ಯಾಪ್ಸ್‌ಗಳನ್ನು ಬಳಸಲಾಯಿತು. ಇದು ಮಕ್ಕಳಿಗೆ ಮಾನವ ಸಂಬಂಧಗಳ ಪ್ರಾಮುಖ್ಯತೆಯನ್ನು ಅರಿತುಕೊಳ್ಳಲು ಸಹಕರಿಸಿತು. ಇದೇ ರೀತಿ, ವಿವಿಧ ಕಥೆಗಳ ಪ್ರಮುಖ ಪಾತ್ರಗಳ ಬದುಕಿನಲ್ಲಿರುವ ಸಾಮ್ಯತೆಗಳು ಮತ್ತು ಭಿನ್ನತೆಗಳನ್ನು ಎತ್ತಿ ತೋರಿಸುವುದಕ್ಕಾಗಿ ಹಾಗು ಮಕ್ಕಳು ಸಾಮಾನ್ಯ ಮತ್ತು ಭಿನ್ನ ಮಾನವೀಯ ಗುಣಗಳನ್ನು ಗೌರವಿಸುವುದಕ್ಕಾಗಿ ವೆನ್ ನಕಾಶೆಗಳನ್ನು ಬಳಸಲಾಯಿತು.

e) ಕಥೆಗಳನ್ನು ಓದುವುದು ಮಾತ್ರವೇ ಅಲ್ಲ, ಅವುಗಳನ್ನು ಅನುಭವಿಸಬೇಕು. ಹೀಗಾಗಿ, ಮಕ್ಕಳು ಕಥೆಯೊಳಗೆ ಪ್ರವೇಶಿಸುವಂತಾಗಲು ಹಾಗು ಅದನ್ನು ಮರುಬರೆಯಲು ವಿವರವಾದ ಚಟುವಟಿಕೆಗಳನ್ನು ವಿನ್ಯಾಸಗೊಳಿಸಲಾಯಿತು. ಮಕ್ಕಳಲ್ಲಿ ಕ್ರಿಯೆ ಆಧಾರಿತ ಪ್ರವೃತ್ತಿಯನ್ನು ರೂಪಿಸುವುದಕ್ಕಾಗಿಯೇ ಅವರಿಗೆ ಕಥೆಗಳನ್ನು ಮರುಬರೆಯುವ ಅವಕಾಶವನ್ನು ನೀಡಲಾಯಿತು. ಕೆಲವೊಮ್ಮೆ, ಅವರ ಸುತ್ತಲಿನ ಪ್ರಪಂಚವನ್ನು, ಹೇಳದೆ ಇರುವ ಹಲವಾರು ಕಥೆಗಳ ಸಂಗ್ರಹವಾಗಿ ಅನುಭವಿಸುವಂತೆ ಮಾಡಲಾಯಿತು. ಉದಾಹರಣೆಗೆ, ಸಂದರ್ಶನಗಳನ್ನು ನಡೆಸಿ, ಮಕ್ಕಳು ಜೀವನೋಪಾಯ ಮತ್ತು ವಲಸೆಯ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಂಡರು. ಈ ರೀತಿಯಲ್ಲಿ, ಅವರಿಗೆ ನೆರೆಮನೆಯವರ ಜೊತೆ ಮಾತನಾಡುವ ಹಾಗು ತಳ ಮಟ್ಟದ ಕಥೆಗಳನ್ನು ಸಂಗ್ರಹಿಸುವ ಅವಕಾಶ ದೊರಕಿತು. ಇದರ ನಂತರ ಪರ್ಯಾಲೋಚನೆಯ ಅಭ್ಯಾಸವನ್ನು ನಡೆಸಲಾಗುತ್ತದೆ. ಇದರಲ್ಲಿ ತಮ್ಮ ಸುತ್ತಲಿನ ಜನರಿಂದ ಕಲಿಯುವುದನ್ನು ಕಲಿತರು.

f) ಈ ಕಥೆಗಳನ್ನು ಸಹಯೋಗ, ಕುತೂಹಲ ಮತ್ತು ಸೃಜನಶೀಲತೆಯ ಜೊತೆಗೆ ಸಮಾನತೆ, ಅನುಭೂತಿ, ದಿಟ್ಟತನ ಮತ್ತು ಸೇವೆಯ ಕೌಶಲಗಳು ಮತ್ತು ಮೌಲ್ಯಗಳನ್ನು ಸ್ಪಷ್ಟವಾಗಿ ಮನಸ್ಸಿಗೆ ನಾಟುವಂತೆ ಬೋಧಿಸಲು ರಚಿಸಲಾಯಿತು. ಈ ಕಥೆಗಳನ್ನು ಓದಿದ ನಂತರ ಮಕ್ಕಳಿಗೆ ಹೇಗನಿಸಿತು ಎಂದು ಅವರನ್ನು ಕೇಳಲಾಯಿತು. ಕಥೆಗಳಲ್ಲಿನ ಭಾವನೆಗಳನ್ನು ಗುರುತಿಸಿ ಪಟ್ಟಿ ಮಾಡುವುದಕ್ಕಾಗಿ 'ಭಾವನೆಗಳ ಕಾರ್ಡು'ಗಳನ್ನು ನೀಡಲಾಯಿತು. ಇದೊಂದು ಪ್ರಮುಖ ಅಭ್ಯಾಸವಾಗಿತ್ತು. ಏಕೆಂದರೆ ಕೆಲವೊಮ್ಮೆ ವಯಸ್ಕರೂ ಸಹ ಅವರಿಗೇ ಏನು ಅನಿಸುತ್ತದೆ ಎಂಬುದನ್ನು ಹೇಳಲು ಕಷ್ಟಪಡುತ್ತಾರೆ. ಅಲ್ಲದೆ, ವಿವಿಧ ಪಾತ್ರಗಳು ಹೊಂದಿರುವ ಸದ್ಗುಣಗಳನ್ನು ಪಟ್ಟಿ ಮಾಡಲು ಮತ್ತು ಇದಕ್ಕೆ ಪುರಾವೆಗಳನ್ನು ಒದಗಿಸಲು ಅವರಿಗೆ ತಿಳಿಸಲಾಯಿತು. ಇದು, ಯಾವುದೇ

ಬದಲಾವಣೆಯನ್ನು ಸಾಧ್ಯವಾಗಿಸಲು, ಈ ಮೌಲ್ಯಗಳನ್ನು ಮೈಗೂಡಿಸುವ ಅಗತ್ಯತೆಯನ್ನು ಎತ್ತಿ ಹಿಡಿಯಿತು. ಅಂತಿಮವಾಗಿ, ಮುಖ್ಯ ಪಾತ್ರಗಳನ್ನು ಪ್ರಶ್ನಿಸುವ ವ್ಯಾಪ್ತಿಯು (ಕಾರ್ಯಪುಸ್ತಕದಲ್ಲಿ ಕಥೆಯ ಕೊನೆಗೆ ಕಡ್ಡಾಯ ಸ್ಥಳಾವಕಾಶವಾಗಿ), ಮಕ್ಕಳು ಪ್ರಶ್ನೆಗಳನ್ನು ಕೇಳುವಂತೆ ಮಾಡಿತು. ಈ ಗುಣಸ್ವಭಾವವು, ವ್ಯವಸ್ಥೆಯೊಳಗೆ ಬೆಳವಣಿಗೆ ಹೊಂದುವುದನ್ನು ತುಂಬಾ ವಿರಳವಾಗಿ ಕಾಣಬಹುದು. ಹೀಗಾಗಿ, ಎಂಟು ವಾರಗಳ ಪುನರಾವರ್ತಿತ ಬಲವರ್ಧನೆಯ ನಂತರವೂ, ಹುಡುಗಿಯರು ನೇರ ಪ್ರಶ್ನೆಗಳನ್ನೇ ಕೇಳುತ್ತಿದ್ದುದು ನನಗೆ ಆಶ್ಚರ್ಯವೆನಿಸಲಿಲ್ಲ. ಅದೇನೇ ಇರಲಿ, ಈ ಅಭ್ಯಾಸದಲ್ಲಿ ಶಿಕ್ಷಕರು ತಮ್ಮ ಸಮಯ ಮತ್ತು ಶಕ್ತಿಯನ್ನು ವ್ಯಯಿಸಿದರೆ ಖಂಡಿತವಾಗಿಯೂ ನಿರೀಕ್ಷಿತ ಫಲ ದೊರೆಯುತ್ತದೆ.

g) ಕಾಲ್ಪನಿಕ ಮತ್ತು ಸೃಜನೇತರ ಕಥೆಗಳ ಬಳಕೆಯು, ಮಕ್ಕಳು ಏನನ್ನು ಓದುತ್ತಾರೆಯೋ, ಅದರ ಪ್ರಸ್ತುತತೆ ಮತ್ತು ಅನ್ವಯ ಸಾಧ್ಯತೆಯನ್ನು ಆಸ್ವಾದಿಸಲು ಸಹಕರಿಸುತ್ತದೆ. ಉದಾಹರಣೆಗೆ, ತಮ್ಮದೇ ರಾಜ್ಯದ ಬದಲಾವಣೆಯ ಯುವ ಹರಿಕಾರರೊಬ್ಬರ ಕಥೆಯು, ಅವರು ಪ್ರವಾಹದ ವಿರುದ್ಧ ಈಜಲು ಹಾಗು ತಮ್ಮದೇ ಸಮುದಾಯದಲ್ಲಿ ಬದಲಾವಣೆಯನ್ನು ತರುವ ಮಹತ್ವಾಕಾಂಕ್ಷೆ ಹೊಂದಲು ಪ್ರೇರೇಪಿಸುತ್ತದೆ. ಇದೇ ರೀತಿ, ಸಮುದಾಯ ಚಾಲಿತ ಬದಲಾವಣೆಯ ಶಕ್ತಿಯನ್ನು ಮಕ್ಕಳಿಗೆ ಪರಿಚಯಿಸಲು, ಬಂಕರ್ ರಾಯ್ (ಸಂಸ್ಥಾಪಕರು, ಬೇರ್‌ಫೂಟ್ ಕಾಲೇಜ್, ತಿಲೋನಿಯಾ) ಹಾಗು ಆರತಿ ದೇವಿ ಮತ್ತು ಹನುಮಾನ್‌ಜಿಯ (ತಿಲೋನಿಯಾ ಹಳ್ಳಿಯ ನಿವಾಸಿಗಳು) ಕಥೆಗಳನ್ನು ಬಳಸಲಾಯಿತು. ಇಂಥ ಕಥೆಗಳು ತಮ್ಮದೇ ವಾಸ್ತವಗಳು ಮತ್ತು ತಮ್ಮ ಯಶಸ್ಸಿನ ಯೋಜನೆಗಳನ್ನು ವ್ಯಾಖ್ಯಾನಿಸುವಂತೆ ಅವರನ್ನು ಒತ್ತಾಯಿಸಿತು. ತಮ್ಮ ಸುತ್ತಮುತ್ತ ಇರುವ ಸಂಪನ್ಮೂಲಗಳನ್ನು ಗುರುತಿಸಲು ಮತ್ತು ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸುವುದಕ್ಕಾಗಿ ಈ ಸಂಪನ್ಮೂಲಗಳನ್ನು ಬಳಸಲು ಇವುಗಳನ್ನು ಸಕ್ರಿಯಗೊಳಿಸಲಾಯಿತು. ಒಂದು ರೀತಿಯಲ್ಲಿ, ಇವುಗಳು ತಮ್ಮದೇ ಆದ ಕಥೆಗಳನ್ನು ಪರಿಶೀಲಿಸಲು ಮತ್ತು ಇವುಗಳನ್ನು ವಿಜೇತ ಅಥವಾ ಬಲಿಪಶು – ಇವುಗಳ ನಡುವೆ ಪ್ರಜ್ಞಾಪೂರ್ವಕ ಆಯ್ಕೆಯನ್ನು ಮಾಡಲು ರೂಪಿಸಲಾಯಿತು.

**ಕಥೆಗಳು, ಕೌಶಲಗಳು ಮತ್ತು ಸಕ್ರಿಯ ಪೌರತ್ವ**

ಪೌರತ್ವಕ್ಕಾಗಿ ಶಿಕ್ಷಣ ಎಂದರೆ, ಸಕ್ರಿಯ ನಾಗರಿಕರಾಗಲು, ಜ್ಞಾನ, ಕೌಶಲಗಳು, ಮೌಲ್ಯಗಳು ಮತ್ತು ವರ್ತನೆಗಳ ಸಂಯೋಜನೆಯನ್ನು ಬೋಧಿಸುವುದು ಎಂದು ಅರ್ಥೈಸಿ–ಕೊಳ್ಳಬಹುದು (ಲಾಟನ್, 2000). ಜ್ಞಾನದ ಅಂಗವನ್ನು ಸಮಾಜ ವಿಜ್ಞಾನ ಪಠ್ಯಪುಸ್ತಕವು ಒಳಗೊಂಡಿದ್ದರೆ, ಮೌಲ್ಯಗಳು, ಕೌಶಲಗಳು ಮತ್ತು ವರ್ತನೆಗಳನ್ನು ಶಿಕ್ಷಣ ಶಾಸ್ತ್ರದಲ್ಲಿ ಬಲಪಡಿಸಬೇಕಿದೆ. ಕಥೆಗಳನ್ನು ಸರಿಯಾಗಿ ಪ್ರಸ್ತುತಪಡಿಸಿದರೆ, ಅವು ಈ ಸದ್ಗುಣಗಳನ್ನು ಅಳವಡಿಸಿ–ಕೊಳ್ಳುವ ಪರಿಣಾಮಕಾರಿ ವಿಧಾನವಾಗಿ ಕೆಲಸ ಮಾಡುತ್ತವೆ. ಕಥೆಯ ಕೊನೆಗೆ ನೀತಿಪಾಠವನ್ನು ಒದಗಿಸುವ ಬದಲಿಗೆ, ಈ ಕಥೆಗಳನ್ನು, ಮಕ್ಕಳ ಆಂತರಿಕ ಮೌಲ್ಯ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವಂತಹ ಅನುಭವವನ್ನು ನೀಡಲು ಬಳಸ–ಬಹುದು.

ಈ ಕಥೆಗಳ ನಿರ್ವಹಣೆಯನ್ನು, ತರಗತಿ ಕೊಠಡಿಯಲ್ಲಿ ಮಕ್ಕಳನ್ನು ನೋಡಿಕೊಳ್ಳುವ ರೀತಿಯ ಜೊತೆ ಸರಿಹೊಂದಿಸಿಕೊಳ್ಳಬೇಕು. ಪಠ್ಯಕ್ರಮ ಅಭಿವೃದ್ಧಿಪಡಿಸುವವರು ಮತ್ತು ಶಿಕ್ಷಕರು ಮಕ್ಕಳನ್ನು ಭವಿಷ್ಯದ ಪ್ರಜೆಗಳನ್ನಾಗಿ ನೋಡುವ ಬದಲು, ಅವರನ್ನು ಈಗಿನ ನಾಗರಿಕರನ್ನಾಗಿ ನೋಡಬೇಕಿದೆ (ಹೌ ಮತ್ತು ಕೊವೆಲ್). ಅವರು ಇಲ್ಲಿ ಏನು ಮಾಡಬಹುದು ಎಂದು ನೋಡಲು ಹಾಗು ಅವರ ಬದುಕಿನಲ್ಲಿ ಮತ್ತು ಅವರು ಜೀವಿಸುವ ಸಮುದಾಯದಲ್ಲಿ ಬದಲಾವಣೆಗಳನ್ನು ತರಲು ನೆರವಾಗಲು ಈ ಅನುಭವಗಳನ್ನು ರೂಪಿಸಬೇಕಿದೆ. ವಿದ್ಯುಚ್ಛಕ್ತಿಯನ್ನು ನಿರಂತರವಾಗಿ ಒದಗಿಸಲು ಅಥವಾ ಬಾಲ ಸಂಸತ್ತನ್ನು ಪ್ರಜಾತಾಂತ್ರಿಕವಾಗಿ (ಇಲ್ಲಿ ಅಗತ್ಯವೆನಿಸಿದಾಗ ಶಿಕ್ಷಕರು ಮಾರ್ಗದರ್ಶನವನ್ನು ಮಾತ್ರವೇ ನೀಡುತ್ತಾರೆ) ನಡೆಸಲು ಗ್ರಾಮದ ಮುಖ್ಯಸ್ಥರಿಗೆ ಪತ್ರ ಬರೆಯುವುದು ಮುಂತಾದ ಸರಳ ವಿಷಯಗಳ ಮೂಲಕ ಇವುಗಳನ್ನು ಮಾಡಬಹುದು. ಒಟ್ಟಾರೆಯಾಗಿ, ಶಕ್ತಿಯುತ ಅನುಭವಗಳ ಜೊತೆ ಕಥೆಗಳನ್ನು ಸಂಯೋಜಿಸಿದಾಗ, ತನ್ನ ಪಾಲಿಗೆ, ಇತರರಿಗೆ ಮತ್ತು ಸಮುದಾಯದ ಪಾಲಿಗೆ ಸಹಾನುಭೂತಿಯ ಕ್ರಮಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯ ಹೊಂದಿರುವ ಅನುಭೂತಿ ಹೊಂದಿದ ಮಾನವರನ್ನು ರೂಪಿಸುವಲ್ಲಿ ಸಾಕಷ್ಟು ಕೆಲಸ ಮಾಡಲಿವೆ.

***References***


Howe, R., & Covell, K. (2009). Engaging children in citizenship education: A children's rights perspective. Journal of Educational Thought, 21-44.

Lawton, D. (2000). Citizenship Education in Context. In D. Lawton, J. Cairns, & R. Gardner, Education for Citizenship (pp. 9-13). New York: Continuum Studies in Citizenship.

NCERT. (2005). National Curriculum Framework 2005. New Delhi: National Council of Educational Research and Training.



**ರಿಚಾ ಪಾಂಡೆ** ಅವರು ಜೀವನ ಕೌಶಲಗಳು ಮತ್ತು ಪೌರತ್ವ ಶಿಕ್ಷಣದಲ್ಲಿ ಆಸಕ್ತಿ ಹೊಂದಿರುವ ಪಠ್ಯಕ್ರಮ ಅಭಿವೃದ್ಧಿಪಡಿಸುವುದು ಮತ್ತು ಸಂಯೋಜಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು ಗಳಿಸಿದ್ದಾರೆ. ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಕಲಿಸುವಾಗ, ಶಿಕ್ಷಣವು ಒಂದು ಪ್ರಕ್ರಿಯೆ ಮತ್ತು ವ್ಯವಸ್ಥೆ ಎನ್ನುವ ತಿಳಿವಳಿಕೆ ಇವರಲ್ಲಿ ಜಾಗೃತಗೊಂಡಿತು. ಈ ಅನುಭವವು, ಏನನ್ನು ಕಲಿಸಲಾಗುತ್ತದೆ, ಏನನ್ನು ಕಲಿಯಲಾಗುತ್ತದೆ ಮತ್ತು ಏನನ್ನು ಅಂತಿಮವಾಗಿ ಬಳಸಲಾಗುತ್ತದೆ ಅಥವಾ ಅನ್ವಯಿಸಲಾಗುತ್ತದೆ ಎನ್ನುವುದರ ನಡುವಿನ ಅಂತರವನ್ನು ಗುರುತಿಸಲು ಇವರಿಗೆ ಸಹಕಾರಿಯಾಯಿತು. ಅವರು ಕಳೆದ ಆರು ವರ್ಷಗಳಿಂದ ವಿವಿಧ ಸಾಮರ್ಥ್ಯಗಳುಳ್ಳ ಮಕ್ಕಳು ಮತ್ತು ಹದಿವಯಸ್ಕರೊಂದಿಗೆ ಕೆಲಸ ಮಾಡಿದ್ದಾರೆ. ರಿಚಾ ಅವರನ್ನು richapandey735@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** । ಪರಿಶೀಲನೆ: **ನಾಗಮಣಿ ಎಸ್.ಎನ್.**

**ಸಮಾನತೆಯ ಪರಿಕಲ್ಪನೆಯು 6 –7 ನೆ ತರಗತಿಯ ಜೊತೆಗೆ ಎಲ್ಲರಿಗೂ ಗೊತ್ತಿರುತ್ತದೆ. ತಮಗೆ ಯಾವುದೇ ರೀತಿಯ ತಾರತಮ್ಯ ಉಂಟಾಗಬಾರದು ಎಂದು ಗೊತ್ತು, ಒಂದು ವೇಳೆ ಅಂಥಾದ್ದೇನಾದರೂ ನಡೆದರೆ ಸಹಾಯ ಕೇಳಬೇಕೆಂದು ಗೊತ್ತು. ಆದ್ದರಿಂದ ಈ ಪರಿಕಲ್ಪನೆಯ ಬಗ್ಗೆ ಅವರಲ್ಲಿ ತತ್‌ಕ್ಷಣದಲ್ಲಿ ಸಂಬಂಧಕಲ್ಪಿಸಿಕೊಳ್ಳುವ, ಸಮಾನತೆಯನ್ನು ಎತ್ತಿ ಹಿಡಿಯುವ ತಿಳಿವು ಉಂಟಾಯಿತು. ಅದೊಂದು ಪರಕೀಯ ಭಾವನೆ ಎಂಬ, ಕೇವಲ ಪಠ್ಯಪುಸ್ತಕದಲಿರುವುದು ಎನ್ನದೇ ಮೂರ್ತ, ಸಂಬಂಧಕಲ್ಪಿಸಿಕೊಳ್ಳಬಹುದಾದ ಅನುಭವವಾಯಿತು.**

**– ಅಭಿಲಾಷಾ ಅವಸ್ಥೆ, ಲರ್ನಿಂಗ್ ಡೆಮಾಕ್ರಸಿ ಥ್ರೂ ಸ್ಕೂಲ್ ಪ್ರಾಕ್ಟೀಸಸ್, ಪುಟ 22.**

# ಬದಲಾವಣೆಯೇ ನೀವಾಗಿ | ಕಲಿಕೆಯ ಒಂದು ವಿಜಯಯಾತ್ರೆ

ರೋನಿತಾ ಶರ್ಮಾ ಮತ್ತು ಶಿಲ್ಪಿ ಹಂಡಾ

'ಅನುಭವವನ್ನು ಆಧರಿಸಿದ ಕಲಿಕಾ ಪ್ರಕ್ರಿಯೆಯಲ್ಲಿ ಎರಡು ಗುರಿಗಳಿವೆ. ಒಂದು ನಿರ್ದಿಷ್ಟ ವಿಷಯದ ವಿಶೇಷಗಳ ಕಲಿಕೆ ಮತ್ತೊಂದು ತನ್ನದೇ ಸ್ವಂತ ಕಲಿಕಾ ಪ್ರಕ್ರಿಯೆಯ ಕಲಿಕೆ' ಡೇವಿಡ್ ಎ.ಕೋಲ್ಬ್.

ಅನುಭವಜನ್ಯವಾದ ಕಲಿಕೆ (Experiential learning) ಅಧಿಕೃತವಾದ ಉದ್ದೇಶವನ್ನು ಹೊಂದಿದ್ದು, ಅದು ಜೀವನದ ನೈಜ ಅನುಭವವನ್ನು ಆಧರಿಸಿದ್ದಾಗಿದೆ. ಅದರಲ್ಲಿ ಬೋಧನಾಶಾಸ್ತ್ರದ ಮಾಧ್ಯಮವಾದ ಮಕ್ಕಳ ಸ್ಥಳೀಯ ಹಿನ್ನೆಲೆಯಿಂದ ಆರಂಭಗೊಂಡು ಜ್ಞಾನ, ಕೌಶಲ ಮತ್ತು ಗುಣಗಳ ಅಭಿವೃದ್ಧಿಯನ್ನು ಒಳಗೊಂಡಿರುತ್ತದೆ. ನೈಜ ಹಾಗು ಸಂದರ್ಭೋಚಿತ ಅನುಭವಗಳಿಗೆ ಒಳಗಾಗುವುದರಿಂದ ಪ್ರತಿಯೊಂದು ಮಗುವೂ ಕಲಿಕೆಯಲ್ಲಿ ವೈಯಕ್ತಿಕವಾಗಿ ತೊಡಗಿಸಿಕೊಳ್ಳಲು, ಅಂತಹ ಕಲಿಕೆಯನ್ನು ಅರ್ಥಪೂರ್ಣವಾಗಿ ಮಾಡಲು ಸಾಧ್ಯವಾಗುತ್ತದೆ ಮತ್ತು ಸಮಸ್ಯೆಗಳನ್ನು ಪರಿಹರಿಸುವ ಹಾಗು ನಿರ್ಧಾರ ಕೈಗೊಳ್ಳುವಂತಹ ಬಹುಮುಖ್ಯ ಕೌಶಲಗಳನ್ನು ಬೆಳೆಸಿಕೊಳ್ಳಲೂ ಸಹಾಯವಾಗುತ್ತದೆ. ಅನುಭವಜನ್ಯವಾದ ಕಲಿಕೆಯು ತನ್ನ ನಾಲ್ಕು ಪ್ರಮುಖ ಅಂಗಗಳ ಮೂಲಕ ಅತ್ಯುನ್ನತವಾದ ಚಿಂತನೆ ಮತ್ತು ಸಹಯೋಗದ ಕೌಶಲಗಳನ್ನು ಸಾಧಿಸಲು ಅವಕಾಶಗಳನ್ನು ನೀಡುತ್ತದೆ. ಡೇವಿಡ್ ಎ ಕೋಲ್ಬ್ ಅವರು ಅಭಿವೃದ್ಧಿಪಡಿಸಿದ ಅನುಭವಜನ್ಯ ಕಲಿಕಾ ಪರಿಕಲ್ಪನೆಯು ಕಲಿಕಾ ಪ್ರಕ್ರಿಯೆಯನ್ನು ನಾಲ್ಕು ಮೂಲಭೂತ ತತ್ತ್ವಾಧಾರಿತ ಅಂಗಗಳನ್ನಾಗಿ ವಿಭಾಗಿಸುತ್ತದೆ:

ಮೂರ್ತ ಅನುಭವ (Concrete Experience) ಎಂದರೆ ಜ್ಞಾನಗ್ರಹಣದ ಎಲ್ಲ ಆಯಾಮಗಳನ್ನು ಒಳಗೊಂಡ ಸಮಸ್ಯೆ / ಪರಿಸ್ಥಿತಿಯೊಂದಿಗೆ ಮಗು ಸಿಕ್ಕಿಹಾಕಿಕೊಂಡಿರುವ ವಾತಾವರಣ.

ಪರ್ಯಾಲೋಚನೆಯುಕ್ತ ಅವಲೋಕನ (Reflective Observation) ಮಗುವು ತನ್ನ ಮುಂದಿರುವ ಕೆಲಸವನ್ನು ಇನ್ನಷ್ಟು ಚಿಂತನೆಗೆ ಹಾಗು ಕಲಿಕೆಯನ್ನು ವಿಮರ್ಶೆಗೆ ಒಳಪಡಿಸುವಂತೆ ಮಾಡುವ ಕ್ರಮ.

ಅಮೂರ್ತ ಪರಿಕಲ್ಪನೆ (Abstract Conceptualisation)– ವಿದ್ಯಾರ್ಥಿಯು ತನ್ನ ಪರಿಧಿಯನ್ನು ಬಿಟ್ಟು ಯೋಚನೆ ಮಾಡುವುದು ಮತ್ತು ಕಲಿಕಾ ಫಲಿತಾಂಶವನ್ನು ಸಾಧಿಸಲು ಇತರರೊಂದಿಗೆ ಸಹಯೋಗದಲ್ಲಿ ತೊಡಗುವುದು. ಚಿಂತನಶೀಲ ಮತ್ತು ಸಂವಾದದಿಂದ ಹುಟ್ಟಿಕೊಂಡ ಅರ್ಥಪೂರ್ಣ ಅನುಭವಗಳು ಮಗುವನ್ನು ಆಲೋಚನೆಗೆ ಹಚ್ಚುತ್ತವೆ.

ಸಕ್ರಿಯ ಪ್ರಯೋಗ (Active Experimentation) – ಗುರಿಗೆ ಸನಿಹವಿರುವುದರ ಸೂಚನೆ– ನೈಜ ಹಾಗು ಅರ್ಥಪೂರ್ಣ ತಿಳುವಳಿಕೆ.




**ಹಕ್ಕುಗಳ ಪರಿಕಲ್ಪನೆಯ ಪರಿಚಯ**

ಭಾರತದ ಶಾಲೆಗಳಲ್ಲಿ ಪ್ರಜಾಪ್ರಭುತ್ವದ ಪರಿಕಲ್ಪನೆ, ಭಾರತದ ಸಂವಿಧಾನ ಮತ್ತು ಮೂಲಭೂತ ಹಕ್ಕುಗಳನ್ನು ಸಾಮಾನ್ಯವಾಗಿ ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣದ ಹಂತಗಳಲ್ಲಿ ಪರಿಚಯ ಮಾಡಿಸಲಾಗುತ್ತದೆ. ಮೂಲಭೂತ ಹಕ್ಕುಗಳನ್ನು ಒಂದು ವಿಷಯವಾಗಿ ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳಲ್ಲಿ ಆರನೇ ತರಗತಿಯಿಂದ ಹಂತಹಂತವಾಗಿ ಪರಿಚಯ ಮಾಡಲಾಗುತ್ತದೆ. ಈ ವಯಸ್ಸಿನಲ್ಲಿ ಈ ಎಲ್ಲ ಹಕ್ಕುಗಳು ಒಂದು ರೀತಿಯಲ್ಲಿ ಅಮೂರ್ತ ಸ್ವರೂಪದ್ದಾಗಿರುತ್ತವೆ. ಹಾಗಾಗಿ ಇವುಗಳನ್ನು ಪರಿಚಯ ಮಾಡಿಸುವ ಸಂದರ್ಭದಲ್ಲಿ ಅತ್ಯಂತ ಹೆಚ್ಚಿನ ಮುತುವರ್ಜಿಯನ್ನು ವಹಿಸಬೇಕಾಗುತ್ತದೆ; ನಿರೂಪಣೆ, ರಾಜಕೀಯಕ್ಕೆ ಸಂಬಂಧಿಸಿದ ಕಾರ್ಟೂನುಗಳು ಇತ್ಯಾದಿ ಮಾಧ್ಯಮಗಳನ್ನು ಇದಕ್ಕೆ ಬಳಸಿಕೊಳ್ಳಬೇಕು. ಇದನ್ನು ಅತ್ಯಂತ ಸ್ಪಷ್ಟವಾದ ರೀತಿಯಲ್ಲಿ ವಿವರಿಸುವ ಇನ್ನೊಂದು ಮಾರ್ಗವೆಂದರೆ ಮಕ್ಕಳ ಹಕ್ಕುಗಳನ್ನು ಪರಿಚಯ ಮಾಡಿಸುವುದು. ಮಕ್ಕಳು ಅನುಭವದ ಮೂಲಕ ಕಲಿಯುವುದಕ್ಕಿಂತ ಉತ್ತಮ ವಿಧಾನ ಇನ್ನೊಂದಿರಲಾರದು!

ಗುರ್‌ಗಾಂವ್‌ನಲ್ಲಿರುವ ಹೆರಿಟೇಜ್ (ಪರಂಪರಾ) ಶಾಲೆಯಲ್ಲಿ ಕಲಿಕೆ ಮತ್ತು ಬೋಧನೆಗೆ ಪ್ರಯೋಗಾತ್ಮಕ ಮಾದರಿಯನ್ನು ಬಳಸಲಾಗುತ್ತದೆ. ಈ ಲೇಖನದ ಮೂಲಕ ನಾವು ಈ ಶಾಲೆಯಲ್ಲಿ ಬೋಧಕರಾಗಿ ಪಡೆದ ಕಾರ್ಯಾನುಭವದ ಪಯಣವನ್ನು ಹಂಚಿಕೊಳ್ಳಲಿದ್ದೇವೆ.

ಸಮಾಜ ವಿಜ್ಞಾನ ಪಠ್ಯಪುಸ್ತಕದ ಸಂಕೀರ್ಣ ಪರಿಕಲ್ಪನೆಗಳನ್ನು ಇನ್ನಷ್ಟು ಸ್ಪಷ್ಟ ಸ್ವರೂಪದಲ್ಲಿ ಮತ್ತು ವಿದ್ಯಾರ್ಥಿಗಳು ಸುಲಭವಾಗಿ ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ಕಾರ್ಯರೂಪಕ್ಕೆ ತರುವ ಅಗತ್ಯ ಎದುರಾದಾಗ ಬದಲಾವಣೆಯ ಭಾಗವಾಗಿ ಕುರಿತ ವಿಶೇಷ ಕಾರ್ಯಯಾತ್ರೆಯ ಯೋಚನೆ ಬಂದಿತು. ಶಿಕ್ಷಕರ ಒಂದು ಗುಂಪು 6 ಮತ್ತು 7ನೇ ತರಗತಿಗಳ ಸಮಾಜ ವಿಜ್ಞಾನ ಪಠ್ಯಪುಸ್ತಕಗಳ ಪರಿಕಲ್ಪನೆಗಳನ್ನು ಎನ್‌ಸಿಎಫ್ 2005 ಮತ್ತು ಅಮೆರಿಕದ ಸಾಮಾನ್ಯ ಪಠ್ಯಕ್ರಮ ಪ್ರಮಾಣ (Common Core Standards)ದ ಪ್ರಕಾರ ವಿಚಾರ ವಿನಿಮಯ ನಡೆಸಿತು. ನಮ್ಮ ಅರಿವಿನ ಪಾಲುದಾರರಾದ ದಿಶಾ ಇಂಡಿಯಾ ಸೆಂಟರ್ ಫಾರ್ ಎಕ್ಸ್‌ಪೀರಿಯೆನ್ಷಿಯಲ್ ಲರ್ನಿಂಗ್ ಈ ವಿಷಯದ ಚೌಕಟ್ಟಿಗೆ ಸಂಬಂಧಿಸಿದಂತೆ ಪರಿಕಲ್ಪನೆಯನ್ನು ರೂಪಿಸುವಲ್ಲಿ – ದೊಡ್ಡ ಯೋಜನೆ, ಮುಖ್ಯ ಪರಿಕಲ್ಪನೆಗಳು ಮತ್ತು ವಿಶೇಷ ಕಾರ್ಯಯಾತ್ರೆಯ ಸುಗಮ ಪಯಣವನ್ನು ನಿರ್ಧರಿಸುವುದರಲ್ಲಿ ನಮಗೆ ಸಹಾಯ ಮಾಡಿದರು.

**ಕಲಿಕೆಯ ವಿಶೇಷ ಕಾರ್ಯಯಾತ್ರೆ ಎಂದರೆ ಏನು?**

ಕಲಿಕಾ ವಿಶೇಷ ಕಾರ್ಯಯಾತ್ರೆ ಅಂತರ್‌ಶಿಸ್ತೀಯವಾದುದು ಹಾಗು ನಿಸರ್ಗ ಮತ್ತು ಸಮಾಜ ವಿಜ್ಞಾನ, ಸಾಕ್ಷರತೆ ಮತ್ತು ಸಂಖ್ಯಾಶಾಸ್ತ್ರದಿಂದ ಕೌಶಲಗಳ ಜೊತೆಗೆ ವಿಷಯವನ್ನು ಸಾಧ್ಯವಾದಷ್ಟು ಮಟ್ಟಿಗೆ ಸಮಗ್ರಗೊಳಿಸುವುದು ಇದರ ಗುರಿ. ಇಂತಹ ಒಂದು ವಿಧಾನದಿಂದ ಕಲಿಕಾರ್ಥಿಗಳನ್ನು ಪಠ್ಯಕ್ರಮದ ಚೌಕಟ್ಟಿನಿಂದಾಚೆಗೆ ಕರೆದೊಯ್ಯಲು ಸಾಧ್ಯವಾಗುತ್ತದೆ ಮತ್ತು ನಿರಂತರ ಯೋಜನೆ ರೂಪಿಸುವುದು, ಕಾರ್ಯನಿಯೋಜನೆ ಮತ್ತು ಚಿಂತನಾಕ್ರಮದ ಮೂಲಕ ಶ್ರೇಷ್ಠತೆಯನ್ನು ಸಾಧಿಸಲು ಇನ್ನೂ ಅನೇಕ ಅವಕಾಶಗಳಿಗೆ ದಾರಿ ಮಾಡಿಕೊಡಲು ಸಾಧ್ಯವಾಗುತ್ತದೆ. ಎಲ್ಲಾ ಕಲಿಕಾ ವಿಶೇಷ ಕಾರ್ಯಯಾತ್ರೆಗಳು ಮಕ್ಕಳು ಅವಲೋಕನ ನಡೆಸಲು, ಯೋಚನೆ ಮಾಡಲು, ಚಿಂತಿಸಲು, ವಿಶ್ಲೇಷಿಸಲು, ಸಮನ್ವಯಗೊಳಿಸಲು ಮತ್ತು ವಿಷಯವನ್ನು ಆಳವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವಂತೆ ಅವರ ಸುತ್ತ ಸುತ್ತುತ್ತಿರುತ್ತವೆ. ಆಳವಾದ ತನಿಖೆಗಳನ್ನು ಕೈಗೊಳ್ಳುವ ದೃಷ್ಟಿಯಿಂದ ಕಲಿಕಾ ಕಾರ್ಯಯಾತ್ರೆಯು ಮಕ್ಕಳನ್ನು ಸಮುದಾಯದ ಕಡೆಗೆ, ಕ್ಷೇತ್ರಾಧ್ಯಯನಕ್ಕೆ ಕರೆತರಲಾಗುತ್ತದೆ ಮತ್ತು ವಿದ್ಯಾರ್ಥಿಗಳು ನೈಜ ಕಲಿಕಾ ಅನುಭವಗಳಲ್ಲಿ ತೊಡಗಿಕೊಳ್ಳಲು ಸಹಾಯವಾಗುವಂತೆ ತಜ್ಞರನ್ನು ತರಗತಿಗಳಿಗೆ ಕರೆತರಲಾಗುತ್ತದೆ.

**ಖೋಜ್‌ಗೆ ಕಾರ್ಯಯಾತ್ರೆಯ ಸಂಪರ್ಕ**

ಖೋಜ್ (KHOJ) ಎನ್ನುವುದು ಒಂದು ಬೋಧನಾ–ಶಾಸ್ತ್ರವಾಗಿದ್ದು, ಅದು ಮಕ್ಕಳಿಗೆ ತಮ್ಮ ಮನೆಗಳಿಂದ ಹೊರಗಡೆ ಇರುವ ನೈಜ ಜಗತ್ತಿನ ಅನುಭವವನ್ನು ನೀಡಲಿದೆ ಮತ್ತು ಕಲಿಕೆಯ ನೈಜ ಉದ್ದೇಶವು ದೊರೆಯುವಂತೆ ಮಾಡುತ್ತದೆ. ಈ ಪ್ರಕ್ರಿಯೆಯಲ್ಲಿ ಮಕ್ಕಳು ತಮ್ಮ ಸ್ಥಳೀಯ ಇತಿಹಾಸ, ನೈಸರ್ಗಿಕ ಪರಂಪರೆ, ಸಸ್ಯ ಮತ್ತು ಪ್ರಾಣಿ ಸಂಪತ್ತು, ಜನಸಂಖ್ಯಾಶಾಸ್ತ್ರದ ಜೊತೆಗೆ ವಿನ್ಯಾಸ, ರೂಪುರೇಷೆ ಮತ್ತು ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ ಮತ್ತು ಆರ್ಥಿಕ ವ್ಯವಸ್ಥೆಗಳು ಹಾಗು ಅವುಗಳ ಆಂತರಿಕ ಸಂಬಂಧಗಳನ್ನು ಪರಿಶೋಧಿಸಲಿದ್ದಾರೆ. ಇವೆಲ್ಲದರಿಂದ ಮಕ್ಕಳಿಗೆ ಸ್ಥಳೀಯ ಸಮುದಾಯದ ಜೊತೆ ತಮ್ಮ ಸಂಬಂಧವನ್ನು ಕಲ್ಪಿಸಿಕೊಳ್ಳಲು ಹಾಗು ಇನ್ನಷ್ಟು ಉತ್ತಮ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದು ಅವರು ತಮ್ಮ ಸಮುದಾಯದ ಶ್ರೇಯೋಭಿವೃದ್ಧಿಗೆ ಸಂಬಂಧಿಸಿದಂತೆ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಶಕ್ತಿಯನ್ನು ನೀಡುತ್ತದೆ.

ಇಂತಹ ಪ್ರತಿಯೊಂದು ಅಭ್ಯಾಸದ ಅಥವಾ ಶಿಫಾರಸಿನ ಮುಖ್ಯ ಉದ್ದೇಶವು ಎಲ್ಲವನ್ನೂ ಅಂತರ್ಗತಗೊಳಿಸುವ ಬಲವಾದ ಬದ್ಧತೆಯಾಗಿದೆ. ಜೊತೆಗೆ ಪ್ರತಿಯೊಬ್ಬ ಮಕ್ಕಳಲ್ಲೂ ಸಾಮರ್ಥ್ಯ ಮತ್ತು ಆಸಕ್ತಿಗಳಲ್ಲಿ ಇರುವ ವ್ಯತ್ಯಾಸಗಳು ಪ್ರತಿಯೊಂದು ತರಗತಿಯ ಅನಿವಾರ್ಯ ವಾಸ್ತವ ಎಂಬ ನಂಬಿಕೆಯನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯ.

**ವಿಶೇಷ ಕಾರ್ಯಯಾತ್ರೆಯ ಹಂತಗಳು**

ಬೃಹತ್ ಯೋಜನೆ: ವಿದ್ಯಾರ್ಥಿಗಳಲ್ಲಿ ನಿರಂತರ ತಿಳುವಳಿಕೆ ಜಾರಿಯಲ್ಲಿರುವಂತೆ, ಮುಂದೆ ಅದು ಅನೇಕ ವರ್ಷಗಳ ಕಾಲ ಅವರಲ್ಲಿ ಚಿರಸ್ಥಾಯಿಯಾಗಿರುವಂತೆ ಮಾಡುವುದು ಪ್ರತಿಯೊಂದು ಕಾರ್ಯಯಾತ್ರೆಯ ಜೀವವಾಗಿದೆ. ಮಾರ್ಗದರ್ಶಿ ಪ್ರಶ್ನೆಗಳು: ಇದು ಗಮನ ಕೇಂದ್ರೀಕರಿಸಲು ಮತ್ತು ದೊಡ್ಡ ಯೋಜನೆಯನ್ನು ಸಾಧ್ಯವಾಗಿಸಲು ಸಹಾಯವಾಗುತ್ತದೆ. ದೊಡ್ಡ ಯೋಜನೆಗಳಿಂದ ಹುಟ್ಟಿಕೊಂಡ ಮಾರ್ಗದರ್ಶಿ ಪ್ರಶ್ನೆಗಳು ಹೊಸ ದಿಕ್ಸೂಚಿಯನ್ನು ಒದಗಿಸುತ್ತವೆ ಮತ್ತು ವಿಶೇಷ ಕಾರ್ಯಯಾತ್ರೆಗೆ ಗಡಿಯನ್ನು ನಿಗದಿ ಮಾಡುತ್ತವೆ.

ತೊಡಗಿಕೊಳ್ಳುವುದು: ಎಲ್ಲ ಕಲಿಕಾ ಕಾರ್ಯಯಾತ್ರೆಗಳು ಮಕ್ಕಳ ಸ್ಥಳೀಯ ಸನ್ನಿವೇಶಗಳಿಂದ ಪಡೆದ ಗಮನ ಸೆಳೆಯುವ ಅನುಭವದೊಂದಿಗೆ ಕೊನೆಗೊಳ್ಳುತ್ತವೆ. ಅದು ಮಕ್ಕಳಲ್ಲಿ ಕುತೂಹಲವನ್ನು ಹುಟ್ಟುಹಾಕಿ ಕೆಲಸದಲ್ಲಿ ತೊಡಗಿಸಿಕೊಳ್ಳುವಂತೆ ಮಾಡುತ್ತದೆ. ಇದನ್ನೇ ಸಾಮಾನ್ಯವಾಗಿ ವಿಶೇಷವಾಗಿ ಅಂಟಿಕೊಂಡು ಕೆಲಸ ಮಾಡುವುದು ಎನ್ನುತ್ತೇವೆ.

**ಕಾರ್ಯಯಾತ್ರೆಯ ಮೂಲಕ ಕಲಿಕೆ ಮತ್ತು ಖೋಜ್**

ಶಾಲೆಯ ಪ್ರತಿಯೊಂದು ವರ್ಗದಲ್ಲಿ ಒಂದು ವರ್ಷಕ್ಕೆ ಎರಡು ವಿಷಯಗಳನ್ನು ನೀಡಲಾಗುತ್ತದೆ. ಇಲ್ಲಿ ಶಿಕ್ಷಕರನ್ನು ಸಮಾಜವಿಜ್ಞಾನ ಅಥವಾ ವಿಜ್ಞಾನ ಶಿಕ್ಷಕರು ಎಂದು ನೋಡುವುದಿಲ್ಲ ಬದಲಾಗಿ ಕಾರ್ಯಯಾತ್ರೆಯ ಶಿಕ್ಷಕರು ಎಂದು ಪರಿಗಣಿಸಲಾಗುತ್ತದೆ. 2013ರಲ್ಲಿ (ನಾವು ಅಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ) ಕಾರ್ಯಯಾತ್ರೆಗೆ ಎರಡು ಪ್ರಮುಖ ವಿಷಯಗಳನ್ನು ಕೈಗೆತ್ತಿಕೊಳ್ಳಲಾಗಿತ್ತು.

1. ಮನುಷ್ಯನ ದೇಹ– ವಿಜ್ಞಾನ ಕಲಿಕಾ ಪರಿಣಾಮಗಳ ಮೇಲೆ ಗಮನ ಹರಿಸುವುದು.
2. ಬದಲಾವಣೆಯ ಭಾಗವಾಗುವುದು– ಸಮಾಜ ವಿಜ್ಞಾನ ಕಲಿಕಾ ಪರಿಣಾಮಗಳ ಮೇಲೆ ಗಮನ ಹರಿಸುವುದು.

ಪ್ರತ್ಯೇಕವಾಗಿರುವುದರಿಂದ ಯಾವುದೇ ಕಲಿಕೆ ಸಾಧ್ಯವಿಲ್ಲದ ಕಾರಣ, ಮಕ್ಕಳು ಒಬ್ಬರಿಗೊಬ್ಬರು ಸಂಪರ್ಕದಲ್ಲಿದ್ದಾಗಲೇ ವಿಷಯಗಳನ್ನು ಮನಗಾಣುವ ಸಾಮರ್ಥ್ಯವನ್ನು ಪಡೆದು–ಕೊಳ್ಳುತ್ತಾರೆ ಎಂಬುದು ಬಹುಮುಖ್ಯ.

ಸಂವಿಧಾನದ ಮುಖ್ಯ ಮೌಲ್ಯಗಳನ್ನು ಗಮನದಲ್ಲಿಟ್ಟುಕೊಂಡು ವೈವಿಧ್ಯತೆ, ಸಮಾನತೆ, ಪ್ರಜಾಪ್ರಭುತ್ವ, ಹಕ್ಕುಗಳು ಮತ್ತು ಕರ್ತವ್ಯಗಳಂತಹ ವಿಚಾರಗಳಲ್ಲಿ ಶಿಕ್ಷಕರು ದೊಡ್ಡ ಯೋಜನೆಗಳನ್ನು ಮತ್ತು ಮಾರ್ಗದರ್ಶಿ ಪ್ರಶ್ನೆಗಳನ್ನು ರೂಪಿಸಿದರು. ಆರಂಭದಲ್ಲಿ ಶಿಕ್ಷಕರು ಭಿನ್ನವಾದ ಸಮಾಜೋ–ಆರ್ಥಿಕ ಹಿನ್ನೆಲೆಯಿಂದ ಬಂದ ಮಕ್ಕಳ ಬಗ್ಗೆ ವಿಡಿಯೊ ತೋರಿಸುವುದರ ಮೂಲಕ ಮಕ್ಕಳು ಕಾರ್ಯಯಾತ್ರೆಯಲ್ಲಿ ತೊಡಗಿಕೊಳ್ಳುವಂತೆ ಪ್ರಯತ್ನಿಸಿದರು. . ಆ ಬಳಿಕ ನಾವು ನಗರ ಮತ್ತು ಗ್ರಾಮೀಣ ಪ್ರದೇಶದ ಮಕ್ಕಳು, ಚಿನ್ನತೆಗೆ ಒಳಗಾದ ಕುಟುಂಬಗಳಿಂದ ಬಂದ ಮಕ್ಕಳು, ಪಾಲಕರ ವೈಯಕ್ತಿಕ ಅನುಭವಗಳು, ತನ್ನ ಜೊತೆ ಪಾಲಕರು ಹೇಗೆ ಕಾಲ ಕಳೆಯಬೇಕು ಎನ್ನುವ ಬಗ್ಗೆ ಮಾತನಾಡುವ ಮಗುವಿನ ಕುರಿತ ಪತ್ರಿಕೆಯ ಸುದ್ದಿಗಳತ್ತ ಗಮನಹರಿಸಿದೆವು. ಅನುಭವ ಜ್ಞಾನ ವೃದ್ಧಿ

ನಿಯಮದ ಪ್ರಕಾರ ಮುಂದಿನ ಹಂತದಲ್ಲಿ ಇದ್ದುದು ಅನುಭವ ಜ್ಞಾನ ವೃದ್ಧಿ (Building Background Knowledge) ಪ್ರಕ್ರಿಯೆ. ಇದು ತೀವ್ರತರದ ಚರ್ಚೆಯನ್ನು ಒಳಗೊಂಡಿದ್ದು, ಇದರಿಂದ ಮಕ್ಕಳು ತಮ್ಮ ಜ್ಞಾನವನ್ನು ವೃದ್ಧಿಸಿಕೊಳ್ಳಲು ಹಾಗು ಕಾರ್ಯಯಾತ್ರೆಯ ಬಗ್ಗೆ ಇನ್ನಷ್ಟು ಮಾಹಿತಿಯನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಇದು ವಿದ್ಯಾರ್ಥಿಗಳು ಓದು, ಯೋಚನೆ ಮತ್ತು ಪ್ರಶ್ನೆಗಳನ್ನು ಎತ್ತಲು ಹಾಗು ಅವರ ಜ್ಞಾನದ ಹರವನ್ನು ಮತ್ತಷ್ಟು ವಿಸ್ತರಿಸಲು ಸಮರ್ಥಗೊಳಿಸುತ್ತದೆ. ಅನುಭವ ಜ್ಞಾನವೃದ್ಧಿ ಪ್ರಕ್ರಿಯೆಯು ಕಾರ್ಯಯಾತ್ರೆಯನ್ನು ಅನಾವರಣಗೊಳಿಸಲು ಹಾಗು ಬೃಹತ್ ಯೋಜನೆಯನ್ನು ರೂಪಿಸಲು ನೆರವಾಗುತ್ತದೆ.

ಈ ಹಿನ್ನೆಲೆಯಲ್ಲಿ ಶಿಕ್ಷಕರು ಹಕ್ಕುಗಳು, ಕರ್ತವ್ಯಗಳು, ತಾರತಮ್ಯ, ನ್ಯಾಯ ಮುಂತಾದ ಕೆಲವು ಪ್ರಮುಖ ಪದಗಳ ಅರ್ಥವನ್ನು ವಿವರಿಸುವ ಪ್ರಯತ್ನವನ್ನು ಮಾಡಿದರು. ಇದಕ್ಕಾಗಿ ಅವರು ಹಲವಾರು ಓದುವ ಮತ್ತು ಗುಂಪು ಚರ್ಚೆಯನ್ನು ಬಳಸಿಕೊಂಡರು. ಇದರಿಂದಾಗಿ ವಿದ್ಯಾರ್ಥಿಗಳು 'ವೈವಿಧ್ಯತೆ' ಮತ್ತು 'ಸಮಾನತೆ'ಯ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಯಿತು.

**ವಿಶೇಷ ಕಾರ್ಯಯಾತ್ರೆಯ ಹರಿವು**

ಇದರ ಮುಖ್ಯ ಗುರಿ ಒಟ್ಟಾರೆಯಾಗಿ ಹಕ್ಕುಗಳನ್ನು ಮತ್ತು ಅದರಲ್ಲೂ ಮುಖ್ಯವಾಗಿ ಮಕ್ಕಳ ಹಕ್ಕುಗಳ ರಕ್ಷಣೆಗಾಗಿರುವ ರಾಷ್ಟ್ರೀಯ ಆಯೋಗ (National Commission for Protection of Child Rights -NCPCR) ಪ್ರಸ್ತಾಪ ಮಾಡಿದ ಮಕ್ಕಳ ಹಕ್ಕುಗಳನ್ನು ಮಾಧ್ಯಮಿಕ ಶಾಲೆಯ ಮಕ್ಕಳಿಗೆ ಪರಿಚಯಿಸುವುದು. ಭಾರತದ ಸಂವಿಧಾನದಲ್ಲಿ ಹಾಗು ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಸಮಾವೇಶವು ಪ್ರತಿಪಾದಿಸಿರುವಂತೆ ಮಕ್ಕಳ ಹಕ್ಕುಗಳ ಜೊತೆಗೆ ಎಲ್ಲ ಕಾನೂನುಗಳು, ನೀತಿಗಳು, ಕಾರ್ಯಕ್ರಮಗಳು ಮತ್ತು ಆಡಳಿತಾತ್ಮಕ ವ್ಯವಸ್ಥೆಗಳ ಬಗ್ಗೆ ಪರಿಚಯ ಮಾಡಿಸಬೇಕು ಎಂಬುದನ್ನು ರಾಷ್ಟ್ರೀಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗವು (ಎನ್‌ಸಿಪಿಸಿಆರ್) ಕಡ್ಡಾಯಗೊಳಿಸಿದೆ. ೦–೧೮ ವರ್ಷ ವಯಸ್ಸಿನ ಒಂದು ಮಗುವನ್ನು ಒಬ್ಬ ವ್ಯಕ್ತಿ ಎಂದು ವ್ಯಾಖ್ಯಾನ ಮಾಡಲಾಗಿದೆ.

**ಮಕ್ಕಳ ವಿಶೇಷ ಹಕ್ಕುಗಳು:**

| |
|---|
| ಸುರಕ್ಷಿತ ಪರಿಸರಕ್ಕೆ ಸಂಬಂಧಿಸಿದ ಹಕ್ಕು |
| ಸುರಕ್ಷಿತ ಪರಿಸರಕ್ಕೆ ಸಂಬಂಧಿಸಿದ ಹಕ್ಕು |
| ಸುರಕ್ಷಿತ ಪರಿಸರಕ್ಕೆ ಸಂಬಂಧಿಸಿದ ಹಕ್ಕು |
| ಆಹಾರದ ಹಕ್ಕು |
| ಆರೋಗ್ಯ ಸೇವೆಯ ಹಕ್ಕು |
| ಶಿಕ್ಷಣದ ಹಕ್ಕು |
| ಬಾಲ್ಯವಿವಾಹ ವಿರೋಧಿ ಹಕ್ಕು |
| ಸ್ವಾತಂತ್ರ್ಯದ ಹಕ್ಕು |
| ತಾರತಮ್ಯದಿಂದ ಮುಕ್ತವಾಗಿರುವ ಹಕ್ಕು |
| ಶಿಶು ದೌರ್ಜನ್ಯದಿಂದ ರಕ್ಷಿಸುವ ಹಕ್ಕು |
| ಶೋಷಣೆ ಮತ್ತು ನಿರ್ಲಕ್ಷ್ಯದಿಂದ ರಕ್ಷಿಸುವ ಹಕ್ಕು |
| ಆಲಿಸಲ್ಪಡುವ ಮತ್ತು ಮುಕ್ತವಾಗಿ ಭಾಗವಹಿಸುವ ಹಕ್ಕು |
| ಬಿಡುವು ಮತ್ತು ವಿರಾಮ ಸಮಯದ ಹಕ್ಕು |
| ಕೌಟುಂಬಿಕ ಬದುಕಿನ ಹಕ್ಕು |

**ಬಿಡುವು ಮತ್ತು ವಿರಾಮ ಸಮಯದ ಹಕ್ಕು**

ಹಕ್ಕುಗಳಿಗೆ ಸಂಬಂಧಿಸಿದ ಯೋಜನೆಗಳಿಗೆ ಮೂರ್ತ ರೂಪವನ್ನು ನೀಡಲು ನಾವು ದೊಡ್ಡ ಯೋಜನೆಯನ್ನು ಚುಟುಕುಗೊಳಿಸಿದೆವು. ಕಲಿಕಾರ್ಥಿಗಳಿಗೆ ಮಕ್ಕಳ ಹಕ್ಕುಗಳನ್ನು ಪರಿಚಯಿಸುವ ಮೂಲಕ ನಾವದನ್ನು ಸಾಧ್ಯವಾಗುವಂತೆ ಮಾಡಿದೆವು. ಹನ್ನೆರಡು ಹಕ್ಕುಗಳ ನಡುವೆ ನಾವು 'ಬಿಡುವು ಮತ್ತು ವಿರಾಮ ಸಮಯದ ಹಕ್ಕು' (Right to leisure and free time) ವಿಷಯದ ಮೇಲೆ ಹೆಚ್ಚಿನ ಗಮನ ಹರಿಸಲು ಆಯ್ಕೆ ಮಾಡಿಕೊಂಡೆವು. ಯುಎನ್‌ಸಿಆರ್‌ಸಿ 31ನೇ ವಿಧಿಯ ಪ್ರಕಾರ ಮಗುವು ತನ್ನ ವಯಸ್ಸಿಗೆ ತಕ್ಕಂತೆ ಆಟ ಮತ್ತು ಮನರಂಜನಾ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಸೂಕ್ತ ವಿರಾಮ ಮತ್ತು ಬಿಡುವಿನ ಹಕ್ಕನ್ನು ಹೊಂದಿದೆ.

ಶಾಲೆಯಲ್ಲಿ ಮಕ್ಕಳ ಹಕ್ಕುಗಳ ವಿಷಯವನ್ನು ಸಮರ್ಪಕವಾಗಿ ನಿಭಾಯಿಸಲಾಗಿದೆ ಮತ್ತು ಮಕ್ಕಳು ಯಾವುದೇ ಹಕ್ಕಿನಿಂದ ವಂಚಿತರಾಗಿದ್ದಾರೆಯೇ ಎಂಬುದನ್ನು ಪತ್ತೆ ಮಾಡಲು ವಿದ್ಯಾರ್ಥಿಗಳು ಪ್ರಶ್ನಾವಳಿಯನ್ನು ಸಿದ್ಧಪಡಿಸಿದ್ದರು. ಇದೇ ಪ್ರಶ್ನಾವಳಿಯನ್ನು ದತ್ತಾಂಶ ಸಂಗ್ರಹಕ್ಕೂ ಬಳಸಿಕೊಳ್ಳಲಾಯಿತು. ವಿದ್ಯಾರ್ಥಿಗಳು ತಮ್ಮ ನೆರೆಹೊರೆಯಲ್ಲಿರುವ ಇತರ ಮಕ್ಕಳ ಸಂದರ್ಶನವನ್ನು ನಡೆಸಿದರು ಮತ್ತು ಅನೇಕ ಪ್ರಮುಖ ವಿಷಯಗಳನ್ನು ಪತ್ತೆ ಮಾಡಲು ಅಂಕಿ-ಅಂಶಗಳನ್ನು ವಿಶ್ಲೇಷಣೆ ಮಾಡಿದರು. ವಿದ್ಯಾರ್ಥಿಗಳು ಸಂದರ್ಶನಗಳನ್ನು ನಡೆಸುವುದರಲ್ಲಿ, ಅಂಕಿ-ಅಂಶಗಳ ನಿರ್ವಹಣೆ ಮತ್ತು ವಿಶ್ಲೇಷಣೆ ಮಾಡುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಲ್ಲದೆ, ಅದೇ ವೇಳೆ ಅವರು ತರಗತಿಯಲ್ಲಿ ಪ್ರತಿಯೊಂದು ಮಗುವು ಕೂಡ ತನಗೆ ಅರ್ಹವಾದ ಹಕ್ಕುಗಳನ್ನು ಪಡೆದೇ ಪಡೆಯಬೇಕು ಎನ್ನುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿರುವ ಅನೇಕ ವ್ಯಕ್ತಿಗಳು ಮತ್ತು ಗುಂಪುಗಳ ಕುರಿತು ಗಹನವಾದ ಓದಿನ ಕಡೆಗೂ ಗಮನ ಹರಿಸಿದ್ದರು.

**ಅಗತ್ಯಗಳು ಮತ್ತು ಹಕ್ಕುಗಳು**

ಹಕ್ಕು ಮತ್ತು ಅಗತ್ಯದ ನಡುವಿನ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳಲು ಮೊದಲ ಚಟುವಟಿಕೆಯನ್ನು ಕೈಗೊಳ್ಳಲಾಯಿತು. ಇದನ್ನು 2009ರ ಮಾರ್ಗಪಲ್ಲಟ ಮತ್ತು ಪರ್ಯಾಯಗಳು ವಿಷಯದ ಮೇಲಿನ ಯೂನಿಸೆಫ್ ಟೂಲ್‌ಕಿಟ್‌ನಿಂದ ಸ್ವೀಕರಿಸಲಾಗಿದೆ; ಚಟುವಟಿಕೆ 27: ಒಂದು ಲೋಟ ನೀರು (Diversion and Alternatives to Detention 2009; Activity 27: Glass of Water) – ಇದರಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಹಕ್ಕುಗಳ ಬಗ್ಗೆ ಶಿಬಿರಾರ್ಥಿಗಳು ಈಗ ಹೊಂದಿರುವ ಅಭಿಪ್ರಾಯಗಳನ್ನು ಹೊರತೆಗೆದು ಅಗತ್ಯಗಳು ಮತ್ತು ಹಕ್ಕುಗಳ ನಡುವಿನ ಪ್ರಮುಖ ವ್ಯತ್ಯಾಸಗಳ ಕುರಿತು ಸ್ಪಷ್ಟಪಡಿಸುವುದು ಇದರ ಉದ್ದೇಶವಾಗಿತ್ತು. ಈ ಹೇಳಿಕೆಗಳ ನಡುವಿನ ವ್ಯತ್ಯಾಸ ಏನು: 'ನನಗೆ ಒಂದು ಲೋಟ ನೀರಿನ ಅಗತ್ಯವಿದೆ' ಮತ್ತು 'ನನಗೆ ಒಂದು ಲೋಟ ನೀರು ಪಡೆಯುವ ಹಕ್ಕು ಇದೆ?' ಈ ವಿಷಯ ಪ್ರತಿಪಾದನೆಯಲ್ಲಿ ಅತ್ಯಂತ ಶಕ್ತಿಶಾಲಿಯಾದುದು ಯಾವುದು ಮತ್ತು ಯಾಕೆ? ಈ ಚಟುವಟಿಕೆಯ ಮೂಲಕ ವಿದ್ಯಾರ್ಥಿಗಳ ಅಗತ್ಯಗಳು ಮತ್ತು ಹಕ್ಕುಗಳ ನಡುವಿನ ಮುಖ್ಯ ವ್ಯತ್ಯಾಸವೇನೆಂದರೆ; ಹಕ್ಕುಗಳನ್ನು ಪ್ರತಿಪಾದಿಸುವ (ಹಕ್ಕುಗಳನ್ನು ಹೊಂದಿರುವ) ವ್ಯಕ್ತಿ ಮತ್ತು ಅಂತಹ ಹಕ್ಕುಗಳನ್ನು ಪೂರೈಸುವ (ಕರ್ತವ್ಯ ಹೊಂದಿರುವ) ಜವಾಬ್ದಾರಿಯನ್ನು ಖಾತ್ರಿಪಡಿಸುವ ವ್ಯಕ್ತಿಯ ನಡುವಿನ ಸಂಬಂಧ ಎಂಬುದನ್ನು ಗಮನಿಸಿದರು.

**ಸಂಚಾರಿಕಾರ್ಯಕ್ರಮ**

ಸಮಾಜದಲ್ಲಿ ಮಕ್ಕಳ ಸ್ಥಾನಮಾನವನ್ನು ಭದ್ರಗೊಳಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಬಿಕಾನೇರ್‌ನ ಗ್ರಾಮೀಣ ಆರೋಗ್ಯ, ಸಂಶೋಧನೆ ಮತ್ತು ಅಭಿವೃದ್ಧಿ ಟ್ರಸ್ಟ್ (Rural Health, Research and Development- URMUL)) ಸಹಯೋಗದೊಂದಿಗೆ ಸಂಚಾರಿ ಕಾರ್ಯಕ್ರಮವನ್ನು (ಖೋಜ್) ಏರ್ಪಡಿಸಲಾಗಿತ್ತು. ಸಮಾಜದಲ್ಲಿ ಮಕ್ಕಳ ಅವಕಾಶಗಳನ್ನು ಬಲಪಡಿಸಲು ಮತ್ತು ಅವರ ಉಳಿವನ್ನು ಖಾತರಿಪಡಿಸಲು ಈ ಕಾರ್ಯಕ್ರಮವನ್ನು ಸಮುದಾಯಗಳು, ಸ್ಥಳೀಯ ಅಧಿಕಾರಿಗಳು ಹಾಗು ನೀತಿನಿರೂಪಕರ ಜೊತೆ ಅತ್ಯಂತ ವ್ಯವಸ್ಥಿತವಾಗಿ ರೂಪಿಸಲಾಗಿತ್ತು. ಮಕ್ಕಳ ಹಕ್ಕುಗಳನ್ನು ಬೆಂಬಲಿಸುವುದರಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಇದು ಮಕ್ಕಳ ಸಹಾಯವಾಣಿ (ಚೈಲ್ಡ್‌ಲೈನ್) 1098 ನಿರ್ವಹಣೆಯನ್ನು ಕೂಡ ಮಾಡುತ್ತಿದೆ. ಗ್ರಾಮದಲ್ಲಿನ ಸರ್ಕಾರಿ ಶಾಲೆಯ ಮಕ್ಕಳೊಂದಿಗೆ ತೊಡಗಿಸಿಕೊಂಡು ಮಕ್ಕಳ ಹಕ್ಕುಗಳ ಬಗ್ಗೆ, ಅದರಲ್ಲೂ ಮುಖ್ಯವಾಗಿ ಬಿಡುವು ಮತ್ತು ವಿರಾಮ ಸಮಯದ ಹಕ್ಕು, ಇದಕ್ಕೆ ಸಂಬಂಧಿಸಿದಂತೆ ಅವರಿಗಿರುವ ಅರಿವನ್ನು ಅರ್ಥಮಾಡಿಕೊಳ್ಳಲು ಬಯಸಿದೆವು. ನಾವು ಒಂದೇ ಹಕ್ಕನ್ನು ಎರಡು ವಿಭಿನ್ನ ಸನ್ನಿವೇಶಗಳಲ್ಲಿ ಅರ್ಥ ಮಾಡಿಕೊಳ್ಳುವುದನ್ನು ಕಲಿಯುತ್ತೇವೆ ಎನ್ನುವ ರೀತಿಯಲ್ಲಿ ಸಂಚಾರಿ ಕಾರ್ಯಕ್ರಮದ ವಿನ್ಯಾಸ ಮತ್ತು ಪರಿಕಲ್ಪನೆಯನ್ನು ಮಾಡಲಾಗಿತ್ತು.

ಬಿಕಾನೇರ್‌ನ ಬಜ್ಜು ಗ್ರಾಮದಲ್ಲಿರುವ ಸರ್ಕಾರಿ ಶಾಲೆಯನ್ನು ಇದಕ್ಕಾಗಿ ನಾವು ಆಯ್ಕೆ ಮಾಡಿದ್ದೆವು. ಹೆರಿಟೇಜ್ ಶಾಲೆಯಲ್ಲಿ ನಡೆಸಲಾದ ದತ್ತಾಂಶ ಸಂಗ್ರಹ ಹಾಗು ಅವುಗಳ ವಿಶ್ಲೇಷಣೆಗೆ ನಡೆಸಿದ ಪ್ರಕ್ರಿಯೆಯನ್ನೇ ಬಜ್ಜು ಸರ್ಕಾರಿ ಶಾಲೆಯ ವಿದ್ಯಾರ್ಥಿಗಳು ಕೂಡ ಕೈಗೊಂಡರು.

ಈ ಹೊತ್ತಿಗೆ ಎಲ್ಲ ಯುವ ಮನಸ್ಸುಗಳಲ್ಲಿ ಹಲವಾರು ಪ್ರಶ್ನೆಗಳು ತುಂಬಿಕೊಂಡಿದ್ದವು. ಅವರು ಹೆಚ್ಚು ಹೆಚ್ಚು ಕುತೂಹಲಕ್ಕೆ ಒಳಗಾಗುತ್ತಿದ್ದಂತೆ ನಮ್ಮ ಬಹುನಿರೀಕ್ಷಿತ ಐದು ದಿನಗಳ ಸುದೀರ್ಘಾವಧಿಯ ಸಂಚಾರಿ ಕಲಿಕಾ ಪಯಣ ಖೋಜ್ ಆರಂಭವಾಯಿತು. ಹೆರಿಟೇಜ್ ಶಾಲೆಯ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ರೈಲಿನಲ್ಲಿ ಬಜ್ಜು ಗ್ರಾಮಕ್ಕೆ ಪ್ರಯಾಣ ಆರಂಭಿಸಿದರು ಮತ್ತು ಅವರನ್ನು ಯುಆರ್‌ಎಂಯುಎಲ್ ಅತಿಥಿ ಗೃಹಗಳಲ್ಲಿ ಇರಿಸಲಾಯಿತು.

ಬಜ್ಜು ಗ್ರಾಮದ ಸರ್ಕಾರಿ ಶಾಲೆಯ ವಿದ್ಯಾರ್ಥಿಗಳೊಂದಿಗೆ ಆತ್ಮೀಯವಾಗಿ ಬೆರೆಯುವ, ಕೆಲಸ ಮಾಡುವ ಪರಂಪರಾ ಶಾಲೆಯ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಒಟ್ಟಾರೆ ಅದೊಂದು ಭಿನ್ನ ಅನುಭವವಾಗಿತ್ತು. ಸಣ್ಣ ಸಣ್ಣ ಗುಂಪುಗಳಲ್ಲಿ ಜೊತೆಯಾಗಿ ಒಂದು ದಿನವನ್ನು ಕಳೆಯುತ್ತಿದ್ದಂತೆ ಎಲ್ಲರೂ ಪರಿಚಿತರಾಗಿ ಪರಸ್ಪರ ಸಂಪರ್ಕ-ಸಂವಹನ ಸಾಧ್ಯವಾಯಿತು. ನಾವು ಮಕ್ಕಳಿಂದ ಪಡೆದ ಅಂಕಿ-ಅಂಶಗಳು ಹೆಣ್ಣು ಮಗುವಿಗೆ ಸಂಬಂಧಿಸಿದಂತೆ ಸಾಕಷ್ಟು ಭಿನ್ನವಾಗಿದ್ದವು. ಗ್ರಾಮದಲ್ಲಿ ಹೆಣ್ಣು ಮಕ್ಕಳಿಗೆ ಆಟವಾಡಲು ಸಾಕಷ್ಟು ಸಮಯವೇ ಸಿಗುವುದಿಲ್ಲ, ಹಳ್ಳಿಯಲ್ಲಿ ಅವರು ಸಾಕಷ್ಟು ಕೆಲಸಗಳನ್ನು ಮಾಡಬೇಕಾದ ಅನಿವಾರ್ಯವಿತ್ತು. ಆದರೆ ಗುರುಗಾಂವ್ ನಗರದಲ್ಲಿ ಹೆಣ್ಣು ಮಕ್ಕಳಿಗೆ ಇದ್ದ ಸಮಸ್ಯೆ ಏನೆಂದರೆ ಅಲ್ಲಿ ಸುರಕ್ಷಿತವಾದ ಜಾಗಗಳೇ ಇರಲಿಲ್ಲ.

ಮಕ್ಕಳೆಲ್ಲ ಮರಳಿನ ದಿಣ್ಣೆಯ ಮೇಲೆ ಕುಳಿತು ಸಂಜೆಯ ಸೂರ್ಯಾಸ್ತವನ್ನು ವೀಕ್ಷಿಸುತ್ತ ಕಳೆದರು. ಒಂದೇ ವಯಸ್ಸಿನ ಮಗುವಿನ ಜೀವನವು ಹಳ್ಳಿಗೂ ನಗರಕ್ಕೂ ಎಷ್ಟು ಭಿನ್ನವಾಗಿದೆ ಎಂಬುದನ್ನು ಅವರು ಕಂಡುಕೊಂಡರು. ಆಳವಾದ ಚರ್ಚೆ ಮತ್ತು ಚಿಂತನಾರ್ಹ ಅಭಿವ್ಯಕ್ತಿಗಳು ಅನೇಕ ಸಂದರ್ಭದಲ್ಲಿ ಯಾತನಾಮಯವಾಗಿದ್ದವು ಮತ್ತು ಅನೇಕರ ಕಣ್ಣುಗಳು ಒದ್ದೆಯಾಗಿದ್ದವು. ಇಂತಹ ಸಂದರ್ಭದಲ್ಲಿಯೇ ನಮ್ಮ ಮುಂದಿನ ಬಹುಮುಖ್ಯ ಯೋಜನೆ ಸಕ್ರಿಯ ಹಾಗು ಜಾಗೃತ ನಾಗರಿಕರು ವಿಷಯದ ಕಡೆಗೆ ಹೊರಳಿತು. ಮಕ್ಕಳ ಹಕ್ಕುಗಳ ಬಗ್ಗೆ ಜನರನ್ನು ಜಾಗೃತಗೊಳಿಸುವ ಬಗ್ಗೆ ನಿರ್ಧಾರ ಕೈಗೊಂಡ ಮಕ್ಕಳು ಸಮಾರೋಪಕ್ಕಾಗಿ ಸಿದ್ಧತೆ ಆರಂಭಿಸಿದರು.

**ಬದಲಾವಣೆಯ ಭಾಗವಾಗಿ**

**ವಿಶೇಷ ಕಾರ್ಯಯಾತ್ರೆಯ ಪಕ್ಷಿನೋಟ**

**ದೊಡ್ಡ ಯೋಜನೆ**

**ವ್ಯವಸ್ಥೆ/ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಘನತೆ ಮತ್ತು ಕಟ್ಟಳೆಗಳು ಸಮಾನತೆ ಮತ್ತು ನ್ಯಾಯವನ್ನು ಖಾತರಿಗೊಳಿಸುತ್ತವೆ.**
**ಜಾಗೃತ ಹಾಗೂ ಸಕ್ರಿಯ ನಾಗರಿಕರು ಪ್ರಜಾಪ್ರಭುತ್ವದ ಜೀವದ್ರವ್ಯಗಳು.**

**ಮಾರ್ಗದರ್ಶಿ ಪ್ರಶ್ನೆಗಳು**

**ಪ್ರಜಾಪ್ರಭುತ್ವವು ಸಮಾನತೆ ಮತ್ತು ನ್ಯಾಯವನ್ನು ಹೇಗೆ ಒದಗಿಸುತ್ತದೆ ಮತ್ತು ಆ ಮೂಲಕ ಹೇಗೆ ವೈವಿಧ್ಯತೆಯನ್ನು ಕಾಪಾಡುತ್ತದೆ?**
**ಯಾರು ಜಾಗೃತ ನಾಗರಿಕ? ಒಂದು ಪ್ರಜಾಪ್ರಭುತ್ವದಲ್ಲಿ ಸಕ್ರಿಯ ನಾಗರಿಕನ ಪಾತ್ರ ಹೇಗಿರುತ್ತದೆ?**

**ಗಮನಿಸಬೇಕಾದ ಕೌಶಲಗಳು**

***ವಿಮರ್ಶಾತ್ಮಕ ಯೋಚನೆ**
***ಸತತ ಪರಿಶ್ರಮ**

**ಕಾರ್ಯಯಾತ್ರೆಯ ಮುಕ್ತಾಯ**

ವಿದ್ಯಾರ್ಥಿಗಳು ನಿರ್ಧರಿಸಿದಂತೆ ಮಕ್ಕಳ ಹಕ್ಕುಗಳ ಕುರಿತ ಬೀದಿ ನಾಟಕದ ಮೂಲಕ ಈ ಕಲಿಕಾ ಕಾರ್ಯಯಾತ್ರೆಯ ಮುಕ್ತಾಯವು ನಡೆಯಿತು. ನಮ್ಮ ಜೊತೆ ಇಬ್ಬರು ರಂಗಕರ್ಮಿಗಳಿದ್ದರು. ಈ ನಾಟಕದ ವಸ್ತು ವಿಷಯ, ಸಂಭಾಷಣೆಗಳು ಮತ್ತು ಕಥಾ ವಸ್ತುವನ್ನು ವಿದ್ಯಾರ್ಥಿಗಳ ಜೊತೆಗಿನ ಮಾತುಕತೆ–ಸಂವಾದದ ಸಂದರ್ಭದಲ್ಲೇ ರೂಪಿಸಬೇಕಾಗಿತ್ತು. ಹಾಗಾಗಿ ಪ್ರತಿದಿನ ನಾವು ವಿಶೇಷವಾಗಿ ಮಕ್ಕಳ ಹಕ್ಕುಗಳ ಜಾಗೃತಿಯ ಮೇಲೆ ಕೆಲಸ ಮಾಡುತ್ತಿದ್ದುದರಿಂದ ಆಯಾ ದಿನದ ಸನ್ನಿವೇಶಗಳೇ ನಾಟಕಕ್ಕೆ ವಸ್ತುವಾಗಿದ್ದವು.

ಎರಡು ದಿನಗಳ ಬಳಿಕ ಬಜ್ಜು ಶಾಲೆಯ ವಿದ್ಯಾರ್ಥಿಗಳು ತಾಲೀಮು ನಡೆಸಲು ಯುಆರ್‌ಎಂಯುಎಲ್ ಕ್ಯಾಂಪಸ್‌ಗೆ ಬರುವುದು ಎಂದು ನಿರ್ಧರಿಸಲಾಯಿತು. ನಾಟಕದ ಸಂಭಾಷಣೆ, ಕಥಾವಸ್ತು ಮತ್ತು ಅಭಿನಯಿಸುವವರ ಪಟ್ಟಿ ಅಂತಿಮಗೊಳ್ಳುತ್ತಿದ್ದಂತೆ ಕೊನೆಯ ದಿನವೂ ಕೂಡ ಬಂದಿತು. ಅಂದು ಎರಡೂ ಶಾಲೆಗಳ ವಿದ್ಯಾರ್ಥಿಗಳು ಸೇರಿ ಬಾಲ್ ಅಧಿಕಾರ್ ಎಂಬ ನಾಟಕವನ್ನು ಪ್ರಸ್ತುತಪಡಿಸಿದರು.

ಗುರುಗಾಂವ್‌ಗೆ ಮರಳಿದ ಬಳಿಕ ಪರಂಪರಾ ಶಾಲೆಯ ವಿದ್ಯಾರ್ಥಿಗಳು ಇಂಗ್ಲಿಷ್‌ನಲ್ಲಿ 'ನನ್ನೊಳಗಿನ ಅಧಿಕಾರ' (The Power Within Me) ಮತ್ತು ಹಿಂದಿಯಲ್ಲಿ 'ಬಾಲ್ ಅಧಿಕಾರೋಂ ಕಿ ಖೋಜ್' ಕುರಿತು ಕಾರ್ಯನಿಯೋಜನೆ ಪ್ರಸ್ತುತಪಡಿಸಿದರು. ಹಲವು ಸುತ್ತಿನಲ್ಲಿ ಕರಡು ಪ್ರತಿಗಳನ್ನು ಸಿದ್ಧಪಡಿಸಲಾಗಿತ್ತು. ಇದನ್ನು ವಿದ್ಯಾರ್ಥಿಗಳಿಗೆ ನೀಡಲಾದ ಪರಿಶೀಲನಾ ಪಟ್ಟಿಯೊಂದಿಗೆ ಸ್ವಯಂ

ಮತ್ತು ಸಮವಯಸ್ಕರು ಮೌಲ್ಯಮಾಪನ ಮಾಡಿದರು. ಗುರುಗಾಂವ್‌ನ ಬೀದಿಗಳಲ್ಲಿ ನಾಟಕವನ್ನು ಪ್ರದರ್ಶನ ಮಾಡಿದ ಬಳಿಕ ಕಲಿಕಾ ಗುರಿಗಳ ಆಧಾರದಲ್ಲಿ ಸ್ವಯಂ ಮೌಲ್ಯಮಾಪನ ಮಾಡಿಕೊಳ್ಳುವಂತೆ ವಿದ್ಯಾರ್ಥಿಗಳನ್ನು ಕೇಳಲಾಯಿತು. ಇಡೀ ಅಭಿಯಾನದುದ್ದಕ್ಕೂ ಪರಿಶೀಲನಾ ಪಟ್ಟಿ ಮತ್ತು ರೂಬ್ರಿಕ್ ನೆರವಿನೊಂದಿಗೆ ಕಲಿಕಾ ಗುರಿಗಳು ಕಲಿಕಾರ್ಥಿಗಳು ಕಾರ್ಯ-ನಿರ್ವಹಿಸುವಂತೆ ಮಾಡುವಲ್ಲಿ ಹಾಗು ಬದಲಾವಣೆಯ ಭಾಗವಾಗಿ ಕಾರ್ಯಯಾತ್ರೆಯು ಯಶಸ್ಸಿನೊಂದಿಗೆ ಮುಕ್ತಾಯಗೊಳ್ಳಲು ನಮಗೆ ಸಹಕಾರಿಯಾಯಿತು.

ಶಾಲೆಯಲ್ಲಿ ಲೀಲಾ ಸೇಠ್ ಅವರನ್ನು ಭೇಟಿ ಮಾಡಲು ಅವಕಾಶ ಸಿಕ್ಕಿದ್ದು ಈ ವಿಶೇಷಯಾತ್ರೆಯ ಇನ್ನೊಂದು ಮುಖ್ಯ ಅಂಶ. ಲೀಲಾ ಸೇಠ್ (1930-2017) ಅವರು ದೆಹಲಿ ಹೈಕೋರ್ಟ್‌ನ ಮೊದಲ ಮಹಿಳಾ ನ್ಯಾಯಾಧೀಶರಾಗಿದ್ದವರು ಮತ್ತು ರಾಜ್ಯವೊಂದರ ಹೈಕೋರ್ಟಿನ ಮುಖ್ಯನ್ಯಾಯಮೂರ್ತಿಯಾಗಿ ಸೇವೆ ಸಲ್ಲಿಸಿದ್ದವರು ಹಾಗೂ ಯುವ ಓದುಗರಿಗೆ ಭಾರತದ ಸಂವಿಧಾನವನ್ನು ಪರಿಚಯಿಸುವ 'ವಿ ದಿ ಚಿಲ್ಡ್ರನ್' ಕೃತಿಯ ಲೇಖಕರು.

**ಉಪಸಂಹಾರ**

ಶಿಕ್ಷಕರಾದ ನಮಗೆ ಈ ವಿಶೇಷಯಾತ್ರೆಯು ಇಡೀ ಕೋರ್ಸಿನ ಉದ್ದಕ್ಕೂ ನಮ್ಮ ಪಾಲಿಗೆ ಅತ್ಯಂತ ಆಪ್ತವಾದುದಾಗಿತ್ತು ಎಂದರೆ ಅತಿಶಯೋಕ್ತಿಯಲ್ಲ. ಬದಲಾವಣೆಗಾಗಿ ಯುವ ಮನಸ್ಸುಗಳು ಸಮಾನ ಗುರಿಯನ್ನು ಸಾಧಿಸಲು ಹೇಗೆ ಮಾಹಿತಿಯನ್ನು ಪಡೆಯುತ್ತಿದ್ದವು ಮತ್ತು ಪರಸ್ಪರ ಸಂಗ್ರಹಿಸುವ ಕೆಲಸ ಮಾಡುತ್ತಿದ್ದವು ಎಂಬುದಕ್ಕೆ ನಾವು ಸಾಕ್ಷಿಯಾಗಿದ್ದೆವು. ನಮ್ಮ ಮಕ್ಕಳ ಆಳವಾದ ಚಿಂತನೆಗಳು, ಮಕ್ಕಳ ತಿಳಿವಳಿಕೆಯಿಂದ ಬಹುದೂರವೇ ಉಳಿಯುವಂತೆ ಕಾಣುತ್ತಿದ್ದ ಹಕ್ಕುಗಳು, ಪ್ರಜಾಪ್ರಭುತ್ವ, ಸಮಾನತೆ-ಯಂತಹ ಪರಿಕಲ್ಪನೆಗಳು ಕೂಡ ಸೂಕ್ತವಾಗಿ ವಿನ್ಯಾಸಗೊಳಿಸಲಾದ ಬೋಧನಾ ಕಾರ್ಯತಂತ್ರಗಳಾಗಲು ಸಾಧ್ಯವಿದೆ ಎಂಬ ನಮ್ಮ ನಂಬಿಕೆಯನ್ನು ಇನ್ನಷ್ಟು ಗಟ್ಟಿಗೊಳಿಸಿದವು. ಶಿಕ್ಷಕರಾಗಿ ಉದ್ದಕ್ಕೂ ಇದ್ದ ಪಾತ್ರವೆಂದರೆ ಮಕ್ಕಳ ಯೋಜನೆಗೆ ಸಹಕಾರವನ್ನು ನೀಡುವುದು ಮತ್ತು ಅವರನ್ನು ಸಕ್ರಿಯ ಹಾಗು ತಿಳಿವಳಿಕೆಯುಳ್ಳ ನಾಗರಿಕರನ್ನಾಗಿ ಮಾಡಲು ದಾರಿ ತೋರುವುದು.



| | |
|---|---|
| **ಸಮಾಜ ವಿಜ್ಞಾನ** | ಉದಾಹರಣೆಗಳನ್ನು ಬಳಸಿಕೊಂಡು ನಾನು ವೈವಿಧ್ಯತೆ, ತಾರತಮ್ಯ ಮತ್ತು ಅಸಮಾನತೆ ನಡುವಿನ ವ್ಯತ್ಯಾಸಗಳನ್ನು ಗುರುತಿಸಬಹುದು.<br>ನನ್ನ ಸುತ್ತಲಿನ ಅಸಮಾನತೆಗೆ ಪೂರ್ವಗ್ರಹಗಳು ಹೇಗೆ ಕೊಡುಗೆ ನೀಡುತ್ತವೆ ಎಂಬುದನ್ನು ನಾನು ಅಳೆಯಬಹುದು.<br>ಪ್ರಜಾಪ್ರಭುತ್ವದ ಕಾರ್ಯನಿರ್ವಹಣೆಯ ಮೇಲೆ ಪ್ರಭಾವ ಬೀರುವ ಪ್ರಮುಖ ಅಂಶಗಳನ್ನು ನಾನು ಗುರುತಿಸಬಹುದು.<br>ಸಮಾಜದಲ್ಲಿ ಸಮಾನತೆ, ಘನತೆ ಮತ್ತು ನ್ಯಾಯವನ್ನು ಖಾತರಿಪಡಿಸಲು ಆಡಳಿತದ ರೂಪದಲ್ಲಿ ಪ್ರಜಾಪ್ರಭುತ್ವವು ಹೇಗೆ ಅನುಕೂಲಕರವಾಗಿದೆ ಎಂಬುದನ್ನು ನಾನು ಸಮರ್ಥಿಸಬಹುದು.<br>ಸರ್ವರಿಗೂ ಸಮಾನತೆ ಮತ್ತು ನ್ಯಾಯವನ್ನು ಖಾತ್ರಿಗೊಳಿಸುವ ಸಂವಿಧಾನದ ನಿರ್ದಿಷ್ಟವಾದ ಭಾಗಗಳನ್ನು ನಾನು ಉಲ್ಲೇಖ ಮಾಡಬಲ್ಲೆ.<br>ನನ್ನ ಸುತ್ತಲಿನ ತಾರತಮ್ಯದ ಬಗ್ಗೆ ನಿಜ ಜೀವನದ ಉದಾಹರಣೆಗಳನ್ನು ವಿಶ್ಲೇಷಣೆ ಮಾಡಲು ನಾನು ಸಂವಿಧಾನದ ನಿರ್ದಿಷ್ಟ ಭಾಗಗಳನ್ನು ಉಲ್ಲೇಖಿಸಬಲ್ಲೆ.<br>ನನ್ನ ಸಮುದಾಯದಲ್ಲಿರುವ ಪ್ರಜಾಪ್ರಭುತ್ವ ಪ್ರಕ್ರಿಯೆಯ ಅನುಷ್ಠಾನವನ್ನು ನಾನು ಮೌಲ್ಯಮಾಪನ ಮಾಡಬಲ್ಲೆ.<br>ನನ್ನ ಸುತ್ತಲಿನ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳ ಆಳವಾದ ವಿಶ್ಲೇಷಣೆಗೆ ಅನುಕೂಲ ಮಾಡಿಕೊಡಲು, ತನಿಖೆ ಮಾಡಲು ತೀಕ್ಷ್ಣ ಸ್ವರೂಪದ ಪ್ರಶ್ನೆಗಳನ್ನು ನಾನು ಕೇಳಬಲ್ಲೆ. |
| **ಓದುವುದು** | ಒಂದು ಪಠ್ಯವನ್ನು ಅರ್ಥ ಮಾಡಿಕೊಳ್ಳಲು ನಾನು ಗ್ರಹಿಕಾ ತಂತ್ರಗಳನ್ನು ಬಳಸಿಕೊಳ್ಳಬಹುದು.<br>ಒದಗಿಸಲಾದ ಪಠ್ಯದಿಂದ ಅಗತ್ಯವಿರುವ ಮಾಹಿತಿಯನ್ನು ಹೊರತೆಗೆಯಲು ನಾನು ಸಮರ್ಪಕವಾದ ಓದುವ ಕಾರ್ಯತಂತ್ರವನ್ನು ಬಳಸಬಹುದು. |
| **ಬರೆಯುವುದು** | ವಿಶ್ಲೇಷಣೆ, ಚಿಂತನೆ ಮತ್ತು ಸಂಶೋಧನೆಗೆ ಬೆಂಬಲ ನೀಡಲು ಮತ್ತು ಅದನ್ನು ಅಗತ್ಯವಿರುವ ರೂಪದಲ್ಲಿ ಪ್ರಸ್ತುತಪಡಿಸಲು ಅನೇಕ ಟಿಪ್ಪಣಿಗಳಿಂದ ನಾನು ಪುರಾವೆಯನ್ನು ಪಡೆಯಬಲ್ಲೆ. |
| **ಮಾತನಾಡುವುದು** | ನಿರ್ದಿಷ್ಟಪಡಿಸಿದ ಸ್ವರೂಪಕ್ಕೆ ತಕ್ಕ ವಿಧಾನದಲ್ಲಿ ವಿಶ್ವಾಸ, ಸ್ಪಷ್ಟತೆ ಮತ್ತು ಸಂಘಟಿತವಾಗಿ ನನ್ನ ತಿಳಿವಳಿಕೆಯನ್ನು ಪ್ರಸ್ತುತಪಡಿಸಬಲ್ಲೆ. |
| **ವಿಮರ್ಶಾ ಚಿಂತನೆ** | ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಪ್ರಜಾಸತ್ತಾತ್ಮಕ ಪ್ರಕ್ರಿಯೆಯ ಆಳವಾದ ವಿಶ್ಲೇಷಣೆ ಮತ್ತು ಪುರಾವೆಗೆ ನಾನು ವಿಮರ್ಶಾತ್ಮಕವಾದ ಪ್ರಶ್ನೆಗಳನ್ನು ಕೇಳಬಲ್ಲೆ. |
| **ಗುಣ ಮತ್ತು ಸಂಸ್ಕೃತಿ** | ನನ್ನ ಹಾಗೂ ಇತರರ ಕೆಲಸವನ್ನು ಸುಧಾರಿಸಲು ನಾನು ರಚನಾತ್ಮಕವಾದ ಅಭಿಪ್ರಾಯವನ್ನು ಕೊಡಬಲ್ಲೆ ಮತ್ತು ನಿರೀಕ್ಷಿಸಬಲ್ಲೆ.<br>ಸಹಭಾಗಿತ್ವಕ್ಕೆ ನನ್ನ ಸಹ ಸದಸ್ಯರಿಗೆ ಸಮಾನವಾದ ಅವಕಾಶ ನೀಡುವ ಮೂಲಕ ನಾನು ಕೂಡ ಒಳಗೊಳ್ಳುವ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಬಲ್ಲೆ.<br>ಮಾತನಾಡುವ ವ್ಯಕ್ತಿಯ ನುಡಿಗಳನ್ನು ಗಮನವಿಟ್ಟು ಕೇಳುವ ಮೂಲಕ ನಾನು ನನ್ನ ಗೌರವವನ್ನು ನೀಡಬಲ್ಲೆ |
| **ದೃಶ್ಯ ಹಾಗು ಪ್ರದರ್ಶನ ಕಲೆ** | ನನ್ನ ನೆರೆಹೊರೆಯಲ್ಲಿ ಪ್ರಚಾರಮಾಡಲು ನಾನು ರಂಗಭೂಮಿ (ಬೀದಿ ನಾಟಕ) ಮಾಧ್ಯಮವನ್ನು ಬಳಕೆ ಮಾಡಬಹುದು. |



**ಶಿಲ್ಪಿ ಹಂಡಾ** ಅವರು ಮಕ್ಕಳ ಸಮಾಜೋ–ಭಾವಾನಾತ್ಮಕತೆಯ ಅಭಿವೃದ್ಧಿಯಲ್ಲಿ ಅತೀವ ಆಸಕ್ತಿಯನ್ನು ಹೊಂದಿದ ಶಿಕ್ಷಕಿ. ಕಳೆದ 12 ವರ್ಷಗಳಿಂದ ಮಾಧ್ಯಮಿಕ ಪಠ್ಯ ಕಾರ್ಯಕ್ರಮಕ್ಕೆ ಬೋಧನಾ ನಾಯಕಿಯಾಗಿ ಗುರುಗಾಂವ್‌ನ ಪರಂಪರಾ ಪ್ರಯೋಗಾತ್ಮಕ ಕಲಿಕಾ ಶಾಲೆಯೊಂದಿಗೆ ಅವರು ತೊಡಗಿಸಿಕೊಂಡಿದ್ದಾರೆ. ಅವರು ಹೊಸ ಶಿಕ್ಷಕರಿಗೆ ತರಬೇತಿ ನೀಡುವಲ್ಲಿಯೂ ಕೆಲಸ ಮಾಡಿದವರು. ರಸಾಯನಶಾಸ್ತ್ರವನ್ನು ವಿಶೇಷ ವಿಷಯವನ್ನಾಗಿ ತೆಗೆದುಕೊಂಡು ದಿಲ್ಲಿ ವಿಶ್ವವಿದ್ಯಾಲಯದಿಂದ ವಿಜ್ಞಾನ ಪದವಿಯನ್ನು ಪಡೆದಿರುವ ಶಿಲ್ಪಿ ಅವರು ಪ್ರಸ್ತುತ ಸ್ವೀಡನ್‌ನ್ನಿನ ಶಾಲೆಯೊಂದರಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರನ್ನು ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು: shilpi.nischal@gmail.com



**ರೊನಿತಾ ಶರ್ಮಾ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಬೋಧನಾ ಸಿಬ್ಬಂದಿಯಾಗಿದ್ದಾರೆ. ಅವರು ಬೆಂಗಳೂರಿನ ಮುಂದುವರಿಕೆ ಶಿಕ್ಷಣಕ್ಕಾಗಿರುವ ಶಾಲೆಯಲ್ಲಿನ ಮೌಲ್ಯಮಾಪನ ಮತ್ತು ಮಾನ್ಯತಾ ಸಂಸ್ಥೆಯೊಂದಿಗೆ ಕೆಲಸ ಮಾಡುತ್ತಾರೆ. ಇದಕ್ಕೂ ಮುನ್ನ ಅವರು ಹಿರಿಯ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಯರ್ ಸೆಕೆಂಡರಿ ವರ್ಗಗಳ ವಿದ್ಯಾರ್ಥಿಗಳಿಗೆ ಸಮಾಜ ವಿಜ್ಞಾನವನ್ನು ಬೋಧಿಸಿದ್ದಾರೆ. ಅವರನ್ನು ಈ ಮಿಂಚಂಚೆ ಮೂಲಕ ಸಂಪರ್ಕಿಸಬಹುದು:
ronita.sharma@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ನಾಗಮಣಿ ಎಸ್.ಎನ್.**

# ನಾಟಕದ ಮೂಲಕ ಪ್ರಜಾಪ್ರಭುತ್ವದ ಅನ್ವೇಷಣೆ

ಸನ್ಯುಕ್ತಾ ಸಹಾ ಮತ್ತು ದೇವಿಕಾ ಬೇಡಿ

ಮೊಘಲರ ದೊರೆ ಅಕ್ಬರ್‌ಗೆ ತನ್ನನ್ನು ಬಿಟ್ಟರೆ ಬೇರೆ ಯಾರೂ ತನಗೆ ಸಮಾನರು ಇಲ್ಲ ಎನ್ನುವ ಭಾವನೆ ತಲೆಯಲ್ಲಿ ತುಂಬಿಕೊಂಡಿತ್ತು. ಈ ಜಗತ್ತಿನಲ್ಲಿರುವ ಎಲ್ಲವೂ–ಹುಲ್ಲಿನ ಎಸಳು, ಪರ್ವತ, ಇಟ್ಟಿಗೆ, ನಗರ ಸೇರಿದಂತೆ ಎಲ್ಲವೂ ತನ್ನದು ಎಂದುಕೊಳ್ಳಲಾರಂಭಿಸಿದ! ಒಂದು ದಿನ ಸಂಜೆ ಅರಮನೆ ಅಂಗಳದಲ್ಲಿ ವಾಯುವಿಹಾರ ಮಾಡುತ್ತಿದ್ದಾಗ, ದಾರಿಗೆ ಅಡ್ಡಲಾಗಿ ಮಲಗಿದ್ದ ದೊಡ್ಡವಸ್ತುವೊಂದನ್ನು ಎಡವಿ ಬೀಳುವುದರಲ್ಲಿದ್ದ. ನೋಡಿದರೆ, ಆತನೊಬ್ಬ ವೃದ್ಧ ಸಾಧು. ಸಿಟ್ಟಿಗೆದ್ದ ರಾಜ, ಆತನನ್ನು ಒದ್ದು ಹೊರಹಾಕಲು ಪ್ರಯತ್ನಿಸಿದ. ಆದರೆ, ಸಾಧು ಕೆರಳಲಿಲ್ಲ. ಇದರಿಂದ ರಾಜನ ಸಿಟ್ಟು ಇನ್ನಷ್ಟು ಹೆಚ್ಚಾಯಿತು ಆ ವೃದ್ಧ ಸಾಧು ಜಗತ್ತಿನ ಬಗ್ಗೆ ರಾಜನಿಗೆ ಹೀಗೆ ಹೇಳಿದ, 'ಈ ಜಗತ್ತಿನಲ್ಲಿ ಅಸಂಖ್ಯಾತ ಜನರು ಇದ್ದು, ಮಹಾರಾಜ ಸೇರಿದಂತೆ ಯಾರೂ ಮುಂದಿನ ಜನ್ಮಕ್ಕೆ ಏನನ್ನೂ ತೆಗೆದುಕೊಂಡು ಹೋಗುವುದಿಲ್ಲ. ಎಲ್ಲರೂ ಈ ಜಗತ್ತಿಗೆ ಪ್ರಯಾಣಿಕರಂತೆ ಬರುತ್ತಾರೆ ಹಾಗು ತೆರಳುತ್ತಾರೆ'. ಸಾವಧಾನವಾಗಿ ಆಲೋಚಿಸಿದ ಬಳಿಕ, ಅಕ್ಬರನಿಗೆ ಸಾಧುವಿನ ಮಾತುಗಳಲ್ಲಿ ಬೆಳಕು ಕಾಣಲಾರಂಭಿಸಿತು. ಆ ಸಾಧು ಮಾರುವೇಶವನ್ನು ತೆಗೆದ. ಆತ ಬೇರೆ ಯಾರೂ ಅಲ್ಲ, ಅಕ್ಬರನ ಪ್ರೀತಿಪಾತ್ರ ವಿದೂಷಕ–ಬೀರಬಲ್‌ನಾಗಿದ್ದ!. ಅಕ್ಬರ ಪೆಚ್ಚಾದ.

ರಂಗಭೂಮಿಯ ನಟ ಸಫ್ದರ್ ಹಶ್ಮಿ ಈ ಕತೆಯನ್ನು ಮಕ್ಕಳ ಕವಿತೆ 'ದುನಿಯಾ ಸಬ್‌ಕಿ'ಯಾಗಿ ಪರಿವರ್ತಿಸಿದ್ದು, ಸಫ್ದರ್ ಹಶ್ಮಿ ಸ್ಮಾರಕ ಟ್ರಸ್ಟ್ (ಸಹ್‌ಮತ್) ಪ್ರಕಟಿಸಿದ ಇದೇ ಹೆಸರಿನ ಕವನ ಸಂಕಲನದಲ್ಲಿ ಸೇರಿದೆ. ಈ ಸಂಕಲನವು ಆಗಾರ್ಝ್ ಥಿಯೇಟರ್ ಟ್ರಸ್ಟ್‌ನ ಬುನಾದಿ ಹಾಗು ಮಾರ್ಗದರ್ಶಿಯಾಗಿದೆ. ಇದು ನಾಟಕವನ್ನು ಒಂದು ಪ್ರದರ್ಶನ ಪ್ರಕ್ರಿಯೆಯಾಗಿ ಮಕ್ಕಳಿಗೆ ಮತ್ತು ಹದಿವಯಸ್ಸಿನವರಿಗೆ ಬಳಸುತ್ತದೆ. ಪೌರತ್ವ ಎನ್ನುವುದು ಒಂದು ಪ್ರಶ್ನಿಸುವ ಪ್ರಕ್ರಿಯೆಯಾಗಿದೆ, ರಂಗದಿಂದಾಚೆಗೂ ಅದೇನಾಗಿರಬೇಕೆಂದು ಶೋಧಿಸುವುದಾಗಿದೆ.

**ದುನಿಯಾ ಸಬ್‌ಕಿ ಏಕೆ?**

ವ್ಯಕ್ತಿಯೊಬ್ಬರು ಯಾವುದೇ ವಿಭಾಗೀಕರಣಕ್ಕೆ ಒಳಗೊಂಡಿರಲಿ, ದೇಶವೊಂದರ ನಿವಾಸಿಯಾಗಿರುವವರು ಹಾಗೂ ಅದು ಕೊಡಮಾಡುವ ಹಕ್ಕು ಮತ್ತು ಸವಲತ್ತುಗಳನ್ನು ಅನುಭವಿಸುತ್ತಿರು–ವವರು ಆ ದೇಶದ ಪೌರರಾಗಿರುತ್ತಾರೆ. ಎಲ್ಲಾ ಪೌರರಿಗೂ ರಾಜ್ಯವು ನ್ಯಾಯ, ಸ್ವಾತಂತ್ರ್ಯ, ಸಮಾನತೆ ಹಾಗು ಭ್ರಾತೃತ್ವದ ಮೌಲ್ಯಗಳನ್ನು ಎತ್ತಿ ಹಿಡಿಯುವಂತೆ ಮಾಡುವ ಕ್ರಿಯಾಶೀಲ ಜವಾಬ್ದಾರಿ ಹೊಂದಿರುತ್ತದೆ. ವೈವಿಧ್ಯಮಯ ಅಸ್ಮಿತೆ, ದೃಷ್ಟಿಕೋನ ಹಾಗು ಆಸಕ್ತಿಗಳನ್ನು ಹೊಂದಿರುವ ಸಮಾಜದಲ್ಲಿ ಸಂವಾದದಿಂದ ಮಾತ್ರ ಸಕಾರಾತ್ಮಕ ಕ್ರಿಯೆ ಸಾಧ್ಯವಿದೆ. ಸಂವಾದವು ಪರಿಣಾಮಕಾರಿ ಆಗಬೇಕಾದರೆ, ವ್ಯಕ್ತಿಗಳ ಮತ್ತು ಸಮುದಾಯದ ಕಲ್ಪನೆ, ಕುತೂಹಲ ಹಾಗು ತಾರ್ಕಿಕ ಚಿಂತನೆಯನ್ನು ಪೋಷಿಸುವ ಅವಕಾಶವಿರಬೇಕು. ರಂಗಭಾಷೆಯ ಮೂಲಕ ಅಂಥ ಅವಕಾಶಗಳನ್ನು ಸೃಷ್ಟಿಸುವುದು ಆಗಾರ್ಝ್‌ನ ಉದ್ದೇಶ.

ದುನಿಯಾ ಸಬ್‌ಕಿ 2010ರಲ್ಲಿ ನಾವು ಸೃಷ್ಟಿಸಿದ ಮೊದಲ ನಾಟಕ. ಆಗಿನ್ನೂ ಆಗಾರ್ಝ್ ಒಂದು ಪ್ರತ್ಯೇಕ ಅಸ್ತಿತ್ವವನ್ನು ಹೊಂದಿರಲಿಲ್ಲ. ಈ ನಾಟಕವನ್ನು ರಂಗಶಿಕ್ಷಣದ ಭಾಗವಾಗಿ ಪ್ರದರ್ಶಿಸತೊಡಗಿದ ನಂತರ ನಟರ ಕತೆಗಳು ಬದಲಾಗುತ್ತಲೇ ಇದ್ದುದರಿಂದ ಪ್ರತಿಯೊಂದು ಬಾರಿಯೂ ನಾಟಕ ಹೊಸತನದಿಂದ ಕೂಡಿರುತ್ತಿತ್ತು. ಪ್ರತಿಬಾರಿಯೂ ನಟರು ಆ ಕ್ಷಣದಲ್ಲಿ ಅವರ ಬದುಕಿಗೆ ಪ್ರಸ್ತುತವಾದ, ವೈಯಕ್ತಿಕ ಕಥನಗಳನ್ನು ತರುತ್ತಿದ್ದರು. ಆನಂತರ ನಾಟಕಗಳು ವ್ಯಕ್ತಿಗಳ ಧ್ವನಿಗಳನ್ನು ಅರ್ಥ ಮಾಡಿಕೊಳ್ಳುವ ಹಾಗು ಇತರರೊಂದಿಗೆ ಹಂಚಿಕೊಳ್ಳುವ ಮಾರ್ಗವಾಗಿ ಬದಲಾದವು. ಈ ರೀತಿಯ ಕ್ರಿಯಾಶೀಲತೆಯು ಸಕ್ರಿಯ ಪೌರರಾಗುವತ್ತ ಸಂವಾದ ಆರಂಭಿಸುವ ಧೈರ್ಯದ ನಡೆಯಾಗಿದೆ. ಕಳೆದ ಕೆಲವು ವರ್ಷಗಳಲ್ಲಿ, ಈ ನಾಟಕವನ್ನು ಹಲವು ಯುವಜನರೊಂದಿಗೆ ಸೇರಿ ವಿಭಿನ್ನ ಸಂದರ್ಭಗಳನ್ನು ಮರುಸೃಷ್ಟಿಸಿದ್ದೇವೆ. ಇಂಥ ಏಳರಿಂದ ಹತ್ತು ದಿನ ನಡೆಯುವ ಕಾರ್ಯಾಗಾರಗಳಲ್ಲಿ ದುನಿಯಾ ಸಬ್‌ಕಿಯ ಹಲವು ಹೊಸ ಪ್ರಯೋಗಗಳು ಹೊರಹೊಮ್ಮಿವೆ ಹಾಗು ಬೇರೆಬೇರೆ ಮಕ್ಕಳ ಪ್ರತ್ಯೇಕ ಕಥೆಗಳಿಗೆ ಅಭಿವ್ಯಕ್ತಿ ಸಿಕ್ಕಿದೆ.

ಈ ಲೇಖನದಲ್ಲಿ ನಾವು ನಮ್ಮ ಎರಡು ಅನುಭವಗಳನ್ನು ಹಂಚಿಕೊಳ್ಳುತ್ತೇವೆ: ಮೊದಲನದು ಶ್ರೀನಗರದ ದಿಲ್ಲಿ ಪಬ್ಲಿಕ್ ಶಾಲೆಯ 7–9ನೇ ತರಗತಿಯ 40 ವಿದ್ಯಾರ್ಥಿಗಳ ಜೊತೆಗಿನ ಕಾರ್ಯಾಗಾರ (2017) ಹಾಗೂ ಮತ್ತೊಂದು ಶೇಖ್ ಸರಾಯ್/ಚಿರ್ಕಿ ಗ್ರಾಮ (ವಲಸೆ ಬಂದವರು ಹೆಚ್ಚು ಸಂಖ್ಯೆಯಲ್ಲಿರುವ, ಜನದಟ್ಟಣೆಯ ನಗರ ಪ್ರದೇಶ)ದ ಸಮುದಾಯ ಗ್ರಂಥಾಲಯ ಯೋಜನೆಯ 9–12 ವರ್ಷ ವಯಸ್ಸಿನ 18 ಮಕ್ಕಳ ಜತೆಗಿನ ಅನುಭವ (2018).

**ಉಪಕ್ರಮದ ಆರಂಭ:**

ಶ್ರೀನಗರದ ಗುಂಪು ತಮ್ಮ ಶಾಲೆಯಲ್ಲಿ ಕಲೆಗೆ ಹೆಚ್ಚು ಪ್ರಾಧಾನ್ಯ ನೀಡಿತ್ತು. ಇಲ್ಲಿ ನಾವು ಪರಸ್ಪರ ಹೆಸರು ತಿಳಿದುಕೊಳ್ಳುವ ಮೊದಲೇ ಒಟ್ಟಿಗೆ ಆಟ ಆಡುವ ಮೂಲಕ ಕಾರ್ಯಕ್ರಮವನ್ನು ಆರಂಭಿಸಿದೆವು. ಇದರಿಂದ ನಾವೆಲ್ಲರೂ ಒಬ್ಬರು ಇನ್ನೊಬ್ಬರ ಜೊತೆ ಬೆರೆಯಲು ಇರಬಹುದಾದ ಹಿಂಜರಿಕೆಗಳನ್ನು ತೊರೆದೆವು ಮತ್ತು ಆಟವು ಹಂಚಿಕೊಳ್ಳುವ ಸಾಧ್ಯತೆಗಳಿಗೆ ದಾರಿ ಮಾಡಿಕೊಟ್ಟಿತು. ಇನ್ನೊಂದೆಡೆ, ಶೇಖ್ ಸರಾಯಿನ ಸಮುದಾಯ ಗ್ರಂಥಾಲಯದ ಸದಸ್ಯರು ಮೂಲಭೂತ ಕಲಾ ಸೌಲಭ್ಯಗಳಿರುವ ಶೈಕ್ಷಣಿಕ ಸಂಸ್ಥೆಗಳ ಜೊತೆಗೆ ಕೆಲಸ ಮಾಡುತ್ತಿದ್ದರು. ಕಿರಿದಾದ ತಳಮಹಡಿಯನ್ನು ಎಲ್ಲರೂ ಸೇರಿ ಸ್ವಚ್ಛಗೊಳಿಸಿ, ಎಲ್ಲ ಕ್ರೀಡಾ ಚಟುವಟಿಕೆಗಳಿಗೆ ಬಳಸಲಾಯಿತು. ಇದು ಆನಂತರ ಆರಂಭಿಸಿದ ಕಾರ್ಯಾಗಾರದ ವಿಷಯ ಮಾಲೀಕತ್ವದ ಭಾವನೆಯನ್ನು ಎಲ್ಲರಲ್ಲೂ ಮೂಡಿಸಿತು.

ಒಂದು ಗುಂಪಾಗಿ ಬಿಂಬಿಸಿಕೊಳ್ಳಲು ಪ್ರತಿ ಸಭೆಯನ್ನೂ ವೃತ್ತಾಕಾರವಾಗಿ ಕುಳಿತುಕೊಳ್ಳುವ ಮೂಲಕ ಆರಂಭಿಸುತ್ತಿದ್ದೆವು; ಇದು ಒಂದು ಕ್ರಮವಾಗಿ ಗುಂಪನ್ನು ಒಟ್ಟುಗೂಡಿಸುವ ದಾರಿಯೊಂದನ್ನು ಸೃಷ್ಟಿಸಿತು. ವೃತ್ತಕಾರದಲ್ಲಿ ಪ್ರತಿಯೊಬ್ಬರೂ ಮತ್ತೊಬ್ಬರನ್ನು ನೋಡಬಹುದು ಹಾಗು ತಾವು ಕೂಡ ಕಾಣಿಸಿಕೊಳ್ಳುವುದರಿಂದ, ಅದು ಎಲ್ಲರ ಉಪಸ್ಥಿತಿಯಿರುವ ಸಂಗ್ರಾಹಕದಂತೆ ಆಗುತ್ತದೆ. ವೃತ್ತವು ಪರಸ್ಪರ ಸಂಬಂಧವಿರುವ ರಚನೆಯ ಪ್ರತಿಫಲನವಾಗುತ್ತದೆ. ವೃತ್ತದಲ್ಲಿ ಯಾರೊಬ್ಬರೂ ಮುಂದೆ, ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಇರುವುದಿಲ್ಲ ಮತ್ತು ಎಲ್ಲರ ಸಮ್ಮತಿಯು ಅದಕ್ಕೊಂದು ರೂಪ ಕೊಡುತ್ತದೆ.

ಸಹ–ಮಾಲಿಕತ್ವದ ಈ ಭಾವನೆಯು ಹದಿವಯಸ್ಸಿನಿಂದಲೂ ಇಂಥ ಸಭೆಗಳನ್ನು ನಡೆಸಿಕೊಡುತ್ತಿದ್ದ ಆಗಾರ್ಖ್‌ನ ರೆಪರ್ಟರಿಯ ಸದಸ್ಯರಿಂದ ಮರುಸ್ಥಿರೀಕರಿಸಲ್ಪಟ್ಟಿತು. ಮಕ್ಕಳು / ಹದಿವಯಸ್ಸಿ–ನವರು ತಮ್ಮದೇ ವಯಸ್ಸಿನವರೊಂದಿಗೆ ಪ್ರಕ್ರಿಯೆಯೊಂದನ್ನು ನಡೆಸುವಾಗ, ಇದು ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಅಭಿಪ್ರಾಯಗಳನ್ನು ಬದಲಾಯಿಸುತ್ತದೆ. ಈ ಪ್ರಕ್ರಿಯೆಯಲ್ಲಿ ತಪ್ಪುಗಳನ್ನು ಮಾಡುತ್ತಲೇ, ಆಲೋಚನೆಗಳನ್ನು ಸಂತೋಷದಿಂದ ಒಪ್ಪಿಕೊಳ್ಳುವ ಹಾಗು ಅವುಗಳನ್ನು ರೂಪುಗೊಳಿಸುವ ಸಾಧ್ಯತೆಗಳು ಅಧಿಕಗೊಳ್ಳುತ್ತವೆ. ಆ ಮೂಲಕ ಒಂದು ಸಾಮಾನ್ಯ ವೇದಿಕೆಯೊಂದು ಹೊರಹೊಮ್ಮುತ್ತದೆ. ಕಾರ್ಯಕ್ರಮದ ಗುಣಮಟ್ಟ ಹಾಗು ಆ ಮೂಲಕ ಕಂಡುಕೊಂಡ ಕತೆಗಳು ಕೂಡ ಬದಲಾಗುತ್ತವೆ.

**ಪರಿಶೋಧನೆಗೆ ಉತ್ತೇಜನ:**

ನಾಟಕವು ಒಂದು ಪ್ರಕ್ರಿಯೆಯಾಗಿ ಸೃಷ್ಟಿಯೊಂದರ ಕಡೆಗೆ ಸಾಗಲು, ಹಲವು ಉತ್ತೇಜಕಗಳನ್ನು ಬಳಸಿಕೊಳ್ಳುತ್ತದೆ. ಶ್ರೀನಗರ ಹಾಗು ಶೇಖ್ ಸರಾಯಿ ಎರಡರಲ್ಲೂ ನಾವು ಸೃಜನಶೀಲ ಪ್ರಕ್ರಿಯೆ–ಯೊಂದಿಗೆ ಸಂಧಾನ ನಡೆಸಲು ಪ್ರಶ್ನೆಗಳು ಮತ್ತು ಪಠ್ಯವನ್ನು ಬಳಸಿಕೊಂಡೆವು. ಈ ಎರಡೂ ಇತರರ ಅನುಭವಗಳೊಂದಿಗೆ ನಮ್ಮ ಅನುಭವಗಳನ್ನು ಸಂಪರ್ಕಿಸಿಕೊಳ್ಳಲು ನಿರ್ದೇಶಿತ ಪ್ರತಿಫಲನದ ಚೌಕಟ್ಟನ್ನು ಸೃಷ್ಟಿಸಬಲ್ಲವು. ಇದು ಪರಿಸರವನ್ನು ಅರ್ಥ ಮಾಡಿಕೊಳ್ಳುವ ಕಡೆಗೆ ಕುತೂಹಲ/ವಿಚಾರಣೆಗೆ ಅನುವು ಮಾಡಿಕೊಡಲಿದೆ ಹಾಗು ಸಾಧ್ಯತೆಗಳನ್ನು ಮೀರಿದ ಕಲ್ಪನೆಗಳಿಗೆ ಅವಕಾಶ ನೀಡಲಿದೆ. ಈ ವಿಚಾರಣೆಯು ಇಂದ್ರಿಯಾತ್ಮಕ ಅನುಭವವನ್ನು ಸೃಷ್ಟಿಸುತ್ತದೆ.

ಇದೇನು ಎಂಬುದಕ್ಕೆ ಪ್ರತಿಕ್ರಿಯಿಸಲು ಪ್ರಸ್ತುತ ವಾಸ್ತವವೇನು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವಿದೆ ಮತ್ತು ಅದು ವ್ಯಕ್ತಿಗಳು–ಸಮುದಾಯದ ಪ್ರತಿನಿತ್ಯದ ಬದುಕಿನ ಮೇಲೆ ಏನು ಪರಿಣಾಮ ಬೀರುತ್ತದೆ ಎನ್ನುವುದನ್ನು ಪ್ರಶ್ನಿಸಬೇಕಾಗುತ್ತದೆ. ಅರ್ಥ ಮಾಡಿಕೊಳ್ಳುವಿಕೆ ಮತ್ತು ಪ್ರಶ್ನಿಸುವಿಕೆಗಳು ಒಂದು ಇನ್ನೊಂದನ್ನು ಸಮಗ್ರಗೊಳಿಸಲು ಅಗತ್ಯವಿರುವಂಥವು. ಮುಕ್ತ ಪ್ರಶ್ನೆಗಳು ಪಾಲ್ಗೊಳ್ಳುವಿಕೆಯನ್ನು ಉತ್ತೇಜಿಸುತ್ತವೆ. ಏಕೆಂದರೆ, ಅವು ವೈವಿಧ್ಯಮಯ ದೃಷ್ಟಿಕೋನ ಹಾಗು ವೈಯಕ್ತಿಕ ಅನುಭವಗಳಿಗೆ ಅವಕಾಶವನ್ನು ಕಲ್ಪಿಸುತ್ತವೆ. ನಿಷ್ಕ್ರಿಯ ಗ್ರಹಿಕೆಗಿಂತ ಸಕ್ರಿಯ ಪಾಲ್ಗೊಳ್ಳುವಿಕೆಯು ಪ್ರಜಾಸತ್ತಾತ್ಮಕ ಸಂಪ್ರದಾಯಗಳಿಗೆ ಬುನಾದಿ ಹಾಕುತ್ತದೆ. ಹಾಗೆಯೇ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಮಕ್ಕಳ ಪಾತ್ರಗಳು ಭಿನ್ನವಾಗೇನಿರುವುದಿಲ್ಲ. ಅವರ ಪ್ರಶ್ನೆಗಳು, ಧ್ವನಿಗಳು ಹಾಗೂ ಕತೆಗಳು ಕೇಳಲ್ಪಡದಿರುವುದೇ ಹೆಚ್ಚು ಹಾಗೂ ಇದರಿಂದ ಅವರ ದೃಷ್ಟಿಕೋನಗಳು ನಿರಾಕರಿಸಲ್ಪಡುತ್ತವೆ. ವಯಸ್ಕರ ಜಗತ್ತು ಅವರ ಅನುಭವಗಳ ಆಳವನ್ನು ಗೌರವಿಸುವುದಿಲ್ಲ. ಇಂಥ ಕತೆಗಳ ಪ್ರದರ್ಶನದಿಂದ ಅವರ ಧ್ವನಿಗಳು ವೈವಿಧ್ಯಮಯ ಪ್ರೇಕ್ಷಕರಿಗೆ ತಲುಪುತ್ತವೆ.

ಕತೆಗಳನ್ನು ಅನಾವರಣಗೊಳಿಸುವ ಪ್ರಕ್ರಿಯೆಯು ನಮಗೆ ಪ್ರಶ್ನೆಗಳನ್ನು ರೂಪಿಸುವ ಕ್ರಿಯೆಯ ಮೂಲಕ ಆಗಲಿದೆ. ಈ ಪ್ರಶ್ನೆಗಳು ನಮ್ಮದೇ ಕತೆಯೊಳಗೆ ನಮಗೆ ದಾರಿ ಮಾಡಿಕೊಡುತ್ತವೆ ಹಾಗು ಇನ್ನಿತರರ ಕತೆಗಳ ಜೊತೆಗೆ ಮಾರ್ದನಿ, ಸಾಮ್ಯತೆ, ವ್ಯತ್ಯಾಸಗಳು ಹಾಗು ಅಸಮ್ಮತಿಗಳ ಮೂಲಕ ಸಂಪರ್ಕ ಕಲ್ಪಿಸಲಿವೆ.

ಇಲ್ಲಿ ಆಯ್ಕೆ ಮಾಡಿಕೊಂಡ ಪಠ್ಯ 'ದುನಿಯಾ ಸಬ್‌ಕಿ', ಒಂದು ಸುಸಂಬದ್ಧ ಪ್ರಶ್ನೆಯೊಂದನ್ನು ಎತ್ತುತ್ತದೆ – ಈ ಜಗತ್ತು ಎಲ್ಲರಿಗೂ ಸೇರಿದೆಯೇ? ಪ್ರತಿಯೊಂದು ಮಗುವಿನ ಉತ್ತರ ಇನ್ನಷ್ಟು ಪ್ರಶ್ನೆಗಳ ಸರಪಳಿಗೆ ದಾರಿ ಮಾಡಿ ಕೊಡುತ್ತದೆ – 'ಎಲ್ಲರಿಗೂ ಸೇರುತ್ತದೆ/ ಸೇರುವುದಿಲ್ಲ ಎಂದು ನೀವು ಏಕೆ ಹೇಳುತ್ತೀರಿ? ನಿಮಗೆ ಯಾವಾಗಲಾದರೂ ಹೀಗೆ ಭಾವಿಸುವಂಥ ಅನುಭವ ಆಗಿದೆಯಾ?'

ಪದ್ಯವು ಉತ್ತೇಜಕವಾಗಿ ಪರಿಣಮಿಸಲಿದೆ, ವೈಯಕ್ತಿಕ ಕತೆಗಳು ಹೊಮ್ಮಲು ಅವಕಾಶವೊಂದನ್ನು ಸೃಷ್ಟಿಸಲಿದೆ. ಮಕ್ಕಳ ಅನುಭವಗಳು ವೈವಿಧ್ಯಮಯವಾಗಿರಲಿದ್ದು ಮತ್ತು ಅದರ ಮುಖ್ಯ ಪ್ರಶ್ನೆಗಳಿಂದ ಪಠ್ಯವು ಪ್ರತಿಯೊಬ್ಬರ ವಿಚಾರಣೆಗೆ ಸಾಧ್ಯತೆಗಳನ್ನು ತೆರೆಯಲಿದೆ. ಈ ಕತೆಗಳನ್ನು ಹಂಚಿಕೊಂಡಾಗ ಒಂದೇ ಬಗೆಯ ಪ್ರಶ್ನೆಗಳಿಂದ ಅದು ಸಾಮುದಾಯಿಕ ಪ್ರಜ್ಞೆಯೊಂದನ್ನು ಸೃಷ್ಟಿಸುತ್ತದೆ. ಈ ಸಾಮುದಾಯಿಕ ಪ್ರಜ್ಞೆಯೇಕೆ ಹೊಮ್ಮುತ್ತದೆ? ತದ್ವಿರುದ್ಧವಾಗಿ, ನಾವು ಈ ಜಗತ್ತಿಗೆ ಸೇರಿದವರಲ್ಲ ಎಂಬ ಭಾವನೆಯನ್ನು ಮೂಡಿಸುವ ಅನುಭವಗಳ ಸಾಮಾನ್ಯತೆಯನ್ನು ಸೃಷ್ಟಿಸಿದ ಬೃಹತ್ ವ್ಯವಸ್ಥೆ ಯಾವುದು?

ಈ ಕವನವು 'ಈ ಜಗತ್ತು ಎಲ್ಲರಿಗೂ ಸೇರಿದೆ ಇಲ್ಲವೇ ಯಾರಿಗೂ ಸೇರಿಲ್ಲ' ಎನ್ನುವ ಹೇಳಿಕೆಯ ಮೇಲೆ ನಿಂತಿದೆ. ಇದು ಎಲ್ಲರ ಹಕ್ಕನ್ನು ಪ್ರತಿಪಾದಿಸುವ ಪ್ರಯತ್ನ ಅಥವಾ ಇದು ಪ್ರಜಾಸತ್ತಾತ್ಮಕ ಪ್ರಕ್ರಿಯೆ ಅಲ್ಲವೇ ಅಲ್ಲ.

**ಸಾಮುದಾಯಿಕ ಅವಕಾಶ ಮತ್ತು ಧ್ವನಿ:**

ಸಮುದಾಯದ ಎಲ್ಲ ಸದಸ್ಯರು ಸಹಬಾಳ್ವೆಯ ಮಾರ್ಗಗಳ ಮೂಲಾಂಶಗಳ ಬದಲಾವಣೆ, ನಿರಾಕರಣೆ ಹಾಗು ಸೃಷ್ಟಿಯಲ್ಲಿ ತಮ್ಮ ಧ್ವನಿಯನ್ನು ಸೇರಿಸಿದಾಗ ಮಾತ್ರ ಸಾಮುದಾಯಿಕ ಚೌಕಟ್ಟು ಅಸ್ತಿತ್ವದಲ್ಲಿ ಇರುತ್ತದೆ. ವ್ಯವಸ್ಥೆಯೊಂದರಲ್ಲಿ ಒಂದು ಗುಂಪಿನ ಧ್ವನಿ ಹಾಗು ಅಭಿವ್ಯಕ್ತಿಗಳು ಉಳಿದವರನ್ನು ಹತ್ತಿಕ್ಕಿದರೆ, ಅಂಥ ವ್ಯವಸ್ಥೆಯು ಸಮುದಾಯದ ಅಭಿಪ್ರಾಯದಿಂದ ದೂರ ಸರಿಯುತ್ತದೆ. ಪ್ರಜಾಸತ್ತಾತ್ಮಕ ಆದರ್ಶಗಳು ಒಂದು ಕೊನೆಯಲ್ಲ: ಬದಲಾಗಿ, ರಾಜ್ಯ ಮತ್ತು ಅದರ ನಾಗರಿಕರ ನಡುವಿನ ಎಳೆಯುವ ತಳ್ಳುವ ನಿರಂತರ ಪ್ರಯಾಣ. ಈ ಎಳೆಯುವ–ತಳ್ಳುವ ವ್ಯವಸ್ಥಿತ ವಿಷಯಗಳು ಮತ್ತು ಸಮಷ್ಟಿಯು ಪ್ರತಿಯೊಬ್ಬ ವ್ಯಕ್ತಿಯೊಳಗಿನ ಶೋಧನೆಯಿಂದ ಬರುವಂಥವು. ಈ ಶೋಧನೆಯು ಪ್ರಸ್ತುತ ವಾಸ್ತವದ ಪರೀಕ್ಷೆ, ಭವಿಷ್ಯದ ಸಾಧ್ಯತೆಗಳ ಊಹೆ ಹಾಗು ಈ ಭವಿಷ್ಯದೆಡೆಗಿನ ಪ್ರಯಾಣವಾಗಿದೆ. ಇಂಥ ಹಲವು ಸಾಧ್ಯತೆಗಳ ಅಭಿವ್ಯಕ್ತಿಯು ಸಂವಾದ, ಸಾಮಾನ್ಯ ಅಂಶಗಳನ್ನು ಕಂಡು–ಕೊಳ್ಳುವ, ಧ್ವನಿಯೆತ್ತುವಿಕೆ ಹಾಗು ಸಂಘರ್ಷಗಳ ಮೂಲಕ ಕಾರ್ಯನಿರ್ವಹಿಸಲು ದಾರಿ ಮಾಡಿಕೊಡುತ್ತದೆ. ಇದು ಕೂಡ ಪ್ರಜಾಸತ್ತಾತ್ಮಕ ರಾಷ್ಟ್ರ ನಿರ್ಮಾಣದ ಪ್ರಕ್ರಿಯೆಗಳಲ್ಲಿ ಒಂದು.

ನಾಟಕವನ್ನು ಆಧರಿಸಿದ ವಿಧಾನಗಳು ಗಡಿಗಳನ್ನು ಮುಂದೆ ತಳ್ಳುವ ಪ್ರಚೋದನೆಯನ್ನು ಆಧರಿಸಿರುತ್ತವೆ. ಕಾರ್ಯಾಗಾರದಲ್ಲಿ ತೀರ ಸಾಮಾನ್ಯ ಹಾಗು ದಿನನಿತ್ಯದ ಘಟನೆಗಳ ಮರುಸೃಷ್ಟಿ ಕೂಡ ಹೊಸತನವನ್ನು ಒಳಗೊಂಡಿರುತ್ತದೆ. ಕಲ್ಪಿತ ಕನ್ನಡಿ ಮುಂದೆ ಹಲ್ಲುಜ್ಜುವುದು, ಕೈಯಲ್ಲಿ ಬ್ರಷ್‌ಅನ್ನು ಕಲ್ಪಿಸಿಕೊಳ್ಳುವುದು, ನಲ್ಲಿಯಲ್ಲಿ ಸುರಿಯುವ ನೀರನ್ನು ಊಹಿಸಿಕೊಳ್ಳುವುದು–ಇವೆಲ್ಲವೂ ಸಾಮುದಾಯಿಕ ಎಡೆಯಲ್ಲಿ ಅಸ್ತಿತ್ವದಲ್ಲಿ ಇರುವಂಥವುಗಳಲ್ಲ. ಈ ವಿಧಾನದ ಶಬ್ದಸಂಪತ್ತು ತನ್ನೊಳಗೆ ಸವಾಲನ್ನು ಒಳಗೊಂಡಿದೆ. ಸವಾಲು ವೈಯಕ್ತಿಕ ವಿಸ್ತರಣೆಯಲ್ಲಿ ಮಾತ್ರ ಇರುವಂಥದ್ದಲ್ಲ; ಬದಲಾಗಿ, ಅದನ್ನು ಸಾಮೂಹಿಕವಾಗಿ ಮಾಡಬೇಕೆಂಬ ಆಶಯದಲ್ಲಿದೆ. ಸವಾಲನ್ನು ಹಿಗ್ಗಿಸುವುದು ಗುಂಪಿಗೆ ಮಾತ್ರವಲ್ಲ, ಸುಗಮಕಾರರಿಗೂ ಅದು ಸವಾಲು. ಅವರು ಈ ಚಾಲನಕ್ರಿಯೆಯಲ್ಲಿ ತಮ್ಮ ಸ್ಥಾನದ ಶಕ್ತಿಯನ್ನು ಗುರುತಿಸಿಕೊಳ್ಳಬೇಕು ಮತ್ತು ಗುಂಪಿನಲ್ಲಿರುವವರು ವೈಯಕ್ತಿಕವಾಗಿ ಹಾಗು ಸಾಮೂಹಿಕವಾಗಿ ಏಳಿಗೆ ಹೊಂದಲು ಸ್ಥಳಾವಕಾಶವನ್ನು ಸೃಷ್ಟಿಸಬೇಕಾಗುತ್ತದೆ. ಸುಗಮಕಾರರು ಕೇಳದ ಧ್ವನಿಗಳನ್ನು ಕೇಳಿಸುವಂತೆ ಅಭಿವ್ಯಕ್ತಿಸಲು ಮುಂದೆ ತಳ್ಳುವ ಪಾತ್ರ ವಹಿಸಬೇಕು. ಈ ಪುನರ್ಬಲವು ಅಧಿಕಾರಸ್ಥರು ಎಲ್ಲರ ಧ್ವನಿಯೂ ಕೇಳಲ್ಪಡುವ ಸಾಮುದಾಯಿಕ ಅಭಿವೃದ್ಧಿಗೆ ಅವಕಾಶಗಳನ್ನು ಸೃಷ್ಟಿಸುವ ನಿರೀಕ್ಷೆಯ ಸಾಧ್ಯತೆಯನ್ನು ಇನ್ನಷ್ಟು ತೆರೆಯುತ್ತದೆ. ಆದ್ದರಿಂದ, ಪಠ್ಯದಲ್ಲಿರುವ ಅಕ್ಬರನ ಧ್ವನಿಯು ಸುಗಮಕಾರರಿಗೆ ಒಂದು ಸೂಚನೆ (ಹಿದಾಯತ್) ಆಗಲಿದೆ.

**ರಂಗಸ್ಥಳದ ಮೇಲೆ ಹಾಗು ಅದರಾಚೆಗೆ:**

ಅಕ್ಬರ್ ಮತ್ತು ಬೀರಬಲ್ ನಡುವಿನ ಸಂವಾದವು ಹಲವು ವ್ಯಕ್ತಿಗಳು, ಗುಂಪುಗಳು ಹಾಗು ಸಮುದಾಯಗಳ ನಡುವಿನ ಮತ್ತು ಎರಡು ವಿಭಿನ್ನ ಭೌಗೋಳಿಕ ಪ್ರದೇಶದ ನಡುವಿನ ವಿಸ್ತೃತ ವಿನಿಮಯ ಆಗಲಿದ್ದು, ಸ್ಥಿತ್ಯಂತರದ ಹಲವು ಸಾಧ್ಯತೆಗಳನ್ನು ಸೃಷ್ಟಿಸುತ್ತದೆ. ಶ್ರೀನಗರ ಹಾಗು ಶೇಖ್ ಸರಾಯಿ ಎರಡೂ ಕಡೆ, ನಾಟಕದ ಅಂತಿಮ ಪ್ರದರ್ಶನ ದಿನದಂದು ಪಾಲ್ಗೊಂಡಿದ್ದವರ ಜೊತೆಯಲ್ಲಿ ಪೋಷಕರು ಮತ್ತು ಅವರ ಸಮವಯಸ್ಕರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿದ್ದರು. ಪ್ರೇಕ್ಷಕರು ಹಾಗು ನಟರು ಇಬ್ಬರಿಗೂ ಇದೊಂದು ಭರವಸೆಯ ಕ್ಷಣವಾಗಿತ್ತು. ಪ್ರದರ್ಶನವು ನಟರಿಗೆ ಈವರೆಗೆ ಹೇಳದೆ ಉಳಿದ ಕತೆಗಳನ್ನು ಅಭಿವ್ಯಕ್ತಿಗೊಳಿಸುವ ವಿಶ್ವಾಸದ ಜಗಿತವಾಗಿದ್ದರೆ, ತಮಗೆ ಗೊತ್ತಿದ್ದವರ ಈವರೆಗೆ, ಕೇಳದ ಕತೆಗಳಿಗೆ ಪ್ರೇಕ್ಷಕರು ಸಾಕ್ಷಿಯಾಗಿದ್ದರು. ಪ್ರೇಕ್ಷಕರು ಮತ್ತು ನಟರು, ರಂಗಸ್ಥಳದ ಮೇಲೆ ತೆರೆದುಕೊಂಡ ಕತೆಗಳ ಬಗ್ಗೆ, ಮಾತಿನಲ್ಲಿ ವ್ಯಕ್ತಪಡಿಸಲಾಗದ ವಿಶ್ವಾಸ ಹೊಂದಿದ್ದರು. ಇಬ್ಬರೂ ಮಾತಿಗೆ ನಿಲುಕದ ರೂಪಾಂತರಕ್ಕೆ, ಬದಲಾವಣೆಗೆ ಒಳಗಾದರು. ಇದು ಪ್ರಜಾಸತ್ತಾತ್ಮಕ ಸಂವಾದದ ಪ್ರಗತಿಯಾಗಿತ್ತು.

ಸಮುದಾಯ ಗ್ರಂಥಾಲಯ ಯೋಜನೆಯಲ್ಲಿ (Community Library Project)ಮೊದಲ ಬಾರಿಗೆ ತನ್ನ ಮಗಳನ್ನು ರಂಗದ ಮೇಲೆ ಕಂಡ ತಾಯಿ, ಮಗಳು ವಹಿಸಿದ್ದ ಲಿಂಗಭೇದ ವಿವರಿಸುವ ಪಾತ್ರವನ್ನು ಕಂಡು ಆತ್ಮಾವಲೋಕನ ಮಾಡಿಕೊಳ್ಳುತ್ತ ಮನೆಗೆ ತೆರಳಿದಳು. ದಿಲ್ಲಿ ಪಬ್ಲಿಕ್ ಶಾಲೆಯಲ್ಲಿ ಹೆಚ್ಚಿನ ವಿದ್ಯಾರ್ಥಿಗಳು, ಹೊರಗುಳಿಸುವ ಇನ್ನೊಂದು ರೂಪವಾದ ಹಾಗು ಅಧಿಕಾರ ಮತ್ತು ಬಲದ ಅಸಮಾನತೆಯನ್ನು ತೋರಿಸುವ ಕೀಟಲೆ ಕುರಿತ ಕತೆಗೆ ಪ್ರತಿಧ್ವನಿಸಿದರು. ಎರಡೂ ಕಾರ್ಯಾಗಾರದಲ್ಲಿ ಪಾಲ್ಗೊಂಡಿದ್ದ ಮಕ್ಕಳು ತಮ್ಮ ಕಥೆಗಳೊಡನೆ ಹಾಗು ಅವು ತಮ್ಮ ಮೇಲೆ ಯಾವ ಪ್ರಭಾವ ಬೀರಿವೆ ಎಂಬುದರ ಬಗ್ಗೆ ಆತ್ಮಾವಲೋಕನ ನಡೆಸಿದರು. ಈ ಕತೆಗಳನ್ನು ಜೊತೆಯಾಗಿ ಹೇಳುವ ಭಾಷೆ ಅವರಿಗೆ ದಕ್ಕಿತ್ತು. ಅವರು ಬದುಕುವ ಬಯಕೆಯುಳ್ಳ ವಿಭಿನ್ನ ಕತೆಗಳನ್ನು ವಿಭಿನ್ನ ವಾಸ್ತವಗಳನ್ನು ರಂಗದ ಮೇಲೆ ಅಭಿವ್ಯಕ್ತಿಸಿದ್ದರು.

**ಉಪಸಂಹಾರ**

ನಾಗರಿಕರಾಗುವಿಕೆಯ ಪ್ರಕ್ರಿಯೆಯು ಮತ ಚಲಾವಣೆಯ ಹಕ್ಕಿನಿಂದಷ್ಟೇ ಆರಂಭವಾಗುವುದಿಲ್ಲ. ಅದು ಪ್ರತಿಯೊಬ್ಬ ವ್ಯಕ್ತಿಯ ದಿನನಿತ್ಯದ ಬದುಕು ಹಾಗು ಆ ಅನುಭವಗಳೊಟ್ಟಿಗೆ ಅವರ ತೊಡಗಿಸಿಕೊಳ್ಳುವಿಕೆಯಿಂದ ಆರಂಭವಾಗುತ್ತದೆ. ವ್ಯಕ್ತಿಯೊಬ್ಬನ ಅಸ್ಮಿತೆಯ ಪ್ರಜ್ಞಾಪೂರ್ವಕ ಪರಿಶೀಲನೆ ಹಾಗು ಅವರಿಗೆ ಮಾತ್ರ ಅಂಟಿಕೊಂಡ ಕತೆಗಳು ಸಕ್ರಿಯ ನಾಗರಿಕತ್ವದ ಆರಂಭ. ಈ ಪ್ರಕ್ರಿಯೆಯನ್ನು ಆರಂಭಿಸಲು ಸಂವಾದ ಮತ್ತು ಪದಗಳು ಮಾತ್ರ ಸಾಲುವುದಿಲ್ಲ. ತಮ್ಮ ಅಸ್ಮಿತೆಯನ್ನು ಬೆಳೆಸಿಕೊಳ್ಳುತ್ತಿರುವ ಮಕ್ಕಳು, ನಾಟಕದ ಮೂಲಕ ಈಗಾಗಲೇ ಈ ಶೋಧನೆಯನ್ನು ಆರಂಭಿಸಿದ್ದಾರೆ. ಸಂಕೀರ್ಣ ವಾಸ್ತವದ ಅರ್ಥವನ್ನು ಈ ನಾಟಕಕ್ರಿಯೆಯ ಮೂಲಕ ಕಂಡುಕೊಳ್ಳುತ್ತಾರೆ. ಮಗುವಿನ ಜಗತ್ತಿನಲ್ಲಿ ಕತೆಗಳು ಚಲನಶೀಲವಾಗಿರುತ್ತವೆ ಮತ್ತು ಅವುಗಳನ್ನು ಬದಲಿಸುವ ಸಾಧ್ಯತೆಗಳು ಇರುತ್ತವೆ. ನಾಟಕವನ್ನು ಆಧರಿಸಿದ ವಿಧಾನಗಳು ಕ್ರೀಡೆ ಹಾಗು ನಿರ್ದೇಶಿತ ಶೋಧನೆಯನ್ನು ಸಾಧನವಾಗಿ ಬಳಸಿಕೊಂಡು, ಕತೆಗಳ ಮೂಲಕ ಅಗೋಚರ ಮುಖವನ್ನು ನೋಡಲು ಮಕ್ಕಳಿಗೆ ನೆರವಾಗುತ್ತವೆ. ಕತೆಗಳನ್ನು ಸೃಷ್ಟಿಸುವ ಪ್ರಕ್ರಿಯೆಯು ಅನೇಕ ದೃಷ್ಟಿಕೋನಗಳನ್ನು ಗೋಚರಕ್ಕೆ ತರುತ್ತದೆ. ರಂಗದಲ್ಲಿ ಪ್ರದರ್ಶನ ನೀಡುವಿಕೆಯು ಆಲೋಚನೆಗಳನ್ನು ಕ್ರಿಯಾಶೀಲಗೊಳಿಸುತ್ತದೆ: ಪ್ರತಿದಿನದ ಜೀವನದಲ್ಲಿ ಉದ್ದೇಶಪೂರ್ವಕ ಕ್ರಿಯೆಯ ಸಾಧ್ಯತೆಗಳನ್ನು ಊಹಿಸಿಕೊಳ್ಳಲು ಪ್ರದರ್ಶನಕಾರರಿಗೆ ನೆರವಾಗುತ್ತದೆ. ಆಶಿಸಿದ ವಾಸ್ತವವನ್ನು ರೂಪಿಸಿಕೊಳ್ಳುವಲ್ಲಿ ಇಂಥ ಕ್ರಿಯೆಯು ಮೊದಲ ಹೆಜ್ಜೆ ಆಗಿದೆ.



**ಸನ್ಯುಕ್ತಾ ಸಹಾ,** ಆಗಾಝ್ ಥಿಯೇಟರ್ ಟ್ರಸ್ಟ್‌ನ ಸಂಸ್ಥಾಪಕಿ ಮತ್ತು ಆನ್ವಯಿಕ ರಂಗಭೂಮಿಯಲ್ಲಿ ವೃತ್ತಿನಿರತೆ. ರಂಗಭೂಮಿ, ಸಾಮಾಜಿಕ ಕಾರ್ಯ ಮತ್ತು ಮಾನಸಿಕ ಆರೋಗ್ಯ–ಸೌಖ್ಯದ ನಡುವಿನ ಸಂಬಂಧಗಳ ಬಗ್ಗೆ ಕುತೂಹಲ. ಇಮೇಲ್: sanyuktha@aagaaztheatre.org



**ದೇವಿಕಾ ಬೇಡಿ,** ದಿಲ್ಲಿಯಲ್ಲಿ ನೆಲೆಸಿರುವ ಕಲಾ ಶಿಕ್ಷಕಿ ಹಾಗು ಸುಗಮಗಾರ್ತಿ. ಸಮುದಾಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳು ಮತ್ತು ಯುವಜನರ ಜೊತೆಗೆ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಅವರು ಕಲೆಯನ್ನು ನಾನಾ ಅವಕಾಶಗಳಲ್ಲಿ ಬಳಸಿಕೊಂಡು, ವ್ಯಕ್ತಿಯು ಸ್ವಯಂನ್ನು ಅರ್ಥಮಾಡಿಕೊಳ್ಳುವ ಮೂಲಕ ಇನ್ನಷ್ಟು ಉದ್ದೇಶಪೂರ್ವಕ ಹಾಗು ಪ್ರಜ್ಞಾಪೂರ್ವಕ ಕ್ರಿಯೆಯಲ್ಲಿ ತೊಡಗಿಸಿಕೊಳ್ಳಬಹುದು ಎನ್ನುವುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇಮೇಲ್: devika@ aagaaztheatre.org

ಅನುವಾದ: **ಮಾಧವ ಐತಾಳ** । ಪರಿಶೀಲನೆ: **ನಾಗಮಣಿ ಎಸ್.ಎನ್.**

# ಶಾಲೆಯಲ್ಲಿ ಸಕ್ರಿಯ ಪೌರತ್ವ

ಸುಮನ್ ಜೋಶಿ

ಕಳೆದ ವರ್ಷವು ಹಿಂದೆಂದೂ ಕಾಣದಂತಹುದಾಗಿತ್ತು. ಕೋವಿಡ್–19 ಸಾಂಕ್ರಾಮಿಕವು ಜೀವಗಳನ್ನಷ್ಟೇ ಬಲಿ ತೆಗೆದುಕೊಳ್ಳಲಿಲ್ಲ. ಜೊತೆಗೆ ಸಹಜ ಬದುಕನ್ನೂ ಹದಗೆಡಿಸಿಬಿಟ್ಟಿತು. ಈ ವರದಿ i ತೋರಿಸುವಂತೆ, ಇದೆ ಮತ್ತು ಇಲ್ಲಗಳ ನಡುವೆ ಮೊದಲೇ ತೊಳಲಾಡುತ್ತಿದ್ದ ಬಡ ವರ್ಗಗಳನ್ನು ಇನ್ನಷ್ಟು ಸಂಕಷ್ಟಕ್ಕೆ ತಳ್ಳಿತು. ಅತಿ ಹೆಚ್ಚು ಬಾಧೆಗೊಳಗಾದ ಒಂದು ವಲಯವೆಂದರೆ, ಶಿಕ್ಷಣ ವಲಯ. ಯಾಕೆಂದರೆ, ಒಂದು ಸಣ್ಣ ಗುಂಪು ಇಂಟರ್‌ನೆಟ್ ಮತ್ತು ಆನ್‌ಲೈನ್ ತರಗತಿಗಳ ಅವಕಾಶವನ್ನು ಪಡೆದರೆ, ಮತ್ತೊಂದೆಡೆ ದೊಡ್ಡ ಪ್ರಮಾಣದಲ್ಲಿ ಮಕ್ಕಳು ವರ್ಷವಿಡೀ ಅದರಿಂದ ವಂಚಿತರಾಗಬೇಕಾಯಿತು ii.

ಕೋವಿಡ್ 19 ಎಂಬುದು ಹಿಂದೆಂದೂ ಕಂಡರಿಯದಂತಹ ಪರಿಸ್ಥಿತಿಯೇ ಆದರೂ ಈ ಆಪತ್ತಿನಿಂದ ನಮ್ಮನ್ನು ನಾವು ಹೇಗೆ ರಕ್ಷಿಸಿಕೊಳ್ಳಬಹುದಿತ್ತು? ಒಂದು ವೇಳೆ ಇಂತಹುದೇ ಆಪತ್ತು ಮತ್ತೊಮ್ಮೆ ಎದುರಾದರೆ ಇಂಥ ಅನ್ಯಾಯಗಳು ಮರುಕಳಿಸದಂತೆ ಯಾವ ರೀತಿ ಎದುರಿಸಬಹುದು?

ಸಾರ್ವಜನಿಕ ಆರೋಗ್ಯ ಮತ್ತು ಶಿಕ್ಷಣಗಳಂತಹ ಸಾರ್ವಜನಿಕ ವಲಯಗಳ ಮೇಲೆ ಹೆಚ್ಚಿನ ಹೂಡಿಕೆ ಮತ್ತು ಸಾಮರ್ಥ್ಯ ಹೆಚ್ಚಿಸುವಂತೆ ಪ್ರಭುತ್ವದ ಸಾಮರ್ಥ್ಯವನ್ನು ಹೆಚ್ಚಿಸಬೇಕು. ಈ ಪ್ರಶ್ನೆಗಿರುವ ನಿಖರವಾದ ಉತ್ತರಗಳಾಗಿವೆ. ಆದರೆ, ಒಂದು ವೇಳೆ ನಾವು, ಪಥ ಬದಲಾಯಿಸುವಂತಹ ಪರಿಹಾರವನ್ನು ಸೂಚಿಸುವುದಾದರೆ, ಅದು ಸಕ್ರಿಯ ಪೌರತ್ವ ಎಂಬ ಪರಿಕಲ್ಪನೆ. ಹಾಗಿದ್ದರೆ, ಸಕ್ರಿಯ ಪೌರತ್ವ ಎಂದರೇನು ಮತ್ತು ಅದರ ಗುರಿ ಏನು?

ಆಳವಾದ ಮತ್ತು ವಿಸ್ತೃತವಾದ ಪ್ರಜಾಪ್ರಭುತ್ವದಲ್ಲಿ, ಪ್ರಪಂಚದಾದ್ಯಂತ ಕಾಣುವ ಸಾಮಾನ್ಯ ಪಾಠವೆಂದರೆ, ನಾಗರಿಕರು, ನಾಗರಿಕ ವ್ಯವಹಾರಗಳಲ್ಲಿ ಹೇಗೆ ತೊಡಗಿಸಿಕೊಂಡಿದ್ದಾರೆ ಎಂಬುದು ಅವರಿಗೆ ಎಂತಹ ಪ್ರಜಾತಂತ್ರ ದಕ್ಕಿದೆ ಎಂಬುದನ್ನು ನಿರ್ಧರಿಸುತ್ತದೆ. ಹಾಗಾಗಿ, ನಮಗೆ ಉತ್ತಮ ಪ್ರಜಾಪ್ರಭುತ್ವ ಸಿಗಬೇಕಾದರೆ ನಾವು ಪ್ರಜ್ಞಾವಂತರಾಗಿರಬೇಕು ಮತ್ತು ಸಕ್ರಿಯ ಪೌರರಾಗಿರಬೇಕು iii. ಸಕ್ರಿಯ ಪೌರತ್ವವು ನಾಗರಿಕರು ಸರ್ಕಾರದ ಮೇಲೆ ತಮ್ಮ ಹಕ್ಕು ಸಾಧಿಸುವುದನ್ನು ಪ್ರೋತ್ಸಾಹಿಸುವುದನ್ನು ಆಧಾರವಾಗಿ ಹೊಂದಿದೆ. ತೀರಾ ತಳ ಹಂತದಲ್ಲಿ, ಅದು ಪ್ರಜಾತಂತ್ರವನ್ನು ಗಣರಾಜ್ಯವನ್ನಾಗಿ ಅರ್ಥೈಸಿಕೊಳ್ಳುವಂತೆ ಮಾಡುತ್ತದೆ, ಸಂವಿಧಾನದ ಮಹತ್ವ ಮತ್ತು ಸಂವಿಧಾನದ ಮೂಲಭೂತ ಹಕ್ಕುಗಳು ಹಾಗು ನಮ್ಮ ಸಂವಿಧಾನದಲ್ಲಿ ಹೇಳಲಾಗಿರುವ ನಿರ್ದೇಶನಾ ತತ್ವಗಳನ್ನು ಅರ್ಥೈಸಿಕೊಳ್ಳುವಂತೆ ಮಾಡುತ್ತದೆ. ಇವೆಲ್ಲ ಪ್ರಾಥಮಿಕ ಪರಿಕಲ್ಪನೆಗಳು ಎಂದು ನೀವು ಹೇಳಬಹುದು. ಆದರೆ, ಸ್ವಾತಂತ್ರ್ಯ ದಿನಾಚರಣೆ ಮತ್ತು ಗಣರಾಜ್ಯೋತ್ಸವ ದಿನಾಚರಣೆಯ ನಡುವಿನ ವ್ಯತ್ಯಾಸವೇನು ಎಂದು ಒಂದಷ್ಟು ಜನರನ್ನು ಕೇಳಿ ನೋಡಿ. ಅವರ ಉತ್ತರದಿಂದ ನೀವು ದಂಗಾಗುತ್ತೀರಿ!

ಆಧುನಿಕ ಪ್ರಜಾಪ್ರಭುತ್ವವು ಯಾವ ಅಡಿಪಾಯದ ಮೇಲೆ ನಿಂತಿದೆ ಎಂದು ಅರ್ಥೈಸಿಕೊಳ್ಳುವುದು ಇಲ್ಲಿ ಸೂಚನಾತ್ಮಕವಾಗಿರಬಹುದು, ಉದಾಹರಣೆಗೆ, ಮತದಾನದಲ್ಲಿ ಪಾಲ್ಗೊಳ್ಳುವಿಕೆ, ನಾಗರಿಕ ಪ್ರತಿಭಟನೆಗಳು ಮತ್ತು ಸರ್ಕಾರದ ಮೇಲೆ ಹಕ್ಕು ಸಾಧಿಸುವುದು. ಇವೆಲ್ಲಾ ಪೌರರಾಗಿ ಪಾಲ್ಗೊಳ್ಳುವ ಸಾಮಾನ್ಯ ಮಾರ್ಗಗಳು. ಚುನಾವಣಾತ್ಮಕ ಪಾಲ್ಗೊಳ್ಳುವಿಕೆಯು ಚುನಾವಣೆ ಮತ್ತು ಪ್ರತಿಭಟನೆಯ ಅಬ್ಬರದ ಜೊತೆಗೆ ಸಹಜವಾಗಿಯೇ ಬಂದುಬಿಟ್ಟಿವೆ. ಆದರೆ ಮೂಲಸೌಕರ್ಯಗಳಿಗಾಗಿ ಹಕ್ಕು ಸಾಧಿಸಲು, ಅದನ್ನು ಒದಗಿಸಲು ಸರ್ಕಾರ ವಿಫಲವಾದಾಗ ಅದರ ಮೇಲೆ ಪ್ರಜೆಗಳು ನಿಯಂತ್ರಣ ಕಳೆದುಕೊಂಡಿರುತ್ತಾರೆ ಎಂದಾಗುತ್ತದೆ. ಸಕ್ರಿಯ ಪೌರತ್ವ ಕುರಿತ ನಾಲ್ಕನೇ ಅಂಶವನ್ನು ಸೇರಿಸುವುದಾದರೆ, ಸರ್ಕಾರದ ಮೇಲೆ ಕಳೆದುಕೊಂಡ ನಿಯಂತ್ರಣವನ್ನು ಮತ್ತೆ ಪಡೆಯಲು ಸಕ್ರಿಯ ಪೌರತ್ವವು ನೆರವಾಗಬಲ್ಲದು. ಸರ್ಕಾರವು ಕಡ್ಡಾಯವಾಗಿ ಪೌರರಿಗೆ ಕೊಡಬೇಕಾದುದನ್ನು ಹಕ್ಕೊತ್ತಾಯದಿಂದ ಪಡೆದುಕೊಳ್ಳಲು ಸಕ್ರಿಯ ಪೌರತ್ವವು ನೆರವಾಗುತ್ತದೆ.

> ಒಟ್ಟಾರೆಯಾಗಿ ಹೇಳುವುದಾದರೆ, ಸಕ್ರಿಯ ಪೌರರು, ಕಾನೂನಾತ್ಮಕವಾಗಿ ನ್ಯೂನತೆಗಳನ್ನು ಪರಿಶೀಲಿಸುವುದೂ, ಜಾಗೃತ ಕ್ರಿಯಾಶೀಲ ಪ್ರಜೆಗಳಾಗಿ, ಇತರ ಪ್ರಜೆಗಳ ಜೊತೆ ಸೇರಿ ಕೆಲಸ ಮಾಡುವುದು, ಶಾಸನಕಾರರು ಮತ್ತು ಸ್ಥಳೀಯ ಸರ್ಕಾರಗಳು ಸುಸೂತ್ರ ಆಡಳಿತ ನಡೆಸಲು ಪೂರಕ. ಉದಾಹರಣೆಗೆ, ಬೆಂಗಳೂರಿನ ಕೆರೆಗಳು ಮಲಿನತೆಯಿಂದ ಶಾಂತಿಯ ತಾಣಗಳಾಗಿ ಮಾರ್ಪಾಡುಗೊಳ್ಳಲು ವಾರ್ಡ್ ಅಧಿಕಾರಿಗಳು ಮತ್ತು ಸ್ಥಳೀಯ ಕಾರ್ಪೊರೇಟರ್‌ಗಳೊಂದಿಗೆ ಶ್ರಮವಹಿಸಿದ ನಾಗರಿಕರು ಅಭಿನಂದನಾರ್ಹರು.

### ನಮ್ಮ ಪ್ರಜಾಪ್ರಭುತ್ವವನ್ನು ಅರ್ಥಮಾಡಿಕೊಳ್ಳುವುದು

ರಾಜ್ಯದ ಆಡಳಿತ ಯಂತ್ರವು ಹೇಗೆ ಕೆಲಸ ಮಾಡುತ್ತದೆ ಎಂದು ನಾಗರಿಕರು ಅರ್ಥ ಮಾಡಿಕೊಳ್ಳದ ಕಾರಣಕ್ಕೆ ತಮ್ಮ ಹಕ್ಕುಗಳು ಮತ್ತು ಅದನ್ನು ಪಡೆದುಕೊಳ್ಳುವ ಹೋರಾಟದಲ್ಲಿ ನಾಗರಿಕರೇ ಎಷ್ಟೋ ಬಾರಿ ಸೋಲುತ್ತಾರೆ. ಪರಿಣಾಮವಾಗಿ, ಮಹತ್ವದ ಸೇವೆಗಳನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಅದಕ್ಕಾಗಿ ಹೋರಾಡುವುದು ಕೈಗೆಟುಕದ ಕನಸಾಗಿ ಉಳಿದುಬಿಡುತ್ತದೆ. ಆದ್ದರಿಂದ, ಈ ರೀತಿಯ ಶಿಕ್ಷಣದ ಪ್ರಕ್ರಿಯೆಯು ತಳಹಂತದಲ್ಲೇ ಆರಂಭವಾಗಬೇಕು. ಆಗ ನಮ್ಮ ಪ್ರಜಾಪ್ರಭುತ್ವದ ಮೂಲಸತ್ವವನ್ನು ನಾವು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಅವುಗಳನ್ನು ತಳಹಂತದಲ್ಲೇ ಮುಂಚೂಣಿಗೆ ತರುವುದರ ಹಿಂದಿನ ಮೌಲ್ಯವೇನು? ಅದರಿಂದ ಯಾವ ಸಮಸ್ಯೆಗಳು ಬಗೆಹರಿಯ–ಬಹುದು?

**ಹಕ್ಕುಗಳ ಅರಿವು**

ತಳಹಂತದಲ್ಲೇ ಶಿಕ್ಷಣ ನೀಡುವುದರಿಂದ ನಾಗರಿಕರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಿರಲು ಸಾಧ್ಯವಾಗುತ್ತದೆ. ಜಾಗೃತಿಯೇ ಬದಲಾವಣೆಯ ಮೊದಲ ಹೆಜ್ಜೆ. ವಿದ್ಯಾರ್ಥಿಗಳು ಈ ನಿಟ್ಟಿನಲ್ಲಿ ಜಾಗೃತರಾಗುವುದರಿಂದ ಅವರು ಕಡಿಮೆ ಗುಣಮಟ್ಟದ್ದನ್ನು ಗುರುತಿಸಲು ಸಾಧ್ಯವಾಗುತ್ತದೆ. ಉದಾಹರಣೆಗೆ, ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡುವುದು ರಾಜ್ಯ ಸರ್ಕಾರದ ಹೊಣೆ ಎಂದು ವಿದ್ಯಾರ್ಥಿಗಳಿಗೆ ಮನದಟ್ಟಾದಾಗ ಅವರು ತಮ್ಮ ಸಮುದಾಯಗಳಲ್ಲಿನ ಕಾನೂನು ಸುವ್ಯವಸ್ಥೆಯನ್ನು ಪಾಲಿಸುವುದು ಸ್ಥಳೀಯ ಪೊಲೀಸರ ಕರ್ತವ್ಯ ಎಂದು ಅರ್ಥ ಮಾಡಿಕೊಳ್ಳುತ್ತಾರೆ. ಕಾನೂನು ಸುವ್ಯವಸ್ಥೆ ಜಾರಿಯಲ್ಲಿರಿಸುವಂತೆ ಮಕ್ಕಳು ಪೊಲೀಸ್ ಠಾಣೆಗೆ ಹೋಗಿ ಆಗ್ರಹಿಸಲಾಗದೇ ಇರಬಹುದು. ಆದರೆ ಅವರು ತಮ್ಮ ಓರಗೆಯವರಲ್ಲಿ ಈ ಸಂಬಂಧ ಜಾಗೃತಿ ಮೂಡಿಸಲು ಸಾಧ್ಯ.

**ಸಾಮಾಜಿಕ ಸಮಸ್ಯೆಗಳ ಅರಿವು**

ಆಡಳಿತ, ಮಾರುಕಟ್ಟೆಗಳು ಮತ್ತು ಸಮಾಜ– ಈ ಮೂರು ಆಧುನಿಕ ಪ್ರಜಾಪ್ರಭುತ್ವದ ಆಧಾರ ಸ್ತಂಭಗಳು. ರಘುರಾಮ್ ರಾಜನ್ ಅವರು ತಮ್ಮ ಪುಸ್ತಕ 'ದಿ ಥರ್ಡ್ ಪಿಲ್ಲರ್'ನಲ್ಲಿ (The Third Pillar) ಮೂರನೇ ಸ್ತಂಭವಾದ ಸಮಾಜವನ್ನು ಸದೃಢಗೊಳಿಸುವುದನ್ನು ಅದ್ಭುತವಾಗಿ ವಿವರಿಸುತ್ತಾರೆ. ಕಳೆದೆರಡು ದಶಕಗಳಿಂದ ಆಡಳಿತ ವೈಫಲ್ಯದಿಂದಾಗಿ ಸಮಾಜವು ದುರ್ಬಲಗೊಳ್ಳುತ್ತಿದೆ ಮತ್ತು ತಮ್ಮ ಆರ್ಥಿಕ ಮಟ್ಟ ಸುಧಾರಣೆಯಾಗುತ್ತಿದ್ದಂತೆ ನಾಗರಿಕರು ಸರ್ಕಾರವನ್ನು ಒತ್ತಾಯಿಸುವುದರ ಬಗ್ಗೆ ನಿರಾಸಕ್ತಿ ವಹಿಸುತ್ತಾರೆ. ಸಕ್ರಿಯ ಪೌರತ್ವವು ಈ ಮೂರನೇ ಸ್ತಂಭವನ್ನು ಸದೃಢಗೊಳಿಸುವ ನಿಟ್ಟಿನಲ್ಲಿಯೂ ನೆರವಾಗಿ, ಸಮಾನತೆಯ ಸಮಾಜ ನಿರ್ಮಾಣದತ್ತ ಹಂತಹಂತವಾಗಿ ಬದಲಾವಣೆ ಮಾಡಬಲ್ಲದು. ಉದಾಹರಣೆಗೆ, ಜಾತಿಯ ಆಧಾರದಲ್ಲಿ ತಾರತಮ್ಯ ಆಗದಂತೆ ಆಡಳಿತವು ನಿಯಂತ್ರಣಾ ಚೌಕಟ್ಟು ಹೇರಬಹುದು. ಆದರೆ, ಇದರಲ್ಲಿ ಸಮಾಜವೂ ಮಹತ್ವದ ಪಾತ್ರ ವಹಿಸುವುದು ಬಹಳ ಮುಖ್ಯ. ಸಕ್ರಿಯ ಪೌರತ್ವವು ಸಾಮಾಜಿಕ ಸಮಸ್ಯೆಗಳ ಕುರಿತು ಸಂವಹನ ಮತ್ತು ಜಾಗೃತಿ ಆಂದೋಲನ ಕೈಗೊಳ್ಳುವ ಮೂಲಕ ಮಕ್ಕಳಲ್ಲಿ ಸಕ್ರಿಯ ಪೌರತ್ವದ ಕುರಿತು ಪರಿಣಾಮಕಾರಿಯಾಗಿ ಅರಿವು ಮೂಡಿಸ–ಬಹುದು.

**ಪರಿಹಾರ ಕಂಡುಕೊಳ್ಳುವುದು**

ವಿದ್ಯಾರ್ಥಿಗಳು ಆಡಳಿತಾತ್ಮಕ ರಚನೆಗಳು, ಸ್ಥಳೀಯ ಸರ್ಕಾರಗಳು ಮತ್ತು ಚೌಕಟ್ಟುಗಳನ್ನು ಅರ್ಥ ಮಾಡಿಕೊಳ್ಳುವುದರಿಂದ ಪರಿಹಾರಾತ್ಮಕ ಮನಸ್ಥಿತಿ ನಿರ್ಮಾಣವಾಗುತ್ತದೆ. ಉದಾಹರಣೆಗೆ, ವಿದ್ಯಾರ್ಥಿಗಳು ವಾರ್ಡ್ ಮಟ್ಟದ ಸಮಿತಿಗಳು ಮತ್ತು ಅವುಗಳ ಕಾರ್ಯಮಿತಿಯನ್ನು ತಿಳಿದುಕೊಂಡಾಗ ಸರ್ಕಾರಗಳು ನಮ್ಮ ಕೈಗೆಟುಕುತ್ತವೆ ಮತ್ತು ಜವಾಬ್ದಾರಿಯುತವಾಗಿವೆ ಎಂಬುದು ಅರ್ಥವಾಗುತ್ತದೆ. ವೈವಿಧ್ಯಮಯ ದೇಶದ ಕೆಲವು ಸ್ಥಳೀಯ ಸಮಸ್ಯೆಗಳಿಗೆ ಪರಿಣಾಮಕಾರಿ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಪಕ್ಕಾ ಸ್ಥಳೀಯವೆನಿಸುವ ಉಪಾಯಗಳು ಬೇಕಾಗುತ್ತವೆ. ಉದಾಹರಣೆಗೆ, ಘನ ತ್ಯಾಜ್ಯ ನಿರ್ವಹಣೆಯ ಕ್ಷೇತ್ರವು ತೀರಾ ಸ್ಥಳೀಯವಾದುದು ಹಾಗು ತಮ್ಮದೇ ಆಸುಪಾಸಿನ ಈ ಸಮಸ್ಯೆಗೆ ವಿದ್ಯಾರ್ಥಿಗಳು ಪರಿಹಾರೋಪಾಯವನ್ನು ಕಂಡುಕೊಳ್ಳಲು ಸಾಧ್ಯ.

**ಶಾಲೆಯಲ್ಲಿ ಪೌರತ್ವದ ಬೋಧನೆ**

ಈಗಾಗಲೇ ನಾವು 'ಏನು' ಮತ್ತು 'ಯಾಕೆ' ಎಂಬುದನ್ನು ನೋಡಿದ್ದೇವೆ. ಈಗ 'ಹೇಗೆ' ಎಂಬುದರತ್ತ ಗಮನ ಕೊಡಬೇಕಾಗಿದೆ. ಪ್ರಜಾಪ್ರಭುತ್ವವು ನಾಗರಿಕರ ಸಕ್ರಿಯ ಸಹಭಾಗಿತ್ವದ ಮೇಲೆ ಅವಲಂಬಿಸಿದೆ.ಗಣಿತದ ಮೂಲತತ್ವಗಳು ಮತ್ತು ಭೌತವಿಜ್ಞಾನವನ್ನು ಕಲಿಸಲು ತೆಗೆದುಕೊಳ್ಳುವಷ್ಟು ಸಮಯವನ್ನು ನಾವು ಮಕ್ಕಳಿಗೆ ಪೌರತ್ವದ ಬಗ್ಗೆ ಬೋಧಿಸಲು ತೆಗೆದುಕೊಳ್ಳುತ್ತೇವೆಯೇ? ತರಗತಿಗಳಲ್ಲಿ ಆಸಕ್ತಿ ಮತ್ತು ತೊಡಗಿಸಿಕೊಳ್ಳುವಿಕೆಯನ್ನು ನಿರ್ಮಿಸುವುದು ಹೇಗೆ? ತರಗತಿಗಳು ಬೃಹತ್ ಸಮಾಜದ ಸೂಕ್ಷ್ಮರೂಪಗಳಾಗಿರುವ ಕಾರಣ ಅದೇ ಉಪಾಯ ಮತ್ತು ವಿಧಾನವನ್ನು ಅನುಸರಿಸುವುದು ಸಹಕಾರಿಯಾಗಬಹುದು. ಹಾಗೆ ಸಕ್ರಿಯ ಪೌರತ್ವದ ಬಗ್ಗೆ ತರಗತಿಗಳಲ್ಲಿ ಪರಿಣಾಮಕಾರಿಯಾಗಿ ಬೋಧಿಸಬಹುದಾದ ಕೆಲವು ಮಾರ್ಗಗಳು ಇಲ್ಲಿವೆ.

**ದೈನಂದಿನ ಸುದ್ದಿ ಮತ್ತು ಚರ್ಚೆಗಳು**

ತರಗತಿಯಲ್ಲಿನ ಬೋಧನೆಯನ್ನು ಪೌರತ್ವದ ಪರಿಕಲ್ಪನೆ, ಸ್ಥಳೀಯ ಸರ್ಕಾರಗಳು ಮತ್ತು ಶಾಸನ ರಚನೆಯ ಬಗ್ಗೆ ಚರ್ಚಿಸಲು ಬಳಸಿಕೊಳ್ಳುವಂತೆಯೇ, ಪ್ರತಿನಿತ್ಯ ಅಸೆಂಬ್ಲಿಯಲ್ಲಿ 10 ನಿಮಿಷಗಳನ್ನು ಪತ್ರಿಕೆಗಳ ಸುದ್ದಿ ಶೀರ್ಷಿಕೆಗಳನ್ನು ಓದಲು ಮತ್ತು ಚರ್ಚಿಸಲು ಮೀಸಲಿಡಬಹುದೇ? ಹಾಗೆಯೇ, ವಾರಕ್ಕೊಂದು ಬಾರಿ ಎಲ್ಲಾ ಸುದ್ದಿಗಳ ಕುರಿತು ಗಂಭೀರ ಚರ್ಚೆ ಏರ್ಪಡಿಸಿದರೆ ಅವುಗಳನ್ನು ಇನ್ನಷ್ಟು ಚೆನ್ನಾಗಿ ಅರ್ಥೈಸಿಕೊಳ್ಳಲು ಸಹಾಯವಾಗುತ್ತದೆ. ಈ ವಾರದ ಕಾರ್ಯಕ್ರಮದಲ್ಲಿ, ಮಹತ್ವದ ಸಂಗತಿಗಳ ಕುರಿತು ವಿದ್ಯಾರ್ಥಿಗಳ ನಡುವೆ ಚರ್ಚೆ ಏರ್ಪಡಿಸಬಹುದು. ಉದಾಹರಣೆಗೆ, ಕೃಷಿ ಕಾನೂನು ಮತ್ತು ಅದಕ್ಕೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಚರ್ಚೆ ಏರ್ಪಡಿಸಬಹುದು.

**ಸಂಸದೀಯ ಪ್ರಕ್ರಿಯೆಗಳನ್ನು ಅರ್ಥ ಮಾಡಿಕೊಳ್ಳುವುದು**

ಶಾಲಾಮಟ್ಟದಲ್ಲಿ ಒಂದು ಚುನಾವಣೆ ನಡೆಸಿ ಅಣಕು ಸಂಸತ್ತು ರಚನೆಮಾಡಿ, ಚರ್ಚೆ ಏರ್ಪಡಿಸಿ ಸಂಸದೀಯ ಚಟುವಟಿಕೆಗಳನ್ನು ವಿಶ್ಲೇಷಣೆ ಮಾಡಬಹುದು. ಪ್ರಶ್ನಿಸುವುದನ್ನು ಸುಲಭವಾಗಿ ಪ್ರೋತ್ಸಾಹಿಸದ ಸಂಸ್ಕೃತಿಯಲ್ಲಿ ರಚನಾತ್ಮಕ ಚರ್ಚೆ ಮತ್ತು ಸಂವಾದಗಳನ್ನು ಪ್ರೋತ್ಸಾಹಿಸುವುದು ಬಹಳ ಮುಖ್ಯ. ಇವು ಮಕ್ಕಳಿಗೆ, ನೀತಿನಿಯಮಗಳನ್ನು ರೂಪಿಸಲು ಮತ್ತು ಸಾರ್ವಜನಿಕ ಜೀವನಕ್ಕೆ ಅಗತ್ಯವಾದ ಚೌಕಾಸಿ ಮಾಡುವ, ಸಹಾನುಭೂತಿ ತೋರಿಸುವ ಮತ್ತು ರಾಜಿ ಮಾಡಿಕೊಳ್ಳುವಂತಹ ಮೌಲ್ಯಗಳ ಬಗ್ಗೆ ಪ್ರಮುಖ ಪಾಠಗಳಾಗುತ್ತವೆ. ಪ್ರಜಾಪ್ರಭುತ್ವವು ಸಕ್ರಿಯವಾಗಿರುವಾಗ ಅದನ್ನು ಪುನರ್ ಸ್ಥಾಪಿಸುವಾಗ ನಾವು ಈ ಎಲ್ಲ ಪ್ರಕ್ರಿಯೆಗಳು ಸಂವಿಧಾನ ಚೌಕಟ್ಟಿನೊಳಗೆಯೇ ಇರುವಂತೆ ನೋಡಿಕೊಳ್ಳಬೇಕು. ಶಾಲೆಯು ತನಗೆ ತಾನೇ ಒಂದು ಸನ್ನದು ಹಾಕಿಕೊಂಡು ಅದನ್ನೇ ಸಂವಿಧಾನದಂತೆ ನಡೆಸಬಹುದು. ಆಗ ಅದು ಸಾಂವಿಧಾನಿಕ ಗಣರಾಜ್ಯವು, ಆಧುನಿಕ ಪ್ರಜಾಪ್ರಭುತ್ವವು ರಾಜಪ್ರಭುತ್ವಕ್ಕಿಂತ ಹೇಗೆ ವಿಭಿನ್ನವಾಗಿದೆ ಎಂಬುದನ್ನು ಅಂತರ್ಗತಗೊಳಿಸುತ್ತದೆ.

**ಪ್ರಜಾಪ್ರಭುತ್ವದ ಪ್ರಕ್ರಿಯೆಗಳನ್ನು ಮತ್ತು ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವುದು**

ಎಲ್ಲಾ ಪ್ರಮುಖ ಚುನಾವಣೆಗಳನ್ನೇ ಗಮನಿಸಿ, ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ವಯಸ್ಕರ ಮತದಾನ ಸಂಬಂಧಿ ವಿಚಾರಗಳನ್ನು

ವಿವರಿಸಿ ವಿಶ್ಲೇಷಣೆ ಮಾಡಬಹುದು. ಉದಾಹರಣೆಗೆ, ವಯಸ್ಕ ಮತದಾನದ ಪರಿಕಲ್ಪನೆಯಲ್ಲಿ '18 ವರ್ಷ ತುಂಬಿದ ಎಲ್ಲಾ ನಾಗರಿಕರು ಮತ ಚಲಾಯಿಸುವುದು' ಎಂಬ ಸಿದ್ಧಸೂತ್ರವನ್ನು ಮಾತ್ರ ವಿದ್ಯಾರ್ಥಿಗಳಿಗೆ ಹೇಳಿಕೊಡುವುದಲ್ಲ. ಬದಲಾಗಿ, ಜಗತ್ತಿನೆಲ್ಲೆಡೆಯ ಸ್ವಾತಂತ್ರ್ಯ ಹೋರಾಟ ಅಥವಾ 'ಮತಾಧಿಕಾರ ಆಂದೋಲನ' (suffrage movements)ವನ್ನು ಚಾರಿತ್ರಿಕ ಸಂದರ್ಭದಲ್ಲಿಟ್ಟು ವಿವರಿಸಿ, ಬಳಿಕ ವಯಸ್ಕ ಮತದಾನದ ಪರಿಕಲ್ಪನೆಯನ್ನು ಚರ್ಚಿಸಬೇಕು. ಪ್ರಾತ್ಯಕ್ಷಿಕೆ ಮತ್ತು ಪಾಠಗಳನ್ನು ಮುಗಿಸಬೇಕಾದ ಒತ್ತಡದಿಂದಾಗಿ ಇದು ಸ್ವಲ್ಪ ಕಷ್ಟವಾದೀತು. ನಾವು ಪ್ರತಿ ವಾರವೂ ಆಯಾ ಪಾಠಗಳ ಜೊತೆಗೆ ಸಾಮಾನ್ಯ ಸಂಗತಿಗಳ ಚರ್ಚೆಗೆ ಸಮಯ ನಿಗದಿ ಮಾಡಬಹುದು. ಉದಾಹರಣೆಗೆ, ಮತಾಧಿಕಾರದ ಕುರಿತ ಆಂದೋಲನವನ್ನು ಪ್ರಜಾಪ್ರಭುತ್ವ ಮತ್ತು ಲಿಂಗಾಧರಿತ ಹಕ್ಕುಗಳ ಜಾಗೃತಿ ಜತೆಗೆ ಬೆಸೆಯಬಹುದು! ಹಾಗೆಯೇ, ಭೂಗೋಳಶಾಸ್ತ್ರದಲ್ಲಿ ಆಹಾರದ ಬಗೆಗಳನ್ನು ವೈವಿಧ್ಯದಲ್ಲಿ ಏಕತೆಯೊಂದಿಗೆ ಬೆಸೆಯಬಹುದು.

ಪ್ರಜಾಪ್ರಭುತ್ವವು, ಆಳವಾಗಿ ಬೇರೂರಿ, ಕಟ್ಟಕಡೆಯ ವ್ಯಕ್ತಿಗೂ ಪ್ರಯೋಜನ ಸಿಗುವಂತಾಗಬೇಕಾದರೆ, 'ಚಿಕ್ಕವರಿರುವಾಗಲೇ ಹಿಡಿದುಕೊಳ್ಳಿ– ಅವರ ಬೆಳವಣಿಗೆಯನ್ನು ಗಮನಿಸಿ' (catch them young - watch them grow') ಎಂಬ ಸೂತ್ರವನ್ನು ಅನುಸರಿಸಬೇಕು. ಅದಕ್ಕಾಗಿ ನಮ್ಮ ಮಕ್ಕಳಿಗೆ ಪೌರತ್ವದ ಪಾಠಕ್ಕೆ ಹೆಚ್ಚು ಆದ್ಯತೆ ನೀಡಬೇಕಾಗಿದೆ. ಜಗತ್ತಿನಾದ್ಯಂತ ಕೇಂದ್ರೀಕೃತ ಆಡಳಿತ ಹೆಚ್ಚುತ್ತಿರುವ ಈ ಹೊತ್ತಿನಲ್ಲಿ ನಾಗರಿಕರಾಗಿ ನಾವು ಹಿಂತಿರುಗಿ ನೋಡಬೇಕಾಗಿದೆ. 70 ವರ್ಷಗಳ ಹಿಂದೆ ಕಂಡ ಕನಸನ್ನು ಅರ್ಥ ಮಾಡಿಕೊಳ್ಳುವ ದಿಸೆಯಲ್ಲಿ ಹೊಸ ಪುಟವೊಂದನ್ನು ತೆರೆಯುವುದು ನಮಗೆ ಬಿಟ್ಟಿದ್ದು.

**ಅಡಿಟಿಪ್ಪಣಿಗಳು**

i https://www.livemint.com/news/india/what-2020-did-to-india-s-inequality-11610982667419.html

ii (https://indianexpress.com/article/india/delhi-survey-school-education-govt-facilities-computers-7146867/)

iii (https://www.thehindu.com/opinion/op-ed/a-leaf-from-stacey-abrams-book/article33156100.ecex)



**ಸುಮನ್ ಜೋಶಿ** ಅವರು ಪ್ರಸ್ತುತ ಬೆಂಗಳೂರಿನ ತಕ್ಷಶಿಲಾ ಸಂಸ್ಥೆಯಲ್ಲಿ ಕಾರ್ಯಕ್ರಮ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ವೃತ್ತಿಜೀವನದಲ್ಲಿ ಮಾನವ ಸಂಪನ್ಮೂಲ (ಎಚ್.ಆರ್), ಪ್ರೊಸೆಸ್ ಮತ್ತು ಕ್ವಾಲಿಟಿ ಮುಂತಾಗಿ ಹಲವು ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಈಗ ಪಬ್ಲಿಕ್ ಪಾಲಿಸಿ (ಸಾರ್ವಜನಿಕ ನೀತಿನಿಯಮ) ಕ್ಷೇತ್ರದಲ್ಲಿ ಉತ್ಸುಕರಾಗಿದ್ದಾರೆ. ಉತ್ತಮ ಕ್ರೀಡಾಪಟು, ಓದು ಮತ್ತು ಬರಹದ ಹವ್ಯಾಸವೂ ಇದೆ. ಸುಮನ್ ಅವರ ಸಂಪರ್ಕಕ್ಕೆ: sujo2906@gmail.com

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ನಾಗಮಣಿ ಎಸ್.ಎನ್.**

**ಮಕ್ಕಳನ್ನು ಭವಿಷ್ಯದ ಪ್ರಜೆಗಳಾಗಿ ನೋಡುವುದಕ್ಕಿಂತ ಪಠ್ಯ ಅಭಿವೃದ್ಧಿಪಡಿಸುವವರು ಮತ್ತು ಶಿಕ್ಷಕರು ಅವರನ್ನು ವರ್ತಮಾನದ ಪ್ರಜೆಗಳನ್ನಾಗಿಯೇ ನೋಡಬೇಕು (Howe & Covell, 2009). ಅವರಿಗೆ ಒದಗಿಸಲಾಗುವ ಅನುಭವಗಳು ಮಕ್ಕಳು ಇಲ್ಲಿ ಏನು ಮಾಡಬಹುದು, ಅವರು ಮತ್ತು ಅವರ ಸಮುದಾಯದವರ ಬದುಕಿನಲ್ಲಿ ಬದಲಾವಣೆ ತರಲು ಅನುಕೂಲವಾಗುವಂತೆ ವಿನ್ಯಾಸಗೊಂಡಿರಬೇಕು.**

**– ರಿಚಾ ಪಾಂಡೆ, ಕತೆಗಳ ಮೂಲಕ ಸಕ್ರಿಯ ಪೌರತ್ವವನ್ನು ಮನದಟ್ಟು ಮಾಡಿಸುವವರು/ ಪುಟ 90.**

# ಸೃಜನಶೀಲ ಕಾರ್ಯಾಗಾರಗಳ ಮೂಲಕ ಪೌರತ್ವ

ಉಮಾಶಂಕರ ಪೆರಿಯೋಡಿ

ಮಕ್ಕಳು ಒಂದಷ್ಟು ವಿಷಯಗಳನ್ನು ಕಲಿಯುವ ಜೊತೆಗೆ ಸೃಜನ-ಶೀಲತೆ ತೋರಿಸುವ ಮೂಲಕ ಮೋಜನ್ನು ಅನುಭವಿಸುವಂತೆ ಮಾಡುವುದಕ್ಕಾಗಿ ಮೂರು ದಿನಗಳ ಸೃಜನಶೀಲತೆ ಕಾರ್ಯಾಗಾರವನ್ನು ಸುರಪುರ ಜಿಲ್ಲೆಯಲ್ಲಿ ಆಯೋಜಿಸಲಾಗಿತ್ತು. ಇದು ನಮ್ಮ ಪಾಲಿಗೆ ದೊಡ್ಡ ಸವಾಲಿನ ವಿಷಯವಾಗಿತ್ತು. ಈ ಕಾರ್ಯಾಗಾರದಲ್ಲಿ ಮಕ್ಕಳೊಂದಿಗೆ ಮೂರು ಪ್ರಮುಖ ಕೆಲಸಗಳನ್ನು ಮಾಡಲು ನಾವು ಯೋಜನೆ ಹೂಡಿದ್ದೆವು. ಮೊದಲನೆಯದು ಅವರನ್ನು ಹೆಚ್ಚು ಜವಾಬ್ದಾರರನ್ನಾಗಿಸುವುದು, ಎರಡನೆಯದು ಸಮುದಾಯದ / ಸಾರ್ವಜನಿಕ ಆಸ್ತಿಯನ್ನು ಸೂಕ್ಷ್ಮತೆಯಿಂದ ಬಳಸುವುದು ಮತ್ತು ಮೂರನೆಯದು ಸಂವಾದವನ್ನು ಸಂವಹನ ಮತ್ತು ಸಮಸ್ಯೆ ಪರಿಹಾರದ ಮುಖ್ಯ ಪ್ರಕ್ರಿಯೆಯಾಗಿ ಬಳಸುವುದು. ಆದರೆ ಇದನ್ನು ಮಾಡಬೇಕಾದರೆ ಅವರೆಲ್ಲರೂ ಸಮಾನರು ಎನ್ನುವ ಭಾವನೆಯನ್ನು ಅವರಲ್ಲಿ ಮೂಡಿಸಬೇಕಿತ್ತು.

**ಸಮಾನತೆಯ ಭಾವನೆ**

ಮಕ್ಕಳಲ್ಲಿ ಮುಖ್ಯವಾಗಿ ಸಮಾನತೆಯ ಭಾವನೆ ಮೂಡಬೇಕು, ಅವರ ಮಾತನ್ನು ಆಲಿಸಲಾಗುತ್ತದೆ ಮತ್ತು ಅವರಲ್ಲಿ ಯಾವುದೇ ತಾರತಮ್ಯವಿಲ್ಲ ಎಂಬ ಚಿಂತನೆಯು ಅವರಲ್ಲಿ ಬರಬೇಕು ಎಂದು ನಾವು ಭಾವಿಸಿದೆವು. ಇದನ್ನು ಮಾಡುವುದಕ್ಕಾಗಿ ಅವರು ನೆಲದಲ್ಲಿ ವೃತ್ತಾಕಾರದಲ್ಲಿ ಕುಳಿತುಕೊಳ್ಳುವಂತೆ ಮಾಡಿದೆವು. ಇದು ಎಲ್ಲರೂ ಕಾಣುವಂತೆ ಮಾಡುತ್ತದೆ ಹಾಗು ಎಲ್ಲರೂ ಸಮಾನರು ಎಂಬುದನ್ನು ಅರಿತುಕೊಳ್ಳಲು ಮಕ್ಕಳಿಗೆ ಸಹಕಾರಿಯಾಗುತ್ತದೆ. ಸುಗಮಕಾರರು ಸಹ ಅವರೊಂದಿಗೆ ವೃತ್ತಾಕಾರದಲ್ಲಿಯೇ ಕುಳಿತುಕೊಳ್ಳುತ್ತಾರೆ. ಇಲ್ಲಿ ಯಾರೂ ಕೊನೆಯ ಬೆಂಚಿನಲ್ಲಿ ಕುಳಿತುಕೊಳ್ಳುವುದಿಲ್ಲ. ಇಲ್ಲಿ ಯಾರೂ ನಾಯಕರಿಲ್ಲ. ಎಲ್ಲರೂ ಮುಂಭಾಗದಲ್ಲಿಯೇ ಇದ್ದಾರೆ. ಮಾತನಾಡುವ ವ್ಯಕ್ತಿಯು ಮುಂದಾಳತ್ವ ವಹಿಸುತ್ತಾನೆ ಹಾಗು ಪ್ರತಿಯೊಬ್ಬರಿಗೂ ಮಾತನಾಡುವ ಅವಕಾಶವಿರುತ್ತದೆ.

ನಂತರ ನಾವು ಇನ್ನೊಂದು ನಿಯಮವನ್ನು ರೂಪಿಸಿದೆವು: ಯಾರಾದರೂ ಒಬ್ಬರು ಮಾತನಾಡುವಾಗ ಉಳಿದವರು ಕೇಳಬೇಕು ಮತ್ತು ಆ ವ್ಯಕ್ತಿಯು ಮಾತನಾಡುವುದನ್ನು ಮುಗಿಸಿದ ನಂತರವೇ ಇತರರು ಮಾತನಾಡಬೇಕು. ಯಾರಾದರೂ ಒಬ್ಬರು ಮಾತ-ನಾಡುವಾಗ ಇತರರು ಆ ವ್ಯಕ್ತಿಯತ್ತ ನೋಡಬೇಕು. ಅನೇಕ ಜನರು ಮಾತನಾಡಲು ಇಚ್ಛಿಸಿದರೆ ಅವರು ತಮ್ಮ ಕೈಗಳನ್ನು ಎತ್ತಬೇಕು ಮತ್ತು ಸುಗಮಕಾರರು ಸರದಿಯಂತೆ ಪ್ರತಿಯೊಬ್ಬರಿಗೂ ಮಾತನಾಡಲು ಅವಕಾಶ ಮಾಡಿಕೊಡುತ್ತಾರೆ. ಇತರರನ್ನು ಕೇಳುವುದು ಈ ಆಸನ ವ್ಯವಸ್ಥೆಯ ಮುಖ್ಯ ಅನುಕೂಲತೆಯಾಗಿತ್ತು. ಯಾರಿಗಾದರೂ ಏನಾದರೂ ಹೇಳಲು ಅಥವಾ ಘೋಷಿಸಲು ಇದ್ದರೆ ಇದನ್ನು ವೃತ್ತದಲ್ಲಿಯೇ ಮಾಡಲಾಗುತ್ತಿತ್ತು. ನಿಧಾನವಾಗಿ, ಅಡ್ಡಿಪಡಿಸುವ ಘಟನೆಗಳು ಇಳಿಮುಖವಾಗುತ್ತಲೇ ಹೋದವು. ಇಲ್ಲಿ ಪುನರಾವರ್ತನೆಯಾದ ಮುಖ್ಯ ಅಂಶವೆಂದರೆ – ಆ ವ್ಯಕ್ತಿಯು ಮೊದಲಿಗೆ ಮುಗಿಸಲಿ ಎನ್ನುವುದು. ಯಾರಾದರೂ ಮಾತನಾಡಿಲ್ಲ ಎಂದು ತಂಡವು ಭಾವಿಸಿದರೆ ಆ ವ್ಯಕ್ತಿಯ ಅಭಿಪ್ರಾಯಕ್ಕಾಗಿ ಸದಸ್ಯರು ಬೆರಳು ತೋರಿಸುತ್ತಿದ್ದರು. ಈ ರೀತಿ ಎಲ್ಲರಿಗೂ ಮಾತನಾಡುವ ಅವಕಾಶವಿತ್ತು ಹಾಗು ಎಲ್ಲರೂ ಅವರನ್ನು ಕೇಳುತ್ತಿದ್ದಾರೆ ಎನ್ನುವ ಭಾವನೆಯು ಅತ್ಯಂತ ಪ್ರಮುಖ ವಿಚಾರ ಎನಿಸಿತು.

**ಜವಾಬ್ದಾರಿಯುತ ವ್ಯಕ್ತಿ**

ಆರಂಭದಲ್ಲಿ, ಕಾರ್ಯಾಗಾರದಲ್ಲಿ ಅವ್ಯವಸ್ಥೆ ಇತ್ತು. ಮಕ್ಕಳು ವಸ್ತುಗಳನ್ನು ಬಳಸಿ ಎಲ್ಲೆಡೆ ಬೇಕಾಬಿಟ್ಟಿಯಾಗಿ ಬಿಟ್ಟು ಹೋಗುತ್ತಿದ್ದರು. ಅವರು ಬಂದು ತಮ್ಮ ಚೀಲಗಳನ್ನು ಎಲ್ಲೆಂದರಲ್ಲಿ ಇಟ್ಟು ಬಿಡುತ್ತಿದ್ದರು. ಅವರಿಗೆ ಬೈಯ್ಯಲು ನಮಗೆ ಸಾಧ್ಯವಾಗುತ್ತಿರಲಿಲ್ಲ. ಮೆಲುದನಿಯಲ್ಲಿ ಹೇಳಿದರೆ ಅವರು ಕೇಳುತ್ತಿರಲಿಲ್ಲ. ನಾವು ಈ ವಿಷಯವನ್ನು ವೃತ್ತದೊಳಗೆ ತಂದೆವು. ನಾವು ಒಟ್ಟಾರೆ ವಸ್ತುಗಳನ್ನು ಎಸೆದರೆ ಏನಾಗುತ್ತದೆ, ಒಂದು ಸ್ಥಳವನ್ನು ಏಕೆ ಚೆನ್ನಾಗಿ ಇಡಬೇಕು ಮತ್ತು ಈ ವರ್ತನೆಯಿಂದ ಇತರರಿಗೆ ಹೇಗೆ ಅನನುಕೂಲತೆ ಉಂಟಾಗುತ್ತದೆ ಹಾಗು ನಾವು ಹೇಗೆ ಜವಾಬ್ದಾರಿಯಿಂದ ವರ್ತಿಸಬೇಕು ಎನ್ನುವ ಕುರಿತು ಚರ್ಚೆಯು ಕೇಂದ್ರೀಕರಿಸಿತ್ತು. ನಾವಾಗಿಯೇ ಇದನ್ನು ಅರಿತುಕೊಂಡು ಈ ಕೆಲಸವನ್ನು ಮಾಡಬೇಕು. ಬೇರೆ ಯಾರೋ ಹೇಳಿದರು ಎನ್ನುವ ಕಾರಣಕ್ಕೆ ಇದನ್ನು ಮಾಡುವುದಲ್ಲ. ಮಕ್ಕಳು ಇದನ್ನು ಅರ್ಥ ಮಾಡಿಕೊಂಡರು ಮತ್ತು ತಾವು ಬಳಸುವ ವಸ್ತುಗಳ ಕುರಿತು ಎಚ್ಚರಿಕೆ ವಹಿಸಿದರು. ಅವರು ತಮ್ಮ ಚಪ್ಪಲಿಗಳನ್ನು ತರಗತಿ ಕೊಠಡಿಯ ಹೊರಗೆ ಸಾಲಾಗಿ ಇಟ್ಟರು, ಬಣ್ಣದ ಬ್ರಶ್‌ಗಳನ್ನು ಬಳಸಿದ ನಂತರ ಸ್ವಚ್ಛಗೊಳಿಸಿದರು, ಕರಿಹಲಗೆಯನ್ನು ಒರೆಸಿದರು, ಸರಿಯಾದ ಸಮಯಕ್ಕೆ ಬಂದರು ಹಾಗು ಸಕಾಲದಲ್ಲಿ ತಮ್ಮ ಕೆಲಸವನ್ನು ಮುಗಿಸಿದರು. ನಿಧಾನವಾಗಿ, ಒಂದರ ನಂತರ ಒಂದರಂತೆ ಅವರ ವರ್ತನೆಯಲ್ಲಿ ಬದಲಾವಣೆ ಉಂಟಾಯಿತು. ಆರಂಭದಲ್ಲಿ, ಪರಸ್ಪರರ ಕುರಿತು ಸಾಕಷ್ಟು ದೂರುಗಳು ಬರುತ್ತಿದ್ದವು. ಆದರೆ ಮಕ್ಕಳು ಜವಾಬ್ದಾರಿಯುತವಾಗಿ ವರ್ತಿಸಲು ಪ್ರಾರಂಭಿಸಿದ ಕಾರಣ ದೂರುಗಳ ಸಂಖ್ಯೆಯಲ್ಲಿ ಇಳಿಮುಖವಾಯಿತು. ಅವರು ಪರಸ್ಪರ ಪರಿಣಾಮಕಾರಿಯಾಗಿ ನಿಭಾಯಿಸಿದರು.

**ಸಮುದಾಯದ ಸಂಪತ್ತುಗಳನ್ನು ರಕ್ಷಿಸುವುದು**

ಮಕ್ಕಳು ಸಾರ್ವಜನಿಕ ಸಂಪನ್ಮೂಲಗಳ ಕುರಿತು ಬಹುಮಟ್ಟಿಗೆ ಅಸಡ್ಡೆ ಹೊಂದಿದ್ದರು ಎಂಬುದನ್ನು ನಾವು ಗಮನಿಸಿದೆವು. ನೀರನ್ನು ಕುಡಿದು ಲೋಟವನ್ನು ಸರಿಯಾದ ಸ್ಥಳದಲ್ಲಿ ಇಡುತ್ತಿರಲಿಲ್ಲ, ಕ್ರೀಡಾ ಸಾಮಗ್ರಿಗಳನ್ನು ಬಳಸಿದ ನಂತರ ವಾಪಸ್ ತಂದು ಇಡುತ್ತಿರಲಿಲ್ಲ ಹಾಗು ಶೌಚಾಲಯವನ್ನು ಸ್ವಚ್ಛವಾಗಿ ಇಡುತ್ತಿರಲಿಲ್ಲ. ಸಾರ್ವಜನಿಕ ಸೊತ್ತಿನ ಕುರಿತು ನಾವು ಹೇಗೆ ಕಾಳಜಿ ವಹಿಸಬೇಕು ಎನ್ನುವ ಬಗ್ಗೆ ನಾವು ದೀರ್ಘವಾದ ಚರ್ಚೆಯನ್ನು ಮಾಡಿದೆವು. ಇತರರಿಗಾಗಿಯೂ

ನಾವು ಸ್ಥಳವನ್ನು ಸ್ವಚ್ಛವಾಗಿ ಇಡಬೇಕು ಎನ್ನುವ ಪ್ರಮುಖ ವಿಷಯವನ್ನು ಮಕ್ಕಳು ಅರ್ಥ ಮಾಡಿಕೊಂಡರು. ಪ್ರತಿ ಬಾರಿಯೂ ನಾವು ಒಂದು ಪ್ರಶ್ನೆಯನ್ನು ಕೇಳುತ್ತಿದ್ದೆವು: ನಾವು ಬಳಸಿದ ಸ್ಥಳವನ್ನು ಇತರರು ನಂತರ ಬಳಸುವಂತೆಯೇ ಬಿಟ್ಟು ಹೋಗುತ್ತಿದ್ದೇವೆಯೇ? ಇದಕ್ಕಾಗಿ ಸಾಕಷ್ಟು ಶ್ರಮ ಹಾಕಬೇಕಾಯಿತು. ಮಕ್ಕಳು ಇದನ್ನು ಅಷ್ಟು ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತಿರಲಿಲ್ಲ ಅಥವಾ ಮರೆತು ಬಿಡುತ್ತಿದ್ದರು. ಮೆಲ್ಲನೆ ಅವರು ಅದನ್ನು ಮಾಡಲು ಪ್ರಾರಂಭಿಸಿದರು. ಅತ್ಯಂತ ಪರಿಣಾಮಕಾರಿ ಎನಿಸಿದ ಪ್ರಗತಿ ಏನೆಂದರೆ, ಏನೆಲ್ಲ ಮಾಡಬೇಕು ಎನ್ನುವುದನ್ನು ಮಕ್ಕಳು ಪರಸ್ಪರರ ಗಮನ ಸೆಳೆಯಲು ಪ್ರಾರಂಭಿಸಿದರು. ಮಕ್ಕಳು ಸಾರ್ವಜನಿಕ ಸ್ಥಳಗಳು ಮತ್ತು ಸಮುದಾಯದ ಸೊತ್ತುಗಳ ಕಾಳಜಿ ವಹಿಸಲು ಕಲಿತುಕೊಂಡರು.

**ಚರ್ಚೆಯ ಮೂಲಕ ಸಮಸ್ಯೆಗಳನ್ನು ಪರಿಹರಿಸುವುದು**

ಮಕ್ಕಳ ನಡುವೆ ಜಗಳ ಉಂಟಾಗುವುದು ಸಾಮಾನ್ಯ ವಿಷಯವಾಗಿತ್ತು. ತೀರಾ ಕ್ಷುಲ್ಲಕ ವಿಚಾರಗಳಿಗಾಗಿ ಅವರು ಜಗಳ ಮಾಡುತ್ತಿದ್ದರು. ಕೆಲವೊಮ್ಮೆ ಸಣ್ಣ ವಿಷಯಗಳಿಗಾಗಿ ದೊಡ್ಡ ಜಗಳವೇ ಉಂಟಾಗುತ್ತಿತ್ತು. ಅಪರೂಪಕ್ಕೆ ಮಕ್ಕಳು ಶಿಕ್ಷಕರ ಜೊತೆಗೂ ಜಗಳವಾಡುತ್ತಿದ್ದರು. ನಾವು ಈ ಕುರಿತು ಏನನ್ನಾದರೂ ಮಾಡಲು ಇಚ್ಛಿಸಿದ್ದೆವು. ಏಕೆಂದರೆ ಜಗಳ ಮಾಡದಂತೆ ನಾವು ಅವರನ್ನು ವಿನಂತಿಸಿದಾಗ ಅವರು ಒಪ್ಪಿಕೊಳ್ಳುತ್ತಿದ್ದರು. ಆದರೆ ತಕ್ಷಣವೇ ಏನಾದರೂ ಒಂದು ಪ್ರಚೋದನೆ ಉಂಟಾಗಿ ಮತ್ತೆ ಜಗಳವಾಡುತ್ತಿದ್ದರು. ನಂತರ ಪ್ರತಿಯೊಂದರ ಕುರಿತು ವೃತ್ತಾಕಾರದಲ್ಲಿ ಕುಳಿತು ಮಾತನಾಡುವ ಪ್ರಕ್ರಿಯೆಯನ್ನು ನಾವು ಪ್ರಾರಂಭಿಸಿದೆವು. ಮಕ್ಕಳು ಗಮನವಿಟ್ಟು ಕೇಳುತ್ತಿದ್ದರು ಹಾಗು ವೃತ್ತದಲ್ಲಿ ಏನನ್ನು ನಿರ್ಧರಿಸಲಾಗುತ್ತದೆಯೋ ಅದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಪ್ರತಿಯೊಬ್ಬರ ಅಭಿಪ್ರಾಯವನ್ನು ಆಲಿಸಲಾಯಿತು ಹಾಗು ಪ್ರತಿಯೊಬ್ಬರ ಸಮ್ಮತಿಯೊಂದಿಗೆ ಒಂದು ನಿರ್ಧಾರವನ್ನು ತೆಗೆದುಕೊಳ್ಳಲಾಯಿತು. ಅವರು ಇದಕ್ಕೆ ಬದ್ಧರಾಗಬೇಕಾಗಿತ್ತು. ಯಾವುದೇ ಸಂಘರ್ಷ, ವಿಚಾರ ಅಥವಾ ಸಮಸ್ಯೆಯನ್ನು ವೃತ್ತಕ್ಕೆ ತಂದು, ಚರ್ಚಿಸಿ ಪರಿಹರಿಸಲಾಗುತ್ತಿತ್ತು. ಸಂವಾದಕ್ಕೆ ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಇದನ್ನು ಅನುಸರಿಸುವುದು ಮಕ್ಕಳ ಪಾಲಿಗೆ ಅತ್ಯಂತ ಕಷ್ಟಕರ ಕೆಲಸವಾಗಿತ್ತು. ಸಂಘರ್ಷವು ಉಂಟಾದಾಗ ಅವರು ತಕ್ಷಣವೇ ಜಗಳವಾಡುತ್ತಿದ್ದರು ಮತ್ತು ಪರಿಹರಿಸುತ್ತಿದ್ದರು. ಆದರೆ ಸಂವಾದವನ್ನು ನಡೆಸಲು ನಾವು ನಿರಂತರವಾಗಿ ಒತ್ತಾಯಿಸಿದ ಕಾರಣ, ಪರಸ್ಪರ ಜಗಳವಾಡುವ ಬದಲು ಒಲ್ಲದ ಮನಸ್ಸಿನಿಂದ ಪರಸ್ಪರ ಮಾತನಾಡಲು ಪ್ರಾರಂಭಿಸಿದರು. ಕೆಲ ಸಮಯದ ನಂತರ, ಸಮಸ್ಯೆಯನ್ನು ಪರಿಹರಿಸುವ ವಿಧಾನವಾಗಿ ಮಕ್ಕಳು ಸಂವಾದವನ್ನು ಬಳಸಿಕೊಳ್ಳಲು ಪ್ರಾರಂಭಿಸಿದರು. ಮತ್ತೆ ಏನಾಯಿತು ಎಂದರೆ, ಎರಡು ಮಕ್ಕಳು ಪರಸ್ಪರ ಮಾತ–ನಾಡುವುದನ್ನು ಬಿಟ್ಟು ಜಗಳವಾಡಲು ಪ್ರಾರಂಭಿಸಿದಾಗ ಇತರ ಮಕ್ಕಳು ಮಧ್ಯಪ್ರವೇಶಿಸುತ್ತಿದ್ದರು ಹಾಗು ಚರ್ಚೆಯ ಮೂಲಕ ಸಮಸ್ಯೆಯನ್ನು ಪರಿಹರಿಸುವಂತೆ ಮಾಡುತ್ತಿದ್ದರು. ಇದು ಸಂಪೂರ್ಣವಾಗಿ ಯಶಸ್ವಿಯಾಗದೆ ಇದ್ದರೂ, ಒಂದಷ್ಟು ಮಟ್ಟಿಗೆ ಮಕ್ಕಳು ಸಂವಾದವನ್ನು ಒಪ್ಪಿಕೊಳ್ಳುವಂತೆ ಮಾಡಿದೆವು. ಈ ಸೃಜನಶೀಲತೆ ಕಾರ್ಯಾಗಾರವನ್ನು ನಾವು ಅನೇಕ ವರ್ಷಗಳ ಕಾಲ ನಡೆಸಿದೆವು. ನಾವು ಎಲ್ಲಾ ಶಾಲೆಗಳಲ್ಲಿ ಯಶಸ್ಸು ಸಾಧಿಸಿದ್ದೇವೆ ಎಂದು ಹೇಳಲಾಗದು. ಅಲ್ಪಾವಧಿಗೆ ನಾವು ಸೃಜನಶೀಲತೆ ಕಾರ್ಯಾಗಾರವನ್ನು ನಡೆಸಿದ ಶಾಲೆಗಳಲ್ಲಿ ಈ ವಿಧಾನವು ಯಶಸ್ವಿಯಾಗಿಲ್ಲ. ಆದರೆ ನಾವು ಮತ್ತೆ ಹೋಗಿ ಈ ಕಾರ್ಯವನ್ನು ನಿರಂತರವಾಗಿ ಮಾಡಿದಾಗ ಈ ಪ್ರಕ್ರಿಯೆಯು ಸಂಪೂರ್ಣವಾಗಿ ಅಲ್ಲದಿದ್ದರೂ ಬಹುಮಟ್ಟಿಗೆ ಯಶಸ್ವಿಯಾಯಿತು.

**ಫಲಿತಾಂಶಗಳು**

ಈ ಪ್ರಕ್ರಿಯೆಯು ಯಶಸ್ವಿಯಾದ ಶಾಲೆಗಳಲ್ಲಿ, ತಮ್ಮನ್ನು ಜವಾಬ್ದಾರಿಯುತ ನಾಗರಿಕರಾಗಿ ರೂಪಿಸುವ ಕೆಲವು ಸಂಪ್ರದಾಯಗಳನ್ನು ಮಕ್ಕಳು ಅನುಸರಿಸುವುದನ್ನು ನಾವು ನೋಡಿದೆವು. ಸಮಾನತೆಯ ಭಾವನೆಯು ಇದರಲ್ಲಿ ಪ್ರಮುಖವಾಗಿತ್ತು ಹಾಗು ಒಮ್ಮೆ ಮನವರಿಕೆಯಾದ ನಂತರ ಮಕ್ಕಳು ಇದನ್ನು ಚೆನ್ನಾಗಿ ಅನುಸರಿಸಿದರು. ವೃತ್ತದ ಪರಿಕಲ್ಪನೆಯೂ ಚೆನ್ನಾಗಿ ಕೆಲಸ ಮಾಡಿತು. ಏಕೆಂದರೆ ಮಕ್ಕಳು ವೃತ್ತಾಕಾರದಲ್ಲಿ ಕುಳಿತುಕೊಳ್ಳುವುದನ್ನು ಇಷ್ಟಪಟ್ಟರು ಹಾಗು ವೃತ್ತದಲ್ಲಿರುವ ಪ್ರತಿಯೊಬ್ಬರೂ ಮಾತನಾಡಲು ಪ್ರಾರಂಭಿಸಿದರು. ಈ ಪ್ರಕ್ರಿಯೆಯಲ್ಲಿ ಗಮನಿಸಬೇಕಾದ ಅತ್ಯಂತ ಪ್ರಮುಖ ಅಂಶವೆಂದರೆ ಪರಸ್ಪರರ ಅಭಿಪ್ರಾಯವನ್ನು ಕೇಳುವುದು. ಇದು ಮಕ್ಕಳಲ್ಲಿ ನಾವು ಸಾಧಿಸಿದ ಅತ್ಯಂತ ಯಶಸ್ವಿ ಗುಣಸ್ವಭಾವವಾಗಿದೆ ಎಂದು ನಾವು ಭಾವಿಸಿದ್ದೇವೆ. ಜವಾಬ್ದಾರಿಯುತವಾಗಿ ವರ್ತಿಸುವುದು ಮತ್ತು ಸಮುದಾಯದ ಸಂಪನ್ಮೂಲಗಳನ್ನು ರಕ್ಷಿಸುವುದು – ಈ ಎರಡು ಅಂಶಗಳನ್ನು ಮಕ್ಕಳು ಮೆಲ್ಲನೆ ಅರ್ಥ ಮಾಡಿಕೊಂಡರು ಹಾಗು ಒಂದಷ್ಟು ಮಟ್ಟಿಗೆ ಅನುಸರಿಸುವಲ್ಲಿ ಯಶಸ್ವಿಯಾದರು. ಯಾರಾದರೂ ಒಬ್ಬ ವಿದ್ಯಾರ್ಥಿ/ನಿ ಮರೆತು ಬಿಟ್ಟರೆ ಉಳಿದ ವಿದ್ಯಾರ್ಥಿಗಳು ಆತನಿಗೆ/ಆಕೆಗೆ ನೆನಪಿಸುತ್ತಿದ್ದುದು ಇಲ್ಲಿನ ಪ್ರಮುಖ ಚಾಲಕ ಶಕ್ತಿಯಾಗಿತ್ತು. ಯಾರಿಗೆ ನೆನಪಿಸಲಾಗಿದೆಯೋ ಅವರು ಯಾವುದೇ ಪ್ರತಿರೋಧ ತೋರದೆ ಅದನ್ನು ಮಾಡುತ್ತಿದ್ದರು. ಮಕ್ಕಳನ್ನು ಸಂವಾದದಲ್ಲಿ ತೊಡಗುವಂತೆ ಮಾಡುವುದು ಕಾರ್ಯಾಗಾರಗಳ ಅತ್ಯಂತ ಸವಾಲಿನ ಭಾಗವಾಗಿತ್ತು. ಮಕ್ಕಳು ಏಕೋ ಈ ಪ್ರಕ್ರಿಯೆಯ ಪ್ರಾಮುಖ್ಯತೆಯನ್ನು ಅರಿತುಕೊಳ್ಳಲಿಲ್ಲ. ಈ ಪ್ರಕ್ರಿಯೆಯಲ್ಲಿ ನಾವು ಕೂಡ ಸಾಕಷ್ಟು ಹೆಣಗಾಡಿದೆವು. ಹೀಗಾಗಿ ಸಂವಾದವು ತೀರಾ ಕಡಿಮೆ ಪರಿಣಾಮಕಾರಿ ಎನಿಸಿತು. ನಾವು ಈ ವಿಚಾರದಲ್ಲಿ ಇನ್ನಷ್ಟೇ ಹಿಡಿತ ಸಾಧಿಸಬೇಕಿದೆ. ಸೃಜನಶೀಲತೆ ಕಾರ್ಯಾಗಾರ ಮತ್ತು ಪೌರತ್ವ ಶಿಕ್ಷಣದ ಅನುಭವವು ನಮ್ಮ ಪಾಲಿಗೂ ಕಲಿಕೆಯ ಅದ್ಭುತ ಮೂಲ ಎನಿಸಿತು. ಪೌರತ್ವ ಶಿಕ್ಷಣವನ್ನು ಅಲ್ಪಾವಧಿಯಲ್ಲಿ ಕಲಿಸಲು ಆಗದು. ಇದನ್ನು ನಿರಂತರವಾಗಿ ಮತ್ತು ಪುನರಾವರ್ತಿತವಾಗಿ ಮಾಡಬೇಕು. ಬೇರೆಬೇರೆ ಗುಂಪುಗಳಲ್ಲಿ ಬೇರೆಬೇರೆ ವಿಚಾರಗಳು/ಪರಿಕಲ್ಪನೆಗಳು ಕೆಲಸ ಮಾಡುತ್ತವೆ. ಯಾವುದು ಯಶಸ್ವಿಯಾಗುತ್ತದೆ ಮತ್ತು ಯಾವುದು ಯಶಸ್ವಿಯಾಗುವುದಿಲ್ಲ ಎನ್ನುವುದಕ್ಕೆ ಯಾವುದೇ ಸಿದ್ಧ ಮಾದರಿ ಇಲ್ಲ. ಸುಗಮಕಾರರು ಉತ್ತೇಜನೆಯ ಪ್ರಮುಖ ಮೂಲ ಎನಿಸುತ್ತಾರೆ. ಸುಗಮಕಾರರು ತಾನು ಪ್ರತಿಪಾದಿಸುತ್ತಿರುವುದನ್ನು ಪಾಲಿಸದೆ ಇದ್ದರೆ ಉದ್ದೇಶವು ಯಶಸ್ವಿಯಾಗುವುದಿಲ್ಲ. ಹೀಗಾಗಿ ಮಕ್ಕಳೊಂದಿಗೆ ನಿರಂತರವಾಗಿ ಇರುವುದು, ಪ್ರಜಾತಾಂತ್ರಿಕ ಬದುಕಿನ ಈ ಕಲ್ಪನೆಗಳನ್ನು ಅನುಸರಿಸುವುದು ಮತ್ತು ಅವರಿಗೂ ಜ್ಞಾಪಿಸುವುದು ಹಾಗು ಅವರಿಗೆ ತೋರಿಸಿಕೊಡುವುದು ಅವರು ಇವನ್ನೆಲ್ಲ ಮೈಗೂಡಿಸಿಕೊಳ್ಳಲು ಇರುವ ಏಕೈಕ ದಾರಿಯಾಗಿದೆ.



**ಉಮಾಶಂಕರ ಪೆರಿಯೋಡಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಶನ್‌ನ ಕರ್ನಾಟಕ ರಾಜ್ಯದ ಮುಖ್ಯಸ್ಥರಾಗಿದ್ದಾರೆ. ಅಭಿವೃದ್ಧಿ ಅಧ್ಯಯನ ಕ್ಷೇತ್ರದಲ್ಲಿ ಅವರಿಗೆ ಮೂವತ್ತು ವರ್ಷಕ್ಕೂ ಮಿಕ್ಕಿದ ಅನುಭವವಿದೆ. ಅವರು ರಾಷ್ಟ್ರೀಯ ಸಾಕ್ಷರತಾ ಅಭಿಯಾನ (National Literacy Campaign) ಮತ್ತು ಕರ್ನಾಟಕದ ಬಿ.ಆರ್. ಬೆಟ್ಟದ ಬುಡಕಟ್ಟು ಶಿಕ್ಷಣ ವಿಚಾರದಲ್ಲಿ ವಿಶೇಷ ಕೊಡುಗೆ ನೀಡಿದ್ದಾರೆ. 'ಬರಿಗಾಲ ಸಂಶೋಧನೆ' ಎಂದು ಅವರೇ ಕರೆದುಕೊಳ್ಳುವಂತೆ ತಳ ಹಂತದ ಕ್ಷೇತ್ರ ಕಾರ್ಯಕರ್ತರು ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿ ನೀಡುತ್ತಿದ್ದಾರೆ. ಅವರು ಕರ್ನಾಟಕ ರಾಜ್ಯ ಶಿಕ್ಷಕರ ಸಮುದಾಯದ ಸಂಸ್ಥಾಪಕ ಸದಸ್ಯರು. ಅವರನ್ನು eriodi@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಕುಶಾಲ್** । ಪರಿಶೀಲನೆ: **ನಾಗಮಣಿ ಎಸ್.ಎನ್.**

ಲರ್ನಿಂಗ್ ಕರ್ವ್‌ನ ಹಿಂದಿನ ಸಂಚಿಕೆಗಳನ್ನು ಈ ಕೆಳಗಿನ ಲಿಂಕ್‌ಗಳಲ್ಲಿ ಡೌನ್‌ಲೋಡ್ ಮಾಡಬಹುದು
https://azimpremjiuniversity.edu.in/learning-curve

ಸಲಹೆಗಳು ಅಥವಾ ಅನಿಸಿಕೆ ಮತ್ತು ನಿಮ್ಮ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳಲು, ನಮಗೆ ಬರೆಯಿರಿ
**learningcurve@apu.edu.in**

**ಮುದ್ರಣ ಮತ್ತು ಪ್ರಕಟಣೆ: ಮನೋಜ್ ಪಿ, ಅಜೀಂ ಪ್ರೇಮ್‌ಜಿ ಫೌಂಡೇಷನ್ ಫಾರ್ ಡೆವಲಪ್‌ಮೆಂಟ್ ಪರವಾಗಿ**
**ಮುದ್ರಣ**: ರಮ್ಯಾ ರಿಪ್ರೋಗ್ರಾಫಿಕ್ ಪ್ರೈ ಲಿಮಿಟೆಡ್, ಸರ್ವೇ ನಂ. 16/2ಬಿ, ಸಿಂಗಸಂದ್ರ ಗ್ರಾಮ, ಎಇಸಿಎಸ್ ಲೇಔಟ್,
ದಕ್ಷಿಣ್ ಹೋಂಡಾ ಹಿಂಭಾಗ, ಹೊಸೂರು ರಸ್ತೆ, ಬೆಂಗಳೂರು – 560068 ಕರ್ನಾಟಕ
**ಪ್ರಕಟಣೆ:** ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಸರ್ವೇ ನಂ. 66, ಬುರುಗುಂಟೆ ಗ್ರಾಮ,
ಬಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ, ಬೆಂಗಳೂರು – 562125

**ಪ್ರೇಮಾ ರಘುನಾಥ್,** ಮುಖ್ಯ ಸಂಪಾದಕಿ, ಲರ್ನಿಂಗ್ ಕರ್ವ್

# ಪೌರತ್ವಕ್ಕಾಗಿ ಶಿಕ್ಷಣ

ಕುರಿತ ನಮ್ಮ ಮುಂದಿನ
ಸಂಚಿಕೆಯನ್ನು ನಿರೀಕ್ಷಿಸಿ.

**ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ**
ಸರ್ವೇ ನಂ. 66, ಬುರುಗುಂಟೆ ಗ್ರಾಮ,
ಚಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ
ಬೆಂಗಳೂರು–562125

ದೂರವಾಣಿ: 080-66144900
www.azimpremjiuniversity.edu.in

ಫೇಸ್‌ಬುಕ್: /azimpremjiuniversity
ಇನ್‌ಸ್ಟಾಗ್ರಾಂ: @azimpremjiuniv
ಟ್ವಿಟರ್: @azimpremjiuniv